# ಸಂಗ್ರಾಮ

## ೧

ಉತ್ಸಾಹ, ಸಡಗರ, ಸಂತೋಷ ಕೇವಲ ಶಾಲೆಗೇ ಅಡಕವಾಗಿರಲಿಲ್ಲ; ಊರಿಗೂ ವ್ಯಾಪಿಸಿತ್ತು. ಊರಮಕ್ಕಳ ಹಬ್ಬದ ವಿಜೃಂಭಣೆಯಲ್ಲಿ ಊರಿನವರೂ ತುಂಬುಮನಸ್ಸಿನಿಂದ ಭಾಗವಹಿಸಿದ್ದರು.

ಮಿಡ್ಲಸ್ಕೂಲ್ ಆವರಣ ಬಾಳೆಯ ಕಂದುಗಳು, ಹಸಿರುವಾಣಿಯ ಚಪ್ಪರ, ತಳಿರು ತೋರಣಗಳಿಂದ ತುಂಬಿಹೋಗಿತ್ತು. ಸಾಲುಮರದ ಹೂಗಳೆಲ್ಲಾ ಚಪ್ಪರದ ಅಲಂಕಾರಕ್ಕೆ ವಿನಿಯೋಗವಾಗಿತ್ತು. ಶಾಲೆಯ ಮೇಲೆ ಮೈಸೂರು ಬಾವುಟ ಮೆರೆದಾಡುತ್ತಿತ್ತು.

ಸಭೆಯ ಕಾರ್ಯಕ್ರಮ ಆರು ಗಂಟೆಗೆಂದು ಡಂಗುರ ಸಾರಿಸಲಾಗಿತ್ತು. ಐದು ಗಂಟೆಗೇ ಜನ ಕಿಕ್ಕಿರಿದು ತುಂಬಿದ್ದರು. ದೊಡ್ಡವರು, ಚಿಕ್ಕವರು, ಹೆಂಗಸರು, ಮಕ್ಕಳು ಎಲ್ಲರೂ ಉತ್ಸವದಲ್ಲಿ ಭಾಗಿಗಳಾಗಿದ್ದರು.

ಎಲ್ಲ ವ್ಯವಸ್ಥೆಯನ್ನೂ ನೋಡಿಕೊಂಡು, ಊರಿನ ಹಿರಿಯರನ್ನು ಸ್ವಾಗತಿಸುತ್ತಾ, ಹೂ ಕೀಳುತ್ತಿದ್ದ ಹುಡುಗರನ್ನು ಗದರಿಸುತ್ತಾ ಸರ್ವವ್ಯಾಪಿಯಾಗಿದ್ದವರು ಹೆಡ್‌ಮಾಸ್ಟರ್ ಮಾದಯ್ಯನವರು. ಉತ್ಸವದ ಸಡಗರದ ಜತೆಗೆ 'ಇನಿಸ್ಪೆಕ್ಟರು' ಬರುವ ಸಂಭ್ರಮವೂ ಸೇರಿ ಮಾದಯ್ಯನವರ ಲವಲವಿಕೆಗೆ ವಿರಾಮವೇ ಇಲ್ಲವಾಯಿತು.

ಗುಂಜೂರಿನಂಥ ಕುಗ್ರಾಮಕ್ಕೆ 'ಇನಿಸ್ಪೆಕ್ಟರು' ಬರುವುದೆಂದರೆ ಹೆಚ್ಚಿನ ಮಾತಲ್ಲವೇ? ಮಾದಯ್ಯನವರು ಬಹು ಪ್ರಯಾಸದಿಂದ 'ಶ್ರೀ ವಿನಾಯಕ

ಮಂಗಳಾರತಿ ಮತ್ತು ಸ್ಕೂಲ್ ಡೇ ' ಉತ್ಸವದ ಅಧ್ಯಕ್ಷತೆ ವಹಿಸಲು ಇನ್ಸ್ಪೆಕ್ಟರ್ ರಾಮನಾಥಯ್ಯನವರನ್ನು ಒಪ್ಪಿಸಿಕೊಂಡು ಬಂದಿದ್ದರು.

ರಾಮನಾಥಯ್ಯನವರು ಸಕಾಲಕ್ಕೆ ಗುಂಜೂರಿಗೆ ಬಂದಿಳಿದು ಮುಸಾಫಿರ್ ಖಾನೆಯಲ್ಲಿ ಬೀಡುಬಿಟ್ಟರು. ಅವರ ಆತಿಥ್ಯದ ವ್ಯವಸ್ಥೆಯನ್ನು ಮಾದಯ್ಯ ಅಚ್ಚುಗಟ್ಟಾಗಿ ಮಾಡಿದ್ದರು.

ಉತ್ಸವಕ್ಕೆ ಆಮಂತ್ರಿತರಾಗಿದ್ದವರೆಲ್ಲಾ ಬಂದಿದ್ದರು. ಮಾದಯ್ಯನವರು ವೇದಿಕೆಯ ಮೇಲೆ ಮೇಜು, ಕುರ್ಚಿ ಹಾಕಿಸಿ ವಾಲಗ ತೆಗೆದುಕೊಂಡು ಮುಸಾಫಿರ್ ಖಾನೆಗೆ ಹೋದರು. ಅಧ್ಯಕ್ಷರನ್ನು ವಾದ್ಯಸಮೇತ ಸಭಾಭವನಕ್ಕೆ ಕರೆತಂದುದೂ ಆಯಿತು.

ಇಬ್ಬರು ಹೆಣ್ಣುಮಕ್ಕಳ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಆರಂಭವಾಯಿತು. ಮಾದಯ್ಯನವರು ಸ್ವಾಗತ ಭಾಷಣ ಮಾಡಿ ' ಮೆಹರ್ಬಾನ್ ಇನ್ಸ್ಪೆಕ್ಟರ್ ಸಾಹೇಬರ ' ಕಲ್ಯಾಣ ಗುಣಗಳನ್ನೆಲ್ಲಾ ಆಮೂಲಾಗ್ರವಾಗಿ ವರ್ಣಿಸಿ, ಮುಂದಿನ ಕಾರ್ಯಕ್ರಮ ನಡೆಸಿಕೊಡಲು ಅವರನ್ನು ಬೇಡಿಕೊಂಡರು. ಅಧ್ಯಕ್ಷರು ಪ್ರಾಸ್ತಾವಿಕವಾಗಿ ನಾಲ್ಕು ಮಾತು ಆಡಿ ಸಂಗೀತದ ಮೇಷ್ಟ್ರು ನೀಲಕಂಠಪ್ಪನವರನ್ನು ಸಂಗೀತಕ್ಕೆ ಆಹ್ವಾನಿಸಿದರು.

' ವಿಡಮುಸೇಯಮೆ '–' ವರಮುಲ ಸಖಿ '–' ನೀಪಾದ ಪಂಕಜಮು '–' ರಘುವಂಶ ಸುಧಾ ' ಕೀರ್ತನೆಗಳನ್ನು ತಾಳಮೇಳವಿಲ್ಲದಿದ್ದರೂ ಹೆದರದೆ ನೀಲಕಂಠಪ್ಪ ಹಾಡತೊಡಗಿದರು.

ಬೆಂಗಳೂರು, ಮೈಸೂರುಗಳಲ್ಲಿ ಒಳ್ಳೆಯ ಸಂಗೀತ ಕಛೇರಿಗಳನ್ನು ಕೇಳಿದ್ದ ರಾಮನಾಥಯ್ಯನವರ ಕಿವಿಗಳಿಗೆ ನೀಲಕಂಠಪ್ಪ ಹಾಡುಗಾರಿಕೆ ಕರ್ಕಶವಾಗಿ ಕಂಡುಬಂದರೂ, ಊರಿನವರು ತಲೆದೂಗುತ್ತಿದ್ದರು. ನೀಲಕಂಠಪ್ಪನವರನ್ನು ನಿಲ್ಲಿಸೆಂದು ಹೇಳಲು ರಾಮನಾಥಯ್ಯನವರಿಗೆ ಧೈರ್ಯವಾಗಲಿಲ್ಲ.

ಈ ಸಂಗೀತ ಅನುಭವಿಸದೆ ವಿಧಿಯೇ ಇರಲಿಲ್ಲ. ಚಿತ್ತವನ್ನಾದರೂ ಬೇರೆ ಕಡೆಗಿಟ್ಟು ಶ್ರವಣೇಂದ್ರಿಯವನ್ನು ಬಂಧಿಸಿ ಸಂಗೀತ ಕೇಳುವುದೊಂದೇ ಮಾರ್ಗ ಇನ್ಸ್ಪೆಕ್ಟರಿಗೆ ಉಳಿದುದು. ಶ್ರಾವಕ ಸಮುದಾಯವನ್ನು ಸ್ವಲ್ಪ ಹೊತ್ತು ನೋಡಿ, ವೇದಿಕೆಯ ಮಧ್ಯೆ ಇದ್ದ ಗಣೇಶಮಂಟಪವನ್ನು ನೋಡುತ್ತ

ಕುಳಿತರು.

ಗಣೇಶಮಂಟಪ ಊರಿನವರ ಕಲಾಕೌಶಲ್ಯದ ದ್ಯೋತಕವಾಗಿತ್ತು ಬಗೆಬಗೆಯ ಬಣ್ಣದ ಕಾಗದ ಹಚ್ಚಿ, ಗುನ್ನಂಪಟ್ಟಿ ಬಳಿದ ಕಾಗದದ ಮಂಟಪ ದಲ್ಲಿ ಗಣಪ್ಪ ಭದ್ರವಾಗಿ ಕುಳಿತಿದ್ದ. ಮಂಟಪ ನಾಲ್ಕುವರೆ ಅಡಿ; ಅದರೊಳ ಗಿದ್ದ ಗಣಪತಿ ಎರಡೂವರೆ ಅಡಿ. ಗಣಪ್ಪನನ್ನು ನೋಡುತ್ತ ನೋಡುತ್ತ ರಾಮನಾಥಯ್ಯನವರ ಕುತೂಹಲ ಕೆರಳಿತು. ಗಣಪ್ಪನನ್ನು ಕಡೆದಿದ್ದ ಕೈ ಕಲಾವಿದನ ಕೈಯಾಗಿತ್ತು. ಗಣಪ್ಪನನ್ನು ಕಡೆದ ಶಿಲ್ಪಿಯ ಬಗ್ಗೆ ಕೇಳಿ ತಿಳಿದು ಕೊಳ್ಳಬೇಕೆಂದು ರಾಮನಾಥಯ್ಯ ಮಾದಯ್ಯನವರ ಕಡೆ ತಿರುಗುವಷ್ಟರಲ್ಲಿ ಸಂಗೀತ ಮುಕ್ತಾಯವಾಯಿತು.

ಮಾದಯ್ಯನವರು ಶಾಲಾವರದಿಯನ್ನೊಪ್ಪಿಸಿ 'ಮೆಹರ್ಬಾನ್ ಅಧ್ಯಕ್ಷರು ಬಹಮಾನ ವಿನಿಯೋಗ' ಮಾಡಬೇಕೆಂದು ಪ್ರಾರ್ಥಿಸಿದರು. ಶಾಲೆಯ ಉಪಾ ಧ್ಯಾಯರೊಬ್ಬರು ಬಹುಮಾನ ಪಡೆದವರ ಹೆಸರುಗಳನ್ನೋದಲಾರಂಭಿಸಿದರು. ಇನ್ನೊಬ್ಬ ಉಪಾಧ್ಯಾಯರು ಸೋಪು, ಬಾಚಣಿಗೆ, ಕನ್ನಡಿ, ಕುಂಕುಮದ ಭರಣಿ, ಸೇಫ್ಟಿ ಪಿನ್ನು, ಪುಸ್ತಕಗಳನ್ನೆತ್ತಿ ಅಧ್ಯಕ್ಷರ ಕೈಯಲ್ಲಿಡುತ್ತ ಬಂದರು.

'ಈರಪ್ಪ — ರನ್ನಿಂಗ್ – ಫಸ್ಟ್ ಪ್ರೈಸ್.'

'ಬೋರ — ಪುಟ್ಟಿಂಗ್ ದಿ ವೆಯ್ಟ್ – ಫಸ್ಟ ಪ್ರೈಸ್.

'ಕೃಷ್ಣಮೂರ್ತಿ — ಗುಡ್ ಕಾಂಡಕ್ಟ್.'

'ಬಸವರಾಜು — ಆಶುಭಾಷಣ – ಫಸ್ಟ ಪ್ರೈಸ್.'

ವಿದ್ಯಾರ್ಥಿಗಳು ಒಬ್ಬೊಬ್ಬರಾಗಿ ಬಂದು ಬಣ್ಣದ ಕಾಗದದಲ್ಲಿ ಸುತ್ತಿಟ್ಟಿದ್ದ ಬಹುಮಾನಗಳನ್ನು ಸ್ವೀಕರಿಸಿ ಹೋಗುತ್ತಿದ್ದರು. ಪಟ್ಟಿ ಮುಗಿಯುತ್ತ ಬಂದಿತ್ತು. ಕೊನೆಯದಾಗಿ ಮೇಷ್ಟರು

'ಶ್ರೀಕಂಠಮೂರ್ತಿ – ಗಣಪತಿ ಮೂರ್ತಿ ಮಾಡಿದ್ದಕ್ಕೆ –
ಸ್ಪೆಷಲ್ ಪ್ರೈಸ್'

ಎಂದರು. ಇತರ ವಿದ್ಯಾರ್ಥಿಗಳಂತೆ ಶ್ರೀಕಂಠಮೂರ್ತಿ ಕೂಡಲೇ ವೇದಿ ಕೆಗೆ ಬರಲಿಲ್ಲ. ಜನ 'ಶ್ರೀಕಂಠ – ಶ್ರೀಕಂಠ' ಎಂದು ಕೂಗಿದರು.

ಹರಕು ನೀಲಿ ಚಡ್ಡಿ, ಎದೆಯ ಮೇಲೆ ಹರಿದು ಹೋಗಿದ್ದ ಷರ್ಟು, ತಲೆಯ ಮೇಲೆ ಒಂದು ಕಾಲದಲ್ಲಿ ಕೆಂಪು ಬಣ್ಣ ತಳೆದಿದ್ದ ಹಾಸನದ ಟೋಪಿ

ಧರಿಸಿದ್ದ ಶ್ರೀಕಂಠಮೂರ್ತಿಯನ್ನು ಅವನ ಗೆಳೆಯರು ವೇದಿಕೆಯ ಕಡೆಗೆ ನೂಕುತ್ತಿದ್ದರು.

ಶ್ರೀಕಂಠಮೂರ್ತಿ ವೇದಿಕೆಯ ಮೇಲೆ ಬರಲು ಅವನನ್ನೇ ಎವೆಯಿಕ್ಕದೆ ರಾಮನಾಥಯ್ಯನವರು ನೋಡಿ

" ಗಣಪತಿ ನೀನು ಮಾಡಿದೆಯಾ ಶ್ರೀಕಂಠಮೂರ್ತಿ " ಎಂದರು.

ಶ್ರೀಕಂಠಮೂರ್ತಿ ನಾಚಿ ಕತ್ತು ತಗ್ಗಿಸಿದ. ಮಾದಯ್ಯ

" ಸಾಹೇಬರು ಕೇಳಿದ್ದಕ್ಕೆ ಧೈರ್ಯವಾಗಿ ಉತ್ತರ ಹೇಳು " ಎಂದರು.

ರಾಮನಾಥಯ್ಯ ಮತ್ತೆ ಅದೇ ಪ್ರಶ್ನೆ ಕೇಳಲು ಶ್ರೀಕಂಠಮೂರ್ತಿ ಗದ್ಗದ ಕಂಠದಿಂದ

" ಹೌದು ಸಾರ್. " ಎಂದ.

" ಮೂರ್ತಿ ಬಹಳ ಚೆನ್ನಾಗಿ ಮಾಡಿದ್ದೀಯಪ್ಪ"

ಎಂದು ಹೇಳಿ, ಅವನ ಕೈಗೆ ಬಹುಮಾನವಿತ್ತರು.

ಬಹುಮಾನ ಪಡೆದ ವಿದ್ಯಾರ್ಥಿಗಳ ಕೈಯಿಂದ ಬಹುಮಾನಗಳನ್ನು ಅವರ ಗೆಳೆಯರು ಕಿತ್ತುಕೊಂಡು ನೋಡುತ್ತಿದ್ದರು. ಶ್ರೀಕಂಠಮೂರ್ತಿಗೆ ಒಂದು ಇನ್‌ಸ್ಟ್ರುಮೆಂಟ್ ಬಾಕ್ಸ್ ( Instrument Box ) ಬಂದಿತ್ತು.

ಇನ್‌ಸ್ಪೆಕ್ಟರು ತಮ್ಮ ಭಾಷಣ ಮಾಡಲು ನಿಂತರು. ಹುಡುಗರ ಗಲಭೆಯಲ್ಲಿ ಭಾಷಣ ಯಾರ ಕಿವಿಯ ಮೇಲೂ ಬೀಳಲು ಸಾಧ್ಯವಿರಲಿಲ್ಲ. ಅಧ್ಯಕ್ಷರು ತಮ್ಮ ಕರ್ತವ್ಯ ನಿರ್ವಹಿಸಲೇ ಬೇಕಾಯಿತು. ಮಾದಯ್ಯನವರ ದಕ್ಷತೆ, ಶಾಲೆಯ ಪ್ರಗತಿ, ಉತ್ಸವದ ವ್ಯವಸ್ಥೆಗಳೆಲ್ಲವನ್ನೂ ಶ್ಲಾಘಿಸುತ್ತಾ ಅಧ್ಯಕ್ಷರು

" ನಾನು ಬೆಂಗಳೂರು, ಮೈಸೂರು ಪಟ್ಟಣಗಳಲ್ಲಿ ಅಂಗಡಿಗಳಲ್ಲಿ ದೊರೆಯುವ ವಿನಾಯಕನ ಮೂರ್ತಿಗಳನ್ನು ನೋಡಿದ್ದೇನೆ. ಉತ್ಸವಗಳಿಗೆ ಪ್ರತ್ಯೇಕವಾಗಿ ರಚನೆಯಾಗುವ ಮೂರ್ತಿಗಳನ್ನು ನೋಡಿದ್ದೇನೆ. ಆದರೆ ನಿಮ್ಮ ಊರಿನ ಒಬ್ಬ ಬಡ ವಿದ್ಯಾರ್ಥಿ ಮಾಡಿರುವ ವಿನಾಯಕನಿಗೆ ಸರಿಹೋಗುವ ಮೂರ್ತಿಯನ್ನು ನೋಡಿಲ್ಲ. ಶ್ರೀಕಂಠಮೂರ್ತಿಗೆ ಸರಿಯಾದ ಶಿಕ್ಷಣ, ಪ್ರೋತ್ಸಾಹ, ದೊರೆತರೆ ಅವನು ನಮ್ಮ ನಾಡಿನ ಉತ್ತಮ ಶಿಲ್ಪಿಯಾಗುವುದರಲ್ಲಿ ಸಂದೇಹವಿಲ್ಲ. ಕಿರಿಯರಲ್ಲಿ ಹುದುಗಿರುವ ಕಲಾಚೇತನ ಬೆಳೆಯಲು ಅವಶ್ಯಕವಾದ ಸೌಕರ್ಯ ಕಟ್ಟಿಸಿಕೊಡುವುದು ಊರಿನವರ ಕರ್ತವ್ಯವಾಗಿದೆ "

ಎಂದರು. ವಂದನಾರ್ಪಣೆ, ಮಹಾ ಮಂಗಳಾರತಿಯಾದ ಮೇಲೆ ಕಡಲೆ ಗುಗ್ಗರಿ ಚರುಪು ವಿನಿಯೋಗವಾಗಿ ಸಭಾ ವಿಸರ್ಜನವಾಯಿತು.

ರಾಮನಾಥಯ್ಯ ಗಣಪತಿಯ ಮೂರ್ತಿಯ ಸಮೀಪಕ್ಕೆ ಹೋಗಿ ಅದನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಸುತ್ತ ಕಣ್ಣು ಹೊರಳಿಸಿ ನೋಡಿದರು. ಶ್ರೀಕಂಠ ಮೂರ್ತಿ ಕಣ್ಣಿಗೆ ಬೀಳಲಿಲ್ಲ.

ಉತ್ಸವದ ಗೌರವಾರ್ಥವಾಗಿ ರಾತ್ರಿ ಮಾದಯ್ಯ ಮುಸಾಫಿರ್‌ಖಾನೆಯಲ್ಲಿಯೇ ಔತಣ ವ್ಯವಸ್ಥೆ ಮಾಡಿದ್ದರು. ಊಟ ಮುಗಿದು ತಾಂಬೂಲ ಚರ್ವಣಕ್ಕೆ ಕುಳಿತಾಗ

" ಹೆಡ್‌ಮಾಸ್ಟರೇ, ನಿಮ್ಮ ಶ್ರೀಕಂಠಮೂರ್ತಿ ಕಣ್ಣಿಗೆ ಬೀಳಲೇ ಇಲ್ಲ. ಅವನನ್ನು ನೋಡಬೇಕಾಗಿತ್ತು. "

" ಆಗಲಿ ಸ್ವಾಮಿ. ಬೆಳಿಗ್ಗೆ ಕರೆಸುತ್ತೇನೆ. "

" ಕರೆಸಬೇಡಿ. ನಾವೇ ಅವನ ಮನೆಗೆ ಹೋಗೋಣ. "

" ತಾವೇಕೆ ಸ್ವಾಮಿ ಅಷ್ಟು ದೂರ ಪಾದ ಬೆಳೆಸಬೇಕು. "

" ಆ ವಿಷಯ ಆಮೇಲೆ ಹೇಳುತ್ತೇನೆ. ಬೆಳಿಗ್ಗೆ ನನ್ನನ್ನು ಅವನ ಮನೆಗೆ ಕರೆದುಕೊಂಡು ಹೋಗಿ. "

ಎಂದು ಇನ್‌ಸ್ಪೆಕ್ಟರು ಅಪ್ಪಣೆ ಮಾಡಿದರು.

ಬೆಳಿಗ್ಗೆ ಮಾದಯ್ಯನವರು ಆರು ಗಂಟೆಗೇ ಮುಸಾಫಿರ್‌ಖಾನೆಗೆ ಬಂದು ಇನ್‌ಸ್ಪೆಕ್ಟರ್ ಸಾಹೇಬರ ಸ್ನಾನ, ಉಪಹಾರದ ವ್ಯವಸ್ಥೆ ಮಾಡಿದರು.

ಊರಿಗೆ ಮೂರು ಫರ್ಲಾಂಗು ದೂರದಲ್ಲಿದ್ದ ಶ್ರೀಕಂಠಮೂರ್ತಿ ಮನೆಗೆ ಇಬ್ಬರೂ ಹೋಗುತ್ತಿದ್ದಂತೆ ಇನ್‌ಸ್ಪೆಕ್ಟರು

" ಈ ಹುಡುಗನಿಗೆ ದಿಕ್ಕು ಯಾರಿದ್ದಾರೆ " ಎಂದು ಕೇಳಿದರು.

" ತಂದೆ ನಾಗಲಿಂಗಾಚಾರಿ ಇದ್ದಾನೆ. "

" ಅವನೂ ಶಿಲ್ಪಿಯೇ ? "

" ಹೌದು. ಇವರ ಮನೆ ಒಂದು ಕಾಲಕ್ಕೆ ಶಿಲ್ಪಕಲೆಗೆ ತುಂಬ ಪ್ರಸಿದ್ಧವಾಗಿತ್ತು. ನಾಗಲಿಂಗಾಚಾರಿ ಕೂಡ ಉತ್ತಮ ಶಿಲ್ಪಿಯೆಂದು ಹೆಸರು ಪಡೆದಿದ್ದ."

" ಹೆಸರು ಪಡೆದಿದ್ದ ಎಂದರೆ ? "

" ಈಗವನು ಉಳಿ ಕೊಡತೀಗೆ ಬಹಿಷ್ಕಾರ ಹಾಕಿದ್ದಾನೆ. "

"ಕಾರಣವೇನು?"

"ನಾಗಲಿಂಗಾಚಾರಿ ಸ್ವಲ್ಪ ವಿಚಿತ್ರ ಆಸಾಮಿ. ಅವನ ತಂದೆ ವೀರಭದ್ರಾಚಾರಿ ಇತ್ತಕಡೆ ಪ್ರಸಿದ್ಧ ಶಿಲ್ಪಿಯಾಗಿದ್ದ. ಬಂಡೀಹಳ್ಳಿ, ಈರನಗೆರೆ, ತೂಬೂರು, ಅಜ್ಜನಕಾಡುಗಳಲ್ಲಿರುವ ರಾಮ, ಶಿವ, ವೀರಭದ್ರ, ಗಣಪತಿ ದೇವಾಲಯಗಳ ಮೂರ್ತಿಗಳನ್ನು ಕಡೆದವನೇ ವೀರಭದ್ರಾಚಾರಿ. ತಂದೆಯಿಂದ ಮಗನಿಗೆ ಪರಂಪರಾಗತವಾಗಿ ಶಿಲ್ಪವಿದ್ಯೆ ಬಂದಿತು. ನಾಗಲಿಂಗಾಚಾರಿಯೂ ಉತ್ತಮ ಶಿಲ್ಪಿಯೆಂದು ಹೆಸರು ಪಡೆದ. ಸ್ವಾಮಿ ಬೇವಿನೂರಿನಲ್ಲಿರುವ ಅಮ್ನೋರ ದೇವಸ್ಥಾನ ನೋಡಿರಬಹುದು."

"ನೋಡಿದ್ದೇನೆ. ದಿವ್ಯವಾದ ವಿಗ್ರಹ."

"ಅದನ್ನು ಕಡೆದವನೇ ನಾಗಲಿಂಗಾಚಾರಿ. ಶಿವನಿಯಲ್ಲಿರುವ ಷಣ್ಮುಖಸ್ವಾಮಿ, ಸೋಮನಹಳ್ಳಿಯಲ್ಲಿರುವ ವೇಣುಗೋಪಾಲ, ಮಲ್ಲಸಂದ್ರದಲ್ಲಿರುವ ಸರಸ್ವತಿ ವಿಗ್ರಹಗಳನ್ನು ಕಡೆದಿರುವವನೂ ನಾಗಲಿಂಗಾಚಾರಿಯೇ. ನಾಗಲಿಂಗಾಚಾರಿ ತುಂಬ ಸಂಭಾವಿತ. ಭಕ್ತಾಗ್ರಣಿ. ಅವನ ಜೀವನದಲ್ಲಿ ಏನೋ ಅಪಘಾತವಾಯಿತು, ಅಂದಿನಿಂದ ಅವನ ರೀತಿ ನೀತಿಯೇ ಬದಲಾಯಿಸಿತು. ಉಳಿ, ಕೊಡತಿ ಮುಟ್ಟುವುದನ್ನೇ ಬಿಟ್ಟುಬಿಟ್ಟ."

"ಏನು ಅಪಘಾತವಾಯಿತು."

"ನಿಜಸ್ಥಿತಿ ಯಾರಿಗೂ ಗೊತ್ತಿಲ್ಲ. ನಾಗಲಿಂಗಾಚಾರೀಗೆ ರಾಮಾಚಾರೀಂತ ದೊಡ್ಡ ಮಗ ಒಬ್ಬ ಇದ್ದ. ಅವನಿಗೆ ಆಚಾರಿ ತನ್ನ ವಿದ್ಯೆಯನ್ನೆಲ್ಲಾ ಧಾರೆಯೆರೆದಿದ್ದ. ಈ ಮಗ ತಂದೆಯ ಜತೆ ವ್ಯಾಜ್ಯ ಕಾದುಕೊಂಡು ಓಡಿಹೋದ. ಅಂದಿನಿಂದ ನಾಗಲಿಂಗಾಚಾರಿ ಬುದ್ಧಿ ವಿಕಲ್ಪವಾಯಿತು ಎಂದು ಜನ ಆಡಿಕೊಳ್ಳುತ್ತಾರೆ."

"ದೊಡ್ಡ ಮಗ ಈಗೆಲ್ಲಿದ್ದಾನೆ?"

"ಬೆಂಗಳೂರಿನಲ್ಲಿ ಪಿಂಗಾಣಿ ಕಾರ್ಖಾನೆಯಲ್ಲಿ ಕೆಲಸಕ್ಕಿದ್ದಾನೆ ಎಂಧು ಯಾರೋ ಅವನನ್ನು ಕಂಡವರು ಹೇಳಿದರು."

"ಹಾಗಾದರೆ ಶ್ರೀಕಂಠಾಚಾರೀಗೂ ಕ್ರಮವಾಗಿ ಪಾಠವಾಗಿದೆ ಎನ್ನಿ."

"ಇಲ್ಲ. ರಾಮಾಚಾರೀಗೆ ಪಾಠವಾದ ಹಾಗೆ ಆಗಿಲ್ಲ. ಮನಸ್ಸು ಬಂದ ದಿನ ನಾಗಲಿಂಗಾಚಾರಿ ಮಗನಿಗೆ ಪಾಠ ಹೇಳಿಕೊಡುತ್ತಾನೆ."

" ಸಣ್ಣ ಹುಡುಗ – ಅವನನ್ನು ನೋಡಿಕೊಳ್ಳುವವರು ಯಾರು ? "

" ನಾಗಲಿಂಗಾಚಾರಿ ಪತ್ನಿ ತೀರಿಕೊಂಡು ಬಹಳ ದಿವಸಗಳಾದವು. ಯಾವುದೊ ಮುದುಕಿ ಅನ್ನ ಬೇಯಿಸಿ ತಂದಿಡತ್ತೆ. ತಂದೆ, ಮಗ ಅದನ್ನೇ ತಿಂದು ಕಾಲ ತಳ್ಳುತ್ತಾರೆ. "

" ನಾಗಲಿಂಗಾಚಾರೀಗೆ ಈಗ ಜೀವನಕ್ಕೆ ಮಾರ್ಗ ? "

" ನಾಲ್ಕು ಎಕರೆ ಹೊಲ ಇದೆ. ಅವನೇ ವ್ಯವಸಾಯ ಮಾಡುತ್ತಾನೆ. — ಅಲ್ಲಿ ನೋಡಿ, ತಗಡು ಬಡಿದಿರುವ ಆ ಗುಡಿಸಲೇ ಅವನ ಮನೆ. "

" ನಾಗಲಿಂಗಾಚಾರೀನ ನೋಡುವುದಕ್ಕಾಗುವುದಿಲ್ಲವೇ ? "

" ಅವನು ಯಾರ ಕಣ್ಣಿಗೂ ಬೀಳುವುದೇ ಇಲ್ಲ ಸ್ವಾಮಿ. ಹೊತ್ತು ಹುಟ್ಟುವುದಕ್ಕೆ ಮುಂಚೆಯೇ ಮನೆಬಿಟ್ಟು ಹೋಗುತ್ತಾನೆ. ರಾತ್ರಿ ಮನೆಗೆ ಬಂದರೆ ಬಂದ, ಬಿಟ್ಟರೆ ಬಿಟ್ಟ. "

ಈ ವೇಳೆಗೆ ಇಬ್ಬರೂ ನಾಗಲಿಂಗಾಚಾರಿಯ ಮನೆಯ ಬಳಿಗೆ ಬಂದಿದ್ದರು. ಮಾದಯ್ಯ ತಗಡಿನ ಬಾಗಿಲನ್ನು ಮುಂದೆ ದೂಡಿ ಒಳಕ್ಕೆ ಪ್ರವೇಶಿಸಿ

" ಶ್ರೀಕಂಠಾ " ಎಂದು ಕೂಗಿದರು.

ಒಳಗಿದ್ದ ಶ್ರೀಕಂಠ ಓಡಿಬಂದು ಭಯಭಕ್ತಿಯಿಂದ ಹೆಡ್‌ಮಾಸ್ಟರಿಗೆ ಕೈ ಮುಗಿದ.

" ಇನ್‌ಸ್ಪೆಕ್ಟರ್ ಸಾಹೇಬರು ಬಂದಿದ್ದಾರೆ. ಕುಳಿತುಕೊಳ್ಳುವುದಕ್ಕೆ ಏನಾದರೂ ಹಾಸು " ಎಂದರು.

ಶ್ರೀಕಂಠಮೂರ್ತಿ ಮಣಕುಗಟ್ಟಿದ್ದ ಒಂದು ಹರಕು ಚಾಪೆ ಹಾಸಿದ. ಇನ್‌ಸ್ಪೆಕ್ಟರು ಒಳಗೆ ಬಂದು ಅದರ ಮೇಲೇ ಕುಳಿತರು. ಶ್ರೀಕಂಠನ ಬಾಯಿ ಕಟ್ಟಿ ಹೋಗಿತ್ತು.

" ಮನೆಗೆ ಬಂದ ದೊಡ್ಡ ಮನುಷ್ಯರಿಗೆ ಸ್ವಾಗತ ಬಯಸಬೇಡವೇ ಶ್ರೀಕಂಠ " ಎಂದು ಹೆಡ್‌ಮಾಸ್ಟರು ಎಚ್ಚರಿಸಿದರು.

" ಬಡವರ ಮನೆ ಸಾರ್ "

" ಇರಲಪ್ಪಾ. ನಾವು ಮನೆ ನೋಡುವುದಕ್ಕೆ ಬರಲಿಲ್ಲ. ನಿನ್ನ ನೋಡುವುದಕ್ಕೆ ಬಂದೆವು. ಬಾ, ಕುಳಿತುಕೋ. "

ಶ್ರೀಕಂಠ ಕೈಕಟ್ಟಿಕೊಂಡು ನಿಂತೇ ಇದ್ದ.

"ಗಣಪತಿ ಮೂರ್ತಿಯಲ್ಲದೆ ಇನ್ನೂ ಏನಾದರೂ ಮಾಡಿರುವೆಯಾ ಶ್ರೀಕಂಠಮೂರ್ತಿ. "

"ಮಾಡಿದ್ದೇನೆ ಸಾರ್. ಚೆನ್ನಾಗಿಲ್ಲ."

"ಇರಲಿ ತೋರಿಸು."

ಮಾದಯ್ಯನವರೂ ಒತ್ತಾಯ ಮಾಡಿದ ಮೇಲೆ ಶ್ರೀಕಂಠಮೂರ್ತಿ ಒಳಗೆ ಹೋಗಿ ರಾಮ, ಕೃಷ್ಣ, ಶಿವಪಾರ್ವತಿಯರ ವಿಗ್ರಹಗಳನ್ನು ತಂದು ಇನ್‌ಸ್ಪೆಕ್ಟರ್ ಮುಂದಿಟ್ಟ. ರಾಮನಾಥಯ್ಯ ಅವುಗಳನ್ನು ಕೈಗೆತ್ತಿಕೊಂಡು ಪರೀಕ್ಷಿಸಿ ನೋಡುತ್ತಾ

"ಮೂರ್ತಿ ಲಕ್ಷಣ ನಿನಗೆ ಹೇಗೆ ಗೊತ್ತಾಯಿತು ?"

"ಅಪ್ಪಾಜಿ ಹೇಳಿಕೊಡುತ್ತಾರೆ ಸಾರ್."

"ಮುಂದೆ ನೀನು ಏನಾಗಬೇಕೆಂದಿರುವೆ ಶ್ರೀಕಂಠಮೂರ್ತಿ ?"

"ಅಪ್ಪಾಜಿ ಹಾಗೆ ಶಿಲ್ಪಿಯಾಗಬೇಕೆಂದಿದ್ದೇನೆ ಸಾರ್."

"ಇದಕ್ಕೆ ಕ್ರಮವಾದ ಶಿಕ್ಷಣ ಬೇಕಪ್ಪ. ನಿನ್ನ ತಂದೆ ನಿನಗೆ ಹೇಳಿ ಕೊಡುವುದಿಲ್ಲವೆಂದು ಕೇಳಿದೆ."

"ಅವರಿಗೆ ಶಿಲ್ಪವೆಂದರೇ ಬೇಸರ ಬಂದು ಬಿಟ್ಟಿದೆ ಸಾರ್."

"ಮೈಸೂರಿನಲ್ಲಿ ಚಾಮರಾಜೇಂದ್ರ ಟೆಕ್ನಿಕಲ್ ಇನ್‌ಸ್ಟಿಟ್ಯೂಟ್‌ನಲ್ಲಿ ಶಿಲ್ಪವನ್ನು ಕಲಿಸಿ ಕೊಡುತ್ತಾರೆ."

"ನನಗೆ........"

"ಅಲ್ಲಿಗೆ ಹೋಗಲು ಇಚ್ಛೆಯಾಗುತ್ತಿದೆಯೇ ?"

"ಇದೆ ಸಾರ್.........ಆದರೆ........"

"ನಿಮ್ಮ ತಂದೆಗೇ ಗಂಟುಬಿದ್ದು, ಅವರಿಗೆ ಬರುವ ವಿದ್ಯೆಯನ್ನು ಚೆನ್ನಾಗಿ ಕಲಿತುಕೋ. ಅದರ ಜತೆಯಲ್ಲಿ ಲೋವರ್ ಸೆಕೆಂಡರಿ ಪಾಸೂ ಮಾಡು — ಮುಂದೆ ನೋಡೋಣ — ದೈವಾನುಕೂಲ ಹೇಗೆ ಇದೆಯೋ."

ಎಂದು ಹೇಳಿ ಮಾದಯ್ಯನವರಿಗೆ

"ಹೆಡ್‌ಮೇಷ್ಟ್ರೇ – ನಿಮಗೆ ನಾಗಲಿಂಗಾಚಾರ್ರು ಚೆನ್ನಾಗಿ ಗೊತ್ತಿರ ಬೇಕಲ್ಲವೇ ?"

"ಗೊತ್ತಿದೆ ಸ್ವಾಮಿ."

"ಶ್ರೀಕಂಠಮೂರ್ತಿಗೆ ಪಾಠ ಹೇಳಿ, ಅವನನ್ನು ಮುಂದಕ್ಕೆ ತರುವುದು ಅಗತ್ಯವೆಂದು ಹೇಳಿ, ಸಂಪ್ರದಾಯಬದ್ಧವಾಗಿ ಶಿಲ್ಪಕಲೋಪಾಸನೆ ಮಾಡುತ್ತಿದ್ದ ರೂಪಾಶಿಗಳ ವರ್ಗವೇ ಅಳಿದುಹೋಗುತ್ತಿದೆ. ಉಳಿದಿರುವ ಒಬ್ಬಿಬ್ಬರಾದರೂ ಸಚ್ಛಿಷ್ಯರಿಗೆ ವಿದ್ಯಾದಾನ ಮಾಡದಿದ್ದರೆ ಈ ಕಲೆ ಸಂಪೂರ್ಣವಾಗಿ ನಾಶವಾಗಿ ಹೋಗುತ್ತದೆ."

"ನಾನು ಹೇಳುವುದು ಹೇಳುತ್ತೇನೆ ಸ್ವಾಮಿ. ಆದರೆ ನಾಗಲಿಂಗಾಚಾರಿ ನನ್ನ ಮಾತು ಕೇಳಬೇಕಲ್ಲ!"

"ಶ್ರೀಕಂಠಮೂರ್ತಿ, ನಿನ್ನ ಶಿಲ್ಪ ನೋಡಿ ನನಗೆ ತುಂಬ ಸಂತೋಷವಾಗಿದೆಯಪ್ಪ. ನನ್ನಿಂದ ಏನು ಸಹಾಯ ಬೇಕಾದರೂ ಕೇಳು – ಮಾಡಲು ಸಿದ್ಧನಾಗಿದ್ದೇನೆ."

ಏನು ಕೇಳಬೇಕೆಂಬುದೂ ಶ್ರೀಕಂಠಮೂರ್ತಿಯ ಮುಗ್ಧ ಮನಸ್ಸಿಗೆ ಹೊಳೆಯಲಿಲ್ಲ. ಕೊನೆಗೆ ಧೈರ್ಯ ತಂದುಕೊಂಡು

"ಮೈಸೂರಿನ ಸ್ಕೂಲಿಗೆ ಸೇರಿಸಿದರೆ........"

"ಮೊದಲು ಲೋವರ್ ಸೆಕೆಂಡರಿ ಮಾಡಿಕೋ."

ಎಂದರು. ಇಬ್ಬರೂ ಹೊರಡಲೆದ್ದಾಗ ಶ್ರೀಕಂಠಮೂರ್ತಿ ಒಳಗೆ ಹೋಗಿ ಒಂದು ಸಣ್ಣ ಗಣೇಶನ ವಿಗ್ರಹ ತಂದು ಇನ್‌ಸ್ಪೆಕ್ಟರ ಕೈಯಲ್ಲಿಟ್ಟು

"ತಾವು ತೊಗೋಬೇಕು ಸಾರ್." ಎಂದ.

"ಇದನ್ನು ಯಾವಾಗ ಮಾಡಿದೆಯಪ್ಪಾ."

"ರಾತ್ರಿ ಮನೆಗೆ ಬಂದ ಮೇಲೆ ಮಾಡಿದೆ ಸಾರ್."

ರಾಮನಾಥಯ್ಯ ತುಂಬ ಸಂತೋಷದಿಂದ ವಿಗ್ರಹ ಸ್ವೀಕರಿಸಿ, ಮಾದಯ್ಯನವರೊಂದಿಗೆ ಹೊರಟರು. ಇನ್‌ಸ್ಪೆಕ್ಟರು ಸುಪ್ರಸನ್ನರಾಗಿದ್ದುದನ್ನು ಕಂಡು ಮಾದಯ್ಯ ಮೆಲ್ಲನೆ

"ನನ್ನ ಅಹವಾಲು........"

"ಟ್ರಾನ್ಸ್‌ಫರ್ ವಿಷಯವೇ?"

"ಹೌದು ಸ್ವಾಮಿ.... ಈ ಕೊಂಪೆಗೆ ಬಂದು ಎರಡು ವರ್ಷವಾಯಿತು."

"ಈಗ ನಿಮ್ಮನ್ನು ಹೇಗೆ ಟ್ರಾನ್ಸ್‌ಫರ್ ಮಾಡಲಿ ಮಾದಯ್ಯನವರೇ. ಶ್ರೀಕಂಠಮೂರ್ತಿ ಭವಿಷ್ಯ ನಿಮ್ಮ ಕೊರಳಿಗೆ ಗಂಟುಬಿದ್ದಿದೆಯಲ್ಲಾ!"

" ನನಗೆ ತುಂಬ ತೊಂದರೆ ಇದೆ ಸ್ವಾಮಿ. "

" ನೀವು ವರ್ಷ, ಎರಡು ವರ್ಷ ಇಲ್ಲೇ ಇರುವುದೊಳ್ಳೆಯದು ಮಾದಯ್ಯನವರೇ. ನಿಮಗೆ ನಾನು ಸಂಬಳ ಹೆಚ್ಚು ಮಾಡಿಸುತ್ತೇನೆ. ಟ್ರಾನ್ಸ್‌ಫರ್ ಕೊಡಿಸಲಿಲ್ಲವೆಂದು ಆಗ್ರಹಗೊಳ್ಳಬೇಡಿ. ಶ್ರೀಕಂಠಮೂರ್ತಿ ಮುಂದಕ್ಕೆ ಬಂದರೆ ಅದರ ಕೀರ್ತಿ ನಿಮಗಾಗುತ್ತೆ. ನಮ್ಮ ದೇಶಕ್ಕೇ ನೀವು ಮಹೋಪಕಾರ ಮಾಡಿದಂತಾಗುತ್ತದೆ. "

" ಹಳ್ಳಿಗಾಡಿನಲ್ಲಿ ಜೀವನ ನಡೆಯೋದು ಕಷ್ಟ ಸ್ವಾಮಿ. "

" ನಾನು ಬಲ್ಲೆ ! ಕೂಡಲೆ ನಿಮಗೆ ಇನ್‌ಕ್ರಿಮೆಂಟ್ ( increment ) ಕೊಡಿಸುವ ಜವಾಬ್ದಾರಿ ನನಗಿರಲಿ. ನಿಮಗೆ ಪುರಸತ್ತಾದಾಗ ಶ್ರೀಕಂಠ ಮೂರ್ತಿಗೆ ಸ್ವಲ್ಪ ಇಂಗ್ಲೀಷೂ ಹೇಳಿಕೊಡುತ್ತ ಬನ್ನಿ. ಈ ಕಾಲದಲ್ಲಿ ಇಂಗ್ಲಿಷ್ ಬರದಿದ್ದರೆ ಬದುಕುವುದೇ ಸಾಧ್ಯವಿಲ್ಲ. "

" ಅಪ್ಪಣೆ ಸ್ವಾಮಿ " ಎಂದು ಮಾದಯ್ಯ ಆಶ್ವಾಸನವಿತ್ತರು.

" ಶ್ರೀಕಂಠಮೂರ್ತಿಗೆ ಸರಿಯಾಗಿ ಬಟ್ಟೆಬರೆ ಇರುವ ಹಾಗಿಲ್ಲ. ನನ್ನ ಹೋಲ್ಡಾಲಿನಲ್ಲಿ ( hold-all ) ಕೆಲವು ಹೆಚ್ಚು ಬಟ್ಟೆಗಳಿವೆ. ಕೊಡುತ್ತೇನೆ – ಅವುಗಳನ್ನವನಿಗೆ ಮುಟ್ಟಿಸಿ. ಸ್ವಲ್ಪ ಹಣ ಕೊಡುತ್ತೇನೆ – ಅವನಿಗೆ ಎರಡು ಷರ್ಟು ಹೊಲಿಸಿ ಕೊಡಿ " ಎಂದರು.

ರಾಮನಾಥಯ್ಯ ಊಟ ಮುಗಿಸಿಕೊಂಡು ನಾಲ್ಕು ಗಂಟೆಯ ಬಸ್ಸಿನಲ್ಲಿ ಮೈಸೂರಿಗೆ ಪ್ರಯಾಣ ಬೆಳಸುವದೆಂದು ನಿಶ್ಚಯವಾಗಿತ್ತು. ಅವರು ಊಟ ಮುಗಿಸಿಕೊಂಡು, ತಾಲ್ಲೂಕು ಅಮಲ್ದಾರರು ಪುಟ್ಟಪ್ಪನವರನ್ನು ಕಂಡು, ಅವರಲ್ಲಿಯೂ ಶ್ರೀಕಂಠಮೂರ್ತಿಯ ವಿಷಯ ಪ್ರಸ್ತಾಪಿಸಿದರು. ' ಸ್ಕೂಲ್ ಇನ್ ಸ್ಪೆಕ್ಟರಿಗೆ ಈ ಪಾರುಪತ್ಯವೇಕೆ ' ಎಂದು ಪುಟ್ಟಪ್ಪನವರು ಯೋಚಿಸದಿರಲಿಲ್ಲ. ಅದನ್ನು ಪೂರ್ವಭಾವಿಯಾಗಿಯೇ ನಿರೀಕ್ಷಿಸಿದ್ದ ರಾಮನಾಥಯ್ಯ

" ಶಿಲ್ಪಕಲೆ ನಮ್ಮ ದೇಶದ ಅಪೂರ್ವ ಸಂಪತ್ತು ಅಮಲ್ದಾರರೇ. ಅದನ್ನು ಕಾಯ್ದುಕೊಳ್ಳುವುದು ನಮ್ಮ ಕರ್ತವ್ಯ "

ಎಂದು ಹೇಳಿದರು.

" ಸರಿ - ನಾನೇನು ಮಾಡಲು ಸಾಧ್ಯ ? "

" ತಾಲ್ಲೂಕಿನ ಧಣಿಗಳು ತಾವು · ಮನಸ್ಸು ಮಾಡಿದರೆ ಬೇಕಾದ್ದು

ಮಾಡಬಹುದು. ಶ್ರೀಕಂಠಮೂರ್ತಿ ಬಹಳ ಚೂಟಿ ಹುಡುಗ. ಬೆರಳು ತೋರಿಸಿದರೆ ಹಸ್ತ ನುಂಗಬಲ್ಲ. ಚಾಮರಾಜೇಂದ್ರ ಟೆಕ್ನಿಕಲ್ ಇನ್‌ಸ್ಟಿಟ್ಯೂಟಿನ ಕೋರ್ಸ್ ಅವನು ಮುಗಿಸಿಕೊಂಡರೆ ತುಂಬ ಮುಂದಕ್ಕೆ ಬರುತ್ತಾನೆ."

"ಅಷ್ಟು ದೊಡ್ಡ ಜವಾಬ್ದಾರಿ ನಾನು ಹೇಗೆ ಹೊತ್ತುಕೊಳ್ಳಲಿ ಮಿ. ರಾಮನಾಥಯ್ಯ. ನಾನೂ ಸ್ಥಳವಂದಿಗನೂ ಅಲ್ಲ; ಬೇರೆ ಕಡೆ ಟ್ರಾನ್ಸ್‌ಫರ್ ಆಗಿ ಹೋಗತಕ್ಕವನು."

"ನೀವು ಇಲ್ಲಿರುವವರೆಗೆ ಎಷ್ಟು ಸಾಧ್ಯವೋ ಅಷ್ಟು ಉಪಕಾರ ಮಾಡಬಹುದು. ಡಿಸ್ಟ್ರಿಕ್ಟ್ ಬೋರ್ಡ್‌ಗೆ ಒಂದು ಮಾತು ಹೇಳಿ ಹುಡುಗನಿಗೆ ಕಾಲಕ್ಷೇಪ ಕೊಡಿಸಬಹುದು – ನೀವು ಟ್ರಾನ್ಸ್‌ಫರ್ ಆಗಿ ಹೋಗುವಾಗ ನಿಮ್ಮ ಸ್ಥಳಕ್ಕೆ ಬರುವ ಅಮಲ್ದಾರರಿಗೆ ಈ ಕೆಲಸ ಒಪ್ಪಿಸಬಹುದು."

"ನಮಗೆ ಪುರಸತ್ತಿಲ್ಲದೆ ಮಿ. ರಾಮನಾಥಯ್ಯ. ಧಾನ್ಯಸಂಗ್ರಹ, ಮಂತ್ರಿಗಳ ಉಪಚಾರ ಎರಡಕ್ಕೇ ನಮ್ಮ ಜೀವನ ಮೀಸಲು. ಆಗಲಿ - ತಾವು ಇಷ್ಟು ದೂರ ಬಂದು ಹೇಳಿದುದಕ್ಕೆ ನನ್ನ ಕೈಯಲ್ಲಾಗುವ ಸಹಾಯ ಮಾಡುತ್ತೇನೆ" ಎಂದರು.

ಅಮಲ್ದಾರರ ಮಾತು ಆಶಾದಾಯಕವಾಗಿರದಿದ್ದರೂ ಕರ್ತವ್ಯ ನಿರ್ವಹಿಸಿದ ತೃಪ್ತಿ ರಾಮನಾಥಯ್ಯನವರಿಗಾಯಿತು.

## ೨

ನಾಗಲಿಂಗಾಚಾರೀಗೆ ಊರೊಳಗೆ, ರಥದ ಬೀದಿಯಲ್ಲಿ ವಂಶಪಾರಂಪರ್ಯವಾಗಿ ಬಂದ ಭವ್ಯವಾದ ಮನೆಯಿತ್ತು. ನಾಲ್ಕು ವರ್ಷಗಳ ಕೆಳಗೆ ಸಾಲಗಾರರಿಗೆ ಅದನ್ನೊಪ್ಪಿಸಿ, ಊರಿಗೆ ಸ್ವಲ್ಪ ದೂರದಲ್ಲಿ ತಾನೇ ಒಂದು ತಗಡಿನ ಗುಡಿಸಲು ಕಟ್ಟಿಕೊಂಡು ವಾಸಕ್ಕೆ ಬಂದಿದ್ದ. ಮನೆ ಹೋದ ವರ್ಷವೇ ಮಗ ರಾಮಾಚಾರಿಯೂ ಜಗಳ ಕಾಯ್ದುಕೊಂಡು ಮನೆಬಿಟ್ಟು ಹೊರಟುಹೋಗಿದ್ದ. ನಾಗಲಿಂಗಾಚಾರೀಗೆ ಜೀವನವೇ ಬೇಸರವಾಗಿ ಮನುಷ್ಯರ ಸಹವಾಸ ದುಸ್ಸಹನೀಯವಾಗುತ್ತ ಬಂತು.

ನಾಗಲಿಂಗಾಚಾರಿ ಕಟ್ಟಿದ ತಗಡಿನ ಮನೆ ಒಂದೇ ಒಪ್ಪಾರದಲ್ಲಿ

ಮುಗಿದುಹೋಗಿತ್ತು. ಮಧ್ಯೆ ಎರಡು ಅರ್ಧ ಗೋಡೆಗಳು. ಮೂರು ರೂಮು ಗಳಾಗಿದ್ದ ಈ ಮನೆಯಲ್ಲಿ ಒಂದು ಭಾಗ ಸ್ನಾನ, ಊಟಕ್ಕೆ ಮೀಸಲು; ಇನ್ನೊಂದು ಭಾಗ ಶಿಲ್ಪದ ಸಾಮಾನುಗಳ ಉಗ್ರಾಣ; ಮೂರನೆಯ ಭಾಗವೇ ವಾಸಸ್ಥಾನ. ಮನೆಯ ಬಹುಭಾಗವನ್ನು ಹಳ್ಳಿಯ ಹೆಂಚುಗಳೂ, ಮುಂಭಾಗ ವನ್ನು ಡಬ್ಬದ ತಗಡೂ ಅಲಂಕರಿಸಿದ್ದವು.

ಸಿರ್ವಿಣ್ಣನಾಗಿದ್ದ ನಾಗಲಿಂಗಾಚಾರಿ ಶಿಲ್ಪಕ್ಕೆ ಸಂಪೂರ್ಣವಾಗಿ ತಿಲ ತರ್ಪಣವನ್ನು ಕೊಟ್ಟಿರಲಿಲ್ಲ. ಇದ್ದಕ್ಕಿದ್ದಂತೆ ಒಂದೊಂದು ದಿನ ಅವನಿಗೆ ಸ್ಫೂರ್ತಿ ಬಂದುಬಿಡುತ್ತಿತ್ತು. ಮನೆಯಲ್ಲಿದ್ದ ಹಿತ್ತಾಳೆಯನ್ನೋ ಕಂಚನ್ನೋ ಕರಗಿಸಿ ಗಟ್ಟಿ ಮಾಡಿಕೊಂಡು ಯಾವದಾದರೂ ಮೂರ್ತಿ ಕಡೆಯುವುದಕ್ಕೆ ಮೊದಲು ಮಾಡುವನು. ಅಲ್ಪಾಯುವಾದ ಸ್ಫೂರ್ತಿ ಅವನ ಕೃತಿ ಪೂರ್ಣ ವಾಗುವುದಕ್ಕೆ ಬಿಡುತ್ತಿರಲಿಲ್ಲ. ಉಗ್ರಾಣದ ತುಂಬ ಈಶ್ವರನ ತಲೆಗಳೂ, ಪಾರ್ವತಿಯ ಕೈಗಳೂ, ಗಣಪತಿಯ ಸೊಂಡಿಲೂ, ಕೃಷ್ಣನ ಹಿನ್ನೆಲೆಯ ಹಸುವೂ ಅಪೂರ್ಣವಾಗಿ ಬಿದ್ದಿದ್ದವು.

ತಂದೆಗೆ ಸ್ಫೂರ್ತಿ ಬಂದು ಕೆಲಸಕ್ಕೆ ಕುಳಿತ ದಿನ ಶ್ರೀಕಂಠಾಚಾರಿಗೆ ಪರಮ ಸಂತೋಷವಾಗುತ್ತಿತ್ತು. ತಂದೆಯ ಬಳಿ ಕುಳಿತು ಪ್ರತಿಯೊಂದು ಉಳಿಯ ಪೆಟ್ಟನ್ನೂ, ಸುತ್ತಿಯ ಹೊಡೆತವನ್ನೂ ಲಕ್ಷ್ಯವಿಟ್ಟು ನೋಡುವನು. ತಂದೆಗೆ ಇಷ್ಟಬಂದ ದಿನ ಮಗನಿಗೆ ತನ್ನ ಕೃತಿಯ ತತ್ತ್ವಾರ್ಥ, ಪ್ರತಿಮಾ ಲಕ್ಷಣ, ಸಂಕೇತಗಳನ್ನು ವಿವರಿಸಿ ಹೇಳುವನು. ಇಷ್ಟ ಬರದಿದ್ದರೆ ಮಾಡು ತ್ತಿದ್ದ ಕೃತಿಯ ಕೈಬಿಟ್ಟು, ಹೆಗಲ ಮೇಲೆ ಟವಲು ಹೇರಿಕೊಂಡು ಹೊರಟು ಹೋಗುವನು.

ನಾಗಲಿಂಗಾಚಾರಿ ಮನೆಯಲ್ಲಿದ್ದ ಬೆಲೆ ಬಾಳುವ ಸಾಮಾನುಗಳೆಲ್ಲಾ ಮನೆಯ ಜತೆಯಲ್ಲಿಯೇ ಹೋದರೂ ಕೆಲವು ತಾಳೆಯ ಗರಿ ಗ್ರಂಥಗಳೂ, ಕೆಲವು ಕಂಚು ತಾಮ್ರದ ಪ್ರಾಚೀನ ವಿಗ್ರಹಗಳೂ ಉಳಿದಿದ್ದವು. ಸಾಲ ಕೊಟ್ಟಿದ್ದ ಶೆಟ್ಟರ ಕಣ್ಣಿನಲ್ಲಿ ತಾಳೆಯ ಗರಿ ಗ್ರಂಥಗಳಿಗೆ ಕವಡೆಯಷ್ಟೂ ಬೆಲೆ ಯಿರಲಿಲ್ಲವಾದ್ದರಿಂದ ಅವು ಉಳಿದುಕೊಂಡವು. ವಿಗ್ರಹಗಳಿಗೆ ಬೆಲೆಯಿದೆ ಯೆಂದು ಶೆಟ್ಟರಿಗೆ ತಿಳಿದಿದ್ದರೂ ಅವರು ಅವುಗಳನ್ನು ಮುಟ್ಟಲು ಹೆದರಿದರು. ' ಈ ದೇವರುಗಳನ್ನೆಲ್ಲಾ ಮನೆಗೆ ಹೊತ್ತುಕೊಂಡು ಹೋದರೆ ಮನೆ ನಾಶ

ವಾಗುತ್ತದೆ ' ಎನ್ನುವ ಮೂಢ ನಂಬಿಕೆಯೇ ಅವು ನಾಗಲಿಂಗಾಚಾರಿ ಬಳಿ ಉಳಿಯಲು ಕಾರಣವಾಯಿತು.

ನಾಗಲಿಂಗಾಚಾರಿ ಒಂದೊಂದು ದಿನ ಬುಡ್ಡಿ ಹಚ್ಚಿಕೊಂಡು ತಾಳೆಯ ಗರಿಯ ಪುಸ್ತಕವೊಂದನ್ನು ಬಿಚ್ಚಿಟ್ಟುಕೊಂಡು ಕುಳಿತುಕೊಳ್ಳುತ್ತಿದ್ದ. ಅಂದು ರಾತ್ರಿ ಅವನಿಗೆ ಹಗಲಾಗುತ್ತಿತ್ತು. ಒಂದೊಂದು ದಿನ ದೊಡ್ಡ ಪುಸ್ತಕವೊಂದ ರಲ್ಲಿ ಏನನ್ನೋ ಬರೆಯುತ್ತ ಕೂಡುತ್ತಿದ್ದ. ಶ್ರೀಕಂಠ ಯಾವಾಗಲಾದರೂ ತಂದೆಯನ್ನು ಪೀಡಿಸಿದರೆ

" ಹೇಳಿಕೊಡುವದಕ್ಕೇನಿದೆ - ನಿನಗೆ ಬೇಕಾದುದೆಲ್ಲಾ ಈ ಪುಸ್ತಕ ದಲ್ಲಿದೆ ನೋಡಿಕೊ " ಎಂದು ನಾಗಲಿಂಗಾಚಾರಿ ಹೇಳುತ್ತಿದ್ದ.

ಶ್ರೀಕಂಠಾಚಾರಿ ಕುತೂಹಲದಿಂದ ತಂದೆಯ ಬೃಹದ್ಗ್ರಂಥವನ್ನು ತೆಗೆದಿ ಟ್ಟುಕೊಂಡು ಕೂಡುತ್ತಿದ್ದ. ಅದರಲ್ಲಿ ನೂರಾರು ಶ್ಲೋಕಗಳು - ನಕ್ಷೆಗಳು - ಪ್ರಮಾಣ ಭೇದಗಳು. ನೂರಾರು ಮೂರ್ತಿಗಳ ರೇಖಾಚಿತ್ರಗಳು. ಶ್ರೀಕಂಠಾ ಚಾರಿಗೆ ಎಲ್ಲವೂ ವಿಸ್ಮಯಕಾರಿಯಾಗಿದ್ದವು. ಒಂದು ಪಂಕ್ತಿಯೂ ಅರ್ಥ ವಾಗುತ್ತಿರಲಿಲ್ಲ.

ಇನ್ಸ್‌ಪೆಕ್ಟರೂ, ಹೆಡ್‌ಮಾಸ್ಟರೂ ತನ್ನ ಮನೆಗೆ ಬಂದು ಹೋದುದು ಶ್ರೀಕಂಠಾಚಾರಿಗೆ ಹೆಮ್ಮೆಯನ್ನು ಹುಟ್ಟಿಸಿತ್ತು. ' ನಾನು ಮಾಡಿದ ಗಣಪತಿ ಯನ್ನು ನೋಡಿಯೇ ಅವರಷ್ಟು ಸಂತೋಷಪಟ್ಟುಕೊಂಡರು. ಇನ್ನೂ ಒಳ್ಳೆಯ ವಿಗ್ರಹಗಳನ್ನು ಮಾಡಿದರೆ ಎಷ್ಟು ಸಂತೋಷ ಪಟ್ಟುಕೊಳ್ಳುವರೋ ' ಎಂದು ಕೊಂಡ.

ವಾರ್ಷಿಕೋತ್ಸವ ಇನ್‌ಸ್ಪೆಕ್ಟರ್ ಸಾಹೇಬರ ಭೇಟಿಯ ಗೌರವಾರ್ಥ ವಾಗಿ ಶಾಲೆಗೂ ರಜವಿತ್ತು. ಶ್ರೀಕಂಠನ ಹೃದಯವನ್ನು ಯಾವದೊ ಪ್ರಬಲ ಶಕ್ತಿ ಆಕ್ರಮಿಸಿ, ಅದರಲ್ಲಿ ಅದ್ಭುತ ಆಸೆಗಳನ್ನು ಕೆರಳಿಸಿಬಿಟ್ಟಿತ್ತು.

' ಅಪ್ಪಾಜಿಯ ಹಾಗೆ – ಅಜ್ಜಯ್ಯನ ಹಾಗೆ ನಾನೂ ಒಳ್ಳೊಳ್ಳೆಯ ಮೂರ್ತಿಗಳನ್ನು ಕಡೆಯಬೇಕು. ದೊಡ್ಡ ಪ್ರಮಾಣದ ಮೂರ್ತಿಗಳನ್ನು ಕಡೆ ಯಬೇಕು. '

ಎಂದುಕೊಂಡು ತಂದೆಯ ಬೃಹದ್ಗ್ರಂಥ ತೆರೆದಿಟ್ಟುಕೊಂಡು ಕುಳಿತ.

ಪುಟಗಳ ಮೇಲೆ ಹಾದು ಹೋದ ಕಣ್ಣು ಒಂದೆಡೆ ನಿಂತುಬಿಟ್ಟಿತು.

**ಶಿವ**

ವಿಚಿತ್ರ ವಿಗಡಾಕಾರದ ಶಿವ ಶ್ರೀಕಂಠನಿಗರಿವಾಗದಂತೆಯೇ ಅವನ ಮನಸ್ಸಿನ ಮೇಲೆ ಲಾಸ್ಯವಾಡುತ್ತಿದ್ದ. ತಂದೆ ಅರ್ಧಕ್ಕೆ ಕೈಬಿಟ್ಟಿದ್ದ ' ಚಂದ್ರ ಶೇಖರ ' ನನ್ನು ನೋಡಿದಾಗಲೆಲ್ಲಾ ಶ್ರೀಕಂಠನ ಹೃದಯದಲ್ಲಿ ಅಪಾರ ವೇದನೆ ಯಾಗುತ್ತಿತ್ತು.

' ಇದೊಂದನ್ನಾದರೂ ಅಪ್ಪಾಜಿ ಮುಗಿಸಬಾರದೇ ' ಎಂದುಕೊಳ್ಳುವನು. ಆದರೆ ಆ ಮಾತನ್ನು ಬಾಯಿಬಿಟ್ಟು ತಂದೆಯಲ್ಲಿ ಹೇಳಲು ಧೈರ್ಯ ಸಾಲದು.

ಗ್ರಂಥದಲ್ಲಿದ್ದ ಶಿವಾಧ್ಯಾಯದ ಚಿತ್ರಗಳನ್ನು ನೋಡುತ್ತ ವೈಮರೆತ. ಶಿವನ ಇಪ್ಪತ್ತೈದು ಲೀಲಾಮೂರ್ತಿಗಳ ಸಚಿತ್ರ ವರ್ಣನೆಯಿತ್ತು.

' ದಕ್ಷಿಣಾಮೂರ್ತಿ — ವೀಣಾಧರ ದಕ್ಷಿಣಾಮೂರ್ತಿ — ಜ್ಞಾನ ಮೂರ್ತಿ — ಯೋಗಮೂರ್ತಿ — ಲಿಂಗೋದ್ಭವ ಮೂರ್ತಿ — ಏಕಪಾದ ಮೂರ್ತಿ — ಭಿಕ್ಷಾಟನಮೂರ್ತಿ — ಕಂಕಾಳಮೂರ್ತಿ — ಕಲ್ಯಾಣಸುಂದರ ಮೂರ್ತಿ — ಸುಖಾಸನಮೂರ್ತಿ — ಉಮಾಮಹೇಶ್ವರ — ವೃಷಾರೂಢ — ವೃಷವಾಹನ — ಚಂದ್ರಶೇಖರ ಮೂರ್ತಿ — ಅರ್ಧನಾರೀಶ್ವರ ಮೂರ್ತಿ — ಹರಿಹರ ಮೂರ್ತಿ — ಗಜಾಹ ಮೂರ್ತಿ — ಗಂಗಾಧರ — ಗಂಗಾ ವಿಸರ್ಜನ ಮೂರ್ತಿ — ಕಾಲಹರ ಮೂರ್ತಿ — ನೀಲಕಂಠ — ವಿಷಾವ ಹಾರಮೂರ್ತಿ — ತ್ರಿಪುರಾಂತಕಮೂರ್ತಿ — ಕಿರಾತಾರ್ಜುನ ಮೂರ್ತಿ—'

ಅರ್ಥವಾಗದ ವರ್ಣನೆಗಳನ್ನೋದುತ್ತ ಚಿತ್ರಗಳನ್ನು ನೋಡುತ್ತಿದ್ದಂತೆ ರೋಮಾಂಚವುಂಟಾಗಿತ್ತು.

ಯಾವದೋ ನೊಣ ಕಿವಿಯ ಬಳಿ ಕಾಡುತ್ತಿತ್ತು. ಅದನ್ನೊಮ್ಮೆ ಝಾಡಿಸಿದ. ಅದರ ಕಾಟ ಅಣಗಲಿಲ್ಲ. ಮತ್ತೆ ಝಾಡಿಸಿದ. ನೊಣ ಎಡಕಿವಿ ಬಿಟ್ಟು ಬಲಕಿವಿಯನ್ನಾಕ್ರಮಿಸಿತು. ಶ್ರೀಕಂಠ ನೊಣವನ್ನು ಹಿಡಿದು ಮುಗಿಸಿ ಬಿಡುವಂತೆ ಸಿಟ್ಟಿನಿಂದ ತಿರುಗಿದ. '

ನೊಣವಲ್ಲ !

" ನೀನೇ ! "

" ನಾನೇ " ಸ್ವರ್ಣನ ಮಂಜುಳ ಧ್ವನಿ ಕೇಳಿ ಬಂತು.

" ನೊಣ ಕಾಡುತ್ತಿದೆಯಂತಿದ್ದೆ ! "

"ನಿನಗೆ ಮನುಷ್ಯರೆಲ್ಲಾ ನೊಣಗಳೇ - ದೊಡ್ಡ ಶಿಲ್ಪಿ - ಇನ್‌ಸ್ಪೆಕ್ಟರು ಕೂಡ ಹೊಗಳಿ ಬಿಟ್ಟರು.— ನಿನ್ನೆ ಬಹುಮಾನ ಬೇರೆ ಬಂದು ಬಿಟ್ಟಿತು, ಇನ್ನು ನಿನ್ನ ಹಿಡಿಯುವವರು ಯಾರು ?"

"ಇಲ್ಲ ಸ್ವರ್ಣ - ಪುಸ್ತಕ ನೋಡುತ್ತಿದ್ದೆ...."

"ಅದರಲ್ಲೇನಿದೆಯೋ ಅಂಥ ಅದ್ಭುತ."

"ಬಾ - ನೋಡು ಬಾ." ಎಂದ.

ಸ್ವರ್ಣನೂ ಕೈಯ್ಯೂರಿ ಕುಳಿತಳು. ಶ್ರೀಕಂಠನನ್ನು ಮೆಚ್ಚಿಸಲು ಕುಳಿತ ಸ್ವರ್ಣನಿಗೆ ಆಸಕ್ತಿ ಹುಟ್ಟಿತ್ತು.

"ಇವೆಲ್ಲಾ ಶಿವನ ಚಿತ್ರಗಳೇ."

"ಹೌದು - ಶಿವನಿಗೆ ಇಪ್ಪತ್ತೈದು ರೂಪಗಳಂತೆ!"

"ನಮಗೊಂದೂ ಗೊತ್ತಿಲ್ಲವಲ್ಲ!"

"ನನಗೂ ಗೊತ್ತಿರಲಿಲ್ಲ. ಅಪ್ಪಾಜಿ 'ಚಂದ್ರಶೇಖರ' ನ ಮೂರ್ತಿ ಕಡೆಯುತ್ತಿದ್ದರು. ನಾನು ನಿಂತು ನೋಡುತ್ತಿದ್ದವನು 'ಇದೇನು ಅಪ್ಪಾಜಿ, ಶಿವಪಾರ್ವತಿಯರನ್ನು ಕೂಡಿಸಿಬಿಟ್ಟಿದ್ದೀರಿ - ಶಿವ ಪಾರ್ವತಿಯನ್ನು ಅಪ್ಪಿ ಕೊಂಡಿದ್ದಾನೆ — ಎಲ್ಲಿಯಾದರೂ ಉಂಟೇ ?' ಎಂದು ಕೇಳಿದೆ. ಅಪ್ಪಾಜಿ ನಕ್ಕು 'ಚಂದ್ರಶೇಖರನ ಮೂರ್ತಿಯೇ ಹಾಗೆ ಮಗೂ. ಶಿವ ತನ್ನ ಎಡ ತೊಡೆಯ ಮೇಲೆ ಪಾರ್ವತಿಯನ್ನು ಕೂಡಿಸಿಕೊಂಡು, ಅವಳ ಹೆಗಲ ಮೇಲೆ ಕೈಯಿಟ್ಟಿರಬೇಕು. ಅವನ ಎರಡು ಕೈಗಳಲ್ಲಿ ತ್ರಿಶೂಲ, ಡಮರು. ಬಲಗೈ ಅಭಯ ಮುದ್ರೆ ತೋರುತ್ತಿರಬೇಕು. ದೇವಿ ತನ್ನ ಎಡದ ಕೈಯಲ್ಲಿ ಒಂದು ಹೂ ಹಿಡಿದಿರುತ್ತಾಳೆ; ಅವಳ ಬಲಗೈ ಶಿವನ ಬಲತೋಳಿನ ಮೇಲೆ ಇರಬೇಕು. ಇದಕ್ಕೇ ಆಲಿಂಗನಮೂರ್ತಿ - ಪ್ರದೋಷ ಮೂರ್ತಿ ಎಂಬ ಹೆಸರುಗಳೂ ಇವೆ' ಎಂದು ಹೇಳಿದ್ದರು. ಇಲ್ಲಿ ನೋಡು - ಈ ಪುಸ್ತಕದಲ್ಲಿ ಅವರು ಹೇಳಿದಂತೆಯೇ ವರ್ಣಿಸಿದೆ."

ಸ್ವಲ್ಪ ಹೊತ್ತು ಪುಸ್ತಕ ನೋಡಿದ ಸ್ವರ್ಣ ಪುಸ್ತಕವನ್ನು ಮುಚ್ಚಿಟ್ಟು ಕಣ್ಮುಚ್ಚಿ ಕುಳಿತಳು.

"ಏಕೆ ಸ್ವರ್ಣಾ - ಕಣ್ಣುಬಿಟ್ಟು ನೋಡು."

"ನನಗೆ ಭಯವಾಗುತ್ತದಪ್ಪಾ."

" ಭಯವೇಕೆ ? "

" ನಿನ್ನ ಪುಸ್ತಕದಲ್ಲಿ ಯಾವ ಯಾವದೊ ದೇವರುಗಳಿವೆ. "

" ಇದ್ದರೇನು ಭಯ. ಇವು ನಾವು ಮಾಡುವ ದೇವರುಗಳಲ್ಲವೇ – ನಾವು ಮಾಡುವ ದೇವರುಗಳಿಗೆ ನಾವೇ ಭಯಪಡಬೇಕೇ ? "

" ಹಾಗೆನ್ನಬೇಡ ಶ್ರೀಕಂಠೂ — ದೇವರುಗಳನ್ನು ಹಾಸ್ಯ ಮಾಡಬಾರದು. "

" ಗಣಪ್ಪನನ್ನೂ.... "

" ಹೋಗಪ್ಪಾ - ನೀನು ಹೀಗೆ ಮಾತನಾಡುವಹಾಗಿದ್ದರೆ ನಾನು ಪುನಃ ಬರುವುದೇ ಇಲ್ಲ - ಏಳು ಹೋಗೋಣ. ಈ ಸ್ಥಳ ಕಂಡರೆ ನನಗೆ ಭಯವಾಗುತ್ತದೆ. "

" ಎಲ್ಲಿಗೆ ಹೋಗುವುದು ? ಬಿಸಿಲು ಸುಡುತ್ತಿದೆ. "

" ತೋಪಿಗೆ ಹೋಗೋಣ - ತಂಬೂರಿ ಕೊಳದಲ್ಲಿ ಈಜುವುದಕ್ಕೆ ಬಿಸಿಲಿದ್ದರೇ ಚೆನ್ನು. "

" ನಿನ್ನ ತಾಯಿ ಕಂಡರೆ ಬಯ್ಯುತ್ತಾರೆ. "

" ತಾಯಿಗೆ ಇವತ್ತು ಪುರಸತ್ತಿಲ್ಲ - ಊಟವಾಗುವುದೂ ತಡ. "

" ಏಕೆ ? "

" ಏಕೆ ಹೇಳು ? "

" ಹಬ್ಬವಿರಬೇಕು. "

" ಹೂ ! ದೊಡ್ಡ ಹಬ್ಬ - ಇವತ್ತು ಮನೆಯಲ್ಲಿ ಕುರಿಹಬ್ಬ. "

" ಅಸ್ಸಿಸ್ಸಿ ! ನಿನ್ನ ವಿಷಯದಲ್ಲಿ ಇದೊಂದೇ ನನಗೆ ಬೇಸರವಾಗುವುದು."

" ಒಂದು ದಿನ ತಂದುಕೊಡುತ್ತೇನೆ. ತಿಂದು ನೋಡು. ಅವತ್ತಿನಿಂದ ನೀನು ಪುಳಿಚಾರು ಊಟ ಮಾಡಿದರೆ ನೀನಿಟ್ಟ ಆಣೆ. "

" ನೀನು ತಂದುಕೊಡಲೂ ಬೇಡ – ನಾನು ತಿನ್ನುವುದೂ ಇಲ್ಲ. ನನಗೆ ಪುಳಿಚಾರು ಊಟವೇ ಸಾಕು. ಹೊಟ್ಟೆಯಲ್ಲಿ ಕೋಳಿ ' ಕೊಕ್ಕೋಕ್ಕೋ ' ಎನ್ನುವುದಿಲ್ಲವೇ – ಕುರಿ ' ಅಂಬ್ಯಾ ' ಎನ್ನುವುದಿಲ್ಲವೇನೇ ಸ್ವರ್ಣಾ. "

ಶ್ರೀಕಂಠನ ಅಸೀಮ ಅಜ್ಞಾನ ಕಂಡು ಸ್ವರ್ಣನಿಗೆ ಹಿಡಿಸಲಾರದಷ್ಟು ನಗು ಬಂದಿತು.

" ಅವು ಬದುಕಿರುತ್ತವೇನೋ ಶ್ರೀಕಂಠ - ಕೊಕೋಕೋ - ಅಂಬ್ಯಾ ಎನ್ನುವುದಕ್ಕೆ. "

" ಸತ್ತ ಹೆಣ ತಿನ್ನುವಿರಾ ? "

" ಹೋಗು ! ತಿನ್ನುವ ಪದಾರ್ಥಕ್ಕೆ ನೀನು ಕೆಟ್ಟ ಹೆಸರಿಟ್ಟರೆ ನನಗೆ ಕೋಪ ಬರುತ್ತದೆ. "

" ಏಳು - ಕೊಳಕ್ಕೆ ಹೋಗೋಣ. "

ಎಂದು ಎಬ್ಬಿಸಿ ಸ್ನಾನಕ್ಕೆ ಬೇಕಾದ ಸಿದ್ಧತೆ ಮಾಡಿಕೊಂಡ.

ಶ್ರೀಕಂಠನ ಮನೆಗೆ ಸುಮಾರು ಒಂದು ಫರ್ಲಾಂಗ್ ದೂರದಲ್ಲಿ ಮೋಹನ ರಂಗಂ ಅವರ ಸರ್ವೇ ತೋಪು. ತಂಬೂರಿ ಕೊಳವಿದ್ದುದು ಸರ್ವೇ ತೋಪಿನಲ್ಲಿಯೇ. ಮೋಹನರಂಗಂ ಅವರ ಮನೆ ತೋಪಿನ ದಕ್ಷಿಣಕ್ಕೆ ಒಂದು, ಒಂದೂವರೆ ಫರ್ಲಾಂಗ್ ದೂರದಲ್ಲಿತ್ತು. ತೋಪಿನ ಉತ್ತರಕ್ಕೆ ಊರಿನ ಕೆರೆಯಿತ್ತು.

ದಾರಿಯಲ್ಲಿ ಬರುವಾಗ ಶ್ರೀಕಂಠ ಬಟ್ಟೆಗಳ ಮರೆಯಲ್ಲಿ ಹಿಡಿದಿದ್ದ ಪುಟ್ಟ ಗಂಟು ಸ್ವರ್ಣನ ಕಣ್ಣಿಗೆ ಬಿತ್ತು.

" ಅದೇನು ಶ್ರೀಕಂಠ ? " ಎಂದು ಕೇಳಿದಳು.

" ಊಹಿಸಿ ಹೇಳು. "

" ನನಗೆ ಗೊತ್ತಿಲ್ಲಪ್ಪಾ. ಟವಲಿರಬಹುದು. "

" ಟವಲೂ ಇದೆ. ಅದರೊಳಗೆ ಅವಲಕ್ಕಿ, ಬೆಲ್ಲ, ಕೊಬ್ಬರಿ ಇದೆ. "

" ಏಕೆ ? "

" ತಿನ್ನುವುದಕ್ಕೆ. ಸ್ನಾನ ಮಾಡಿದ ಮೇಲೆ ಹಸಿವಾಗುವುದಿಲ್ಲವೇ ? "

" ನೀನು ಊಟಕ್ಕೆ ಹೋಗುವುದಿಲ್ಲವೇ ? "

" ಹೋಗುತ್ತೇನೆ. ಮುದುಕಿ ನಿತ್ಯ ಮಾಡಿದ್ದೇ ಮಾಡುತ್ತಾಳೆ — "

" ನೀನು ನಮ್ಮ ಮನೆಗೆ ಊಟಕ್ಕೆ ಬರುವುದಿಲ್ಲ! "

" ಬರುತ್ತಿದ್ದೆ – ಆದರೆ ನೀವು ಕೋಳಿ ಕುರಿ ತಿನ್ನುತ್ತೀರಿ. "

" ಕೋಳಿ ಕುರಿ ಮಾಡದಿದ್ದ ದಿನ ಕರೆಯುತ್ತೇನೆ, ಬರುವೆಯಾ ? "

" ನೋಡೋಣ....ನಾನು ಬಂದರೆ ನಿಮ್ಮ ತಂದೆ ಬಯ್ಯಬಹುದು. "

" ಗಂಡುಬೀರಿ ಎಂದು ತಂದೆ ನನ್ನ ಬಯ್ಯುತ್ತಾರೆ - ಆದರೆ ನನ್ನ ಕಂಡರೆ

ತುಂಬ ಪ್ರೀತಿ."

"ನೀನು ಒಬ್ಬಳೇ ಮಗಳು ಅದಕ್ಕೋಸ್ಕರ ಪ್ರೀತಿ."

"ನನಗೊಬ್ಬ ಅಕ್ಕ ಅಣ್ಣ ಇದ್ದಾರೆ ಶ್ರೀಕಂಠ."

"ಒಂದು ದಿನವೂ ಅವರನ್ನು ಕಾಣಲೇ ಇಲ್ಲ!"

ಸ್ವರ್ಣ ನಿಟ್ಟುಸಿರು ಬಿಟ್ಟಳು. ಆ ಪ್ರಶ್ನೆ ತಾನು ಕೇಳಬಾರದಾಗಿತ್ತೇನೋ ಎಂದು ಶ್ರೀಕಂಠ ಚಿಂತಿಸಿದ.

ಇಬ್ಬರೂ ಕೊಳ ತಲುಪಿದ್ದರು. ಕಟ್ಟೆಯ ಮೇಲೆ ಶ್ರೀಕಂಠ ತನ್ನ ಬಟ್ಟೆಯ ಗಂಟನ್ನಿಟ್ಟು, ಅದರಿಂದ ಒಂದು ಹರುಕಲು ಟವಲು ತೆಗೆದು ಸ್ವರ್ಣನ ಕೈಗಿತ್ತ

"ನೀನು ಸ್ನಾನ ಮುಗಿಸಿಕೊಂಡು ಬಾ - ಆಮೇಲೆ ನಾನು ನೀರಿಗೆ ಇಳಿಯುತ್ತೇನೆ."

"ಕೊಳ ದೊಡ್ಡದಾಗಿದೆ. ನೀನೂ ಒಂದುಕಡೆ ಸ್ನಾನ ಮಾಡಬಹುದು."

"ಬೇಡಮ್ಮಾ.... ನಿಮ್ಮ ತಂದೆ ಕಣ್ಣಿಗೆ ಬಿದ್ದರೆ ನನ್ನ ಬೆನ್ನುಮೂಳೆ ಪುಡಿಪುಡಿಯಾಗುತ್ತದೆ........ನೀನು ಸ್ನಾನ ಮುಗಿಸಿ ನನ್ನನ್ನು ಕರೆ."

"ನೀನು ಎಲ್ಲಿಗೆ ಹೋಗುತ್ತೀ?"

"ಸ್ವಲ್ಪ ದೂರದಲ್ಲಿರುತ್ತೇನೆ."

ಎಂದು ಆ ಸ್ಥಳ ಬಿಟ್ಟು ದೂರ ಸರಿದ.

ಸ್ವರ್ಣ, ಅವನು ಕಣ್ಮರೆಯಾಗುವವರೆಗೂ ಸುಮ್ಮನಿದ್ದು ಸೀರೆ ಬಿಚ್ಚಿಟ್ಟು ಲಂಗದಲ್ಲಿ ನೀರಿಗೆ ಇಳಿದಳು.

ಶ್ರೀಕಂಠ ಅಲ್ಲಿ ಬಿಟ್ಟಿದ್ದ ಕಾಡು ಹೂಗಳನ್ನಾಯ್ದುಕೊಂಡ. ಗಂಧರಹಿತವಾಗಿದ್ದರೂ ಬಗೆಬಗೆಯ ಬಣ್ಣ ಆಕಾರಗಳಿಂದ ಕೂಡಿದ್ದ ಹೂಗಳ ಚೆಲುವು ಅವನ ಮನಸ್ಸಿಗೆ ಉಲ್ಲಾಸವನ್ನುಂಟು ಮಾಡಿತ್ತು.

ಸ್ವರ್ಣ ಸ್ನಾನ ಮುಗಿಸಿಕೊಂಡು ಬಂದು, ತನ್ನ ಬಿಟ್ಟ ಸೀರೆಯನ್ನೇ ಉಟ್ಟು

"ಶ್ರೀಕಂಠಾ" ಎಂದು ಕೂಗಿದಳು.

"ಓ!"

"ನನ್ನ ಸ್ನಾನವಾಯಿತು."

ಶ್ರೀಕಂಠ ಅವಳ ಕೈಗೆ ತಾನು ಸಂಗ್ರಹಿಸಿದ್ದ ಹೂವಿನ ಗೊಂಡೆಯನ್ನಿತ್ತ. ಸ್ವರ್ಣಳ ಕಣ್ಣುಗಳಲ್ಲಿ ಕೃತಜ್ಞತೆ ತುಳುಕಿತು.

ಶ್ರೀಕಂಠ ಸ್ನಾನ ಮುಗಿಸಿಕೊಂಡು ಬರುವಷ್ಟರಲ್ಲಿ ಕಾಡು ಹೂಗಳಿಂದ ಸ್ವರ್ಣ ಅಲಂಕರಿಸಿಕೊಂಡಿದ್ದಳು. ವನದೇವತೆಯಂತೆ ಶೋಭಿಸುತ್ತಿದ್ದ ಅವಳನ್ನು ನೋಡಿ ಶ್ರೀಕಂಠನ ಹೃದಯದಲ್ಲಿ ಆನಂದ ಉಕ್ಕೇರಿತು.

"ನೀನು ತುಂಬ ಚಲುವೆ ಸ್ವರ್ಣ - ಕಾಡುಸುಂದರಿ ಹಾಗೆ ಕಾಣುತ್ತೀ?"

"ನಾನು ಕಾಡು ಮನುಷ್ಯಳೇನು!"

"ಕಾಡು ಹೂಗಳ ಸೊಗಸು, ತೋಟದ ಹೂಗಳಲ್ಲಿರುವುದಿಲ್ಲ."

ಇಬ್ಬರೂ ಸರ್ವೇ ಮರದ ನೆರಳಿನಲ್ಲಿ ಕುಳಿತು ಅವಲಕ್ಕಿಯ ಗಂಟಿಗೆ ಕೈ ಹಾಕಿದರು.

"ನೀನು ಹೇಳಿದ್ದು ನಿಜ ಶ್ರೀಕಂಠ. ಸ್ನಾನ ಮಾಡಿದ ಮೇಲೆ ಹಸಿವಾಗುತ್ತದೆ."

ಶ್ರೀಕಂಠ ಕೊಬ್ಬರಿ ಮುರಿದು ಅವಳ ಕೈಗಿತ್ತು, ಅವಳನ್ನೇ ದಿಟ್ಟಿಸಿ ನೋಡುತ್ತ ಕುಳಿತ. ಸ್ವರ್ಣ ಅದನ್ನು ಗಮನಿಸಿ

"ಏಕೆ ದಿಟ್ಟಿಸಿ ನೋಡುತ್ತಿರುವೆ. ನನ್ನ ಎಂದೂ ನೀನು ನೋಡಿಲ್ಲವೇ?"

"ನೋಡಿದ್ದೇನೆ. ಆದರಿವತ್ತು ನೀನು ನನ್ನ ಕಣ್ಣಿಗೆ ಹೊಸದಾಗಿ ಕಾಣುತ್ತಿರುವೆ."

"ತಲೆತುಂಬ ಹೂವಾಗಿದೆ. ಅದಕ್ಕೆ ಹೊಸಬಳಾಗಿ ಕಂಡು ಬಂದಿರಬೇಕು....ಏನು ಯೋಚಿಸುತ್ತಿರುವೆ?"

"ಹೇಳುತ್ತೇನೆ. ಕೋಪ ಮಾಡಿಕೊಳ್ಳಕೂಡದು."

"ಇಲ್ಲ ಹೇಳು."

"ನಿನ್ನ ಮೂರ್ತಿ ಕಡೆಯಬೇಕೆಂದು ಮನಸ್ಸಾಗಿದೆ."

"ನನ್ನ ಮೂರ್ತಿ....ಉಹೂ - ಬೇಡಪ್ಪಾ ಬೇಡ - ಮನುಷ್ಯರ ಮೂರ್ತಿಗಳನ್ನು ಮಾಡುತ್ತಾರೇನೋ ಶ್ರೀಕಂಠ."

"ನೀನು ನನ್ನ ಕಣ್ಣಿಗೆ ಮನುಷ್ಯಳಲ್ಲ."

"ಇನ್ನೇನು?"

"ದೇವತೆ."

" ಬಿಸಿಲಿನ ತಾಪಕ್ಕೆ ನೀನು ಏನು ಏನೋ ಮಾತಾಡುತ್ತಿರುವೆ. "

" ಇಲ್ಲ ಸ್ವರ್ಣ. ನೀನು ಬಂದು ನಾಲ್ಕು ದಿನ ನನ್ನ ಎದುರಿಗೆ ಕುಳಿತರೆ ಮೂರ್ತಿ ಮಾಡಿಬಿಡುತ್ತೇನೆ. "

" ಮೂರ್ತಿಗಳನ್ನು ಮಾಡುವ ಹುಚ್ಚು ಹೋಗಲೊಲ್ಲದೇ ಶ್ರೀಕಂಠ. "

" ಏಕೆ ಹೋಗಬೇಕು "

" ನೀನು ಪರೀಕ್ಷೆಯಲ್ಲಿ ಪ್ಯಾಸು ಮಾಡಿ, ದೊಡ್ಡ ಕೆಲಸ ಸಂಪಾದಿಸುತ್ತೀ ಎಂದುಕೊಂಡಿದ್ದೆ. "

" ನಾನು ಕೆಲಸಕ್ಕೆ ಹೋಗದಿದ್ದರೆ ನಿನಗೆ ಬೇಸರವಾಗುತ್ತವೆಯೇ ? "

" ಕೆಲಸಕ್ಕೆ ಹೋಗದಿದ್ದರೆ ಸಂಪಾದನೆ ಹೇಗೆ ಮಾಡುತ್ತೀ ? "

" ಮೂರ್ತಿಗಳನ್ನು ಮಾಡಿ. ಇದನ್ನೇ ಚೆನ್ನಾಗಿ ರೂಢಿಸಿಕೊಂಡು ನಾನು ಒಳ್ಳೆಯ ಶಿಲ್ಪಿಯಾಗಬೇಕೆಂದು ಇನ್ಸ್‌ಪೆಕ್ಟರು ಹೇಳಿದ್ದಾರೆ. "

" ಏನೋಪ್ಪ - ನಿನ್ನ ಮಾತೇ ನನಗೆ ಅರ್ಥವಾಗುವುದಿಲ್ಲ. "

" ನಾಳೆಯಿಂದ ಬಂದು ಕೂಡುವೆಯಾ ? "

" ಸ್ಕೂಲು.... "

" ಸ್ಕೂಲು ಮುಗಿದ ಮೇಲೆ....ಅಥವಾ ಬೆಳಿಗ್ಗೆ ಬಂದು ಬಿಡು. "

" ಅಮ್ಮನಿಗೆ ತಿಳಿದರೆ ಬಯ್ಯುತ್ತಾಳೆ. "

" ಮೂರ್ತಿ ನಾನು ಮಾಡಿದಮೇಲೆ ನಿಮ್ಮಮ್ಮ ಸಂತೋಷಪಡುತ್ತಾರೆ."

" ನೀನು ಮಾಡಿದ ಮೂರ್ತಿ ಅಮ್ಮ ನೋಡಿಬಿಟ್ಟರೆ ನನ್ನ ಕಥೆ ಮುಗಿದೇ ಹೋಗುತ್ತದೆ. ಆಗಲಿ - ನಾಳೆಯಿಂದ ಬರುತ್ತೇನೆ. ಆದರೆ ನನ್ನದೊಂದು ಕರಾರು. "

" ಏನು ಕರಾರು ? "

" ಮೂರ್ತಿಯನ್ನು ಯಾರಿಗೂ ತೋರಿಸಕೂಡದು. "

" ಹಾಗೇ ಆಗಲಿ. "

ಎಂದು ಒಪ್ಪಿಕೊಂಡ. ಸ್ವರ್ಣ ಹೊರಡಲೆದ್ದಳು. ಶ್ರೀಕಂಠ ಕುಳಿತ ಸ್ಥಳದಿಂದ ಅಲುಗಾಡಲಿಲ್ಲ.

" ನೀನು ಮನೆಗೆ ಹೋಗುವುದಿಲ್ಲವೇ ? "

" ಸ್ವಲ್ಪ ಹೊತ್ತು ಬಿಟ್ಟು ಹೋಗುತ್ತೇನೆ. ಬೆಳಿಗ್ಗೆ ಬೇಗ ಬಂದುಬಿಡು."

'ಆಗಲಿ' ಎನ್ನುತ್ತ ಸ್ವರ್ಣ ತನ್ನ ಮನೆಯ ಕಡೆ ಓಡಿದಳು.

ಸ್ವರ್ಣ ಹೋಗಿ ಬಹಳ ಹೊತ್ತುಗಳೆದರೂ ಶ್ರೀಕಂಠ ಅವಳು ಹೋದೆಡೆಯನ್ನೇ ದಿಟ್ಟಿಸಿ ನೋಡುತ್ತಿದ್ದ. ಅಸ್ಪಷ್ಟವಾದ ಅವ್ಯಕ್ತವಾದ ಯಾವದೋ ಭಾವನೆ, ಚಿಂತನೆ ಅವನ ಮನಸ್ಸನ್ನಾಕ್ರಮಿಸಿತ್ತು.

ಒಮ್ಮೆಲೇ ತಲೆ ಕೊಡವಿಕೊಂಡು ಎದ್ದು ಕೆರೆಯ ದಂಡೆಗೆ ಹೋದ. ಹೆಪ್ಪುಗಟ್ಟಿದ ಕೆರೆಯ ಜೇಡಿಮಣ್ಣು ಅಲ್ಲಲ್ಲಿ ಬಿರುದು ಬಿಲ್ಲೆಗಳಾಗಿದ್ದವು. ಶ್ರೀಕಂಠ ಕೆಲವನ್ನು ಪರೀಕ್ಷಿಸಿ, ಅವುಗಳಲ್ಲಿ ತನಗೆ ಒಪ್ಪಿಗೆಯಾದ ಒಂದೆರಡನ್ನು ಕೈಯಲ್ಲಿ ಹಿಡಿದು ಬಂದು ಮೊದಲು ಕುಳಿತಿದ್ದ ಸ್ಥಳದಲ್ಲಿಯೇ ಕುಳಿತ. ನೀರು ಬೇಕಾಯಿತು. ತನ್ನ ಹಳೆಯ ಟವಲನ್ನೇ ತೊಯಿಸಿ ತಂದಿಟ್ಟುಕೊಂಡು, ಬಿದುರಿನ ಕಡ್ಡಿಯೊಂದನ್ನಾಯ್ದು ಅದನ್ನೇ ಉಗುರಿನ ಮೊನೆಯಿಂದ ಅಣಿಮಾಡಿಕೊಂಡ.

ಜೇಡಿಮಣ್ಣಿನ ಒಂದು ಬಿಲ್ಲೆಯನ್ನು ಕೈಗೆತ್ತಿಕೊಂಡು, ಅದರ ಮೇಲ್ಭಾಗವನ್ನು ಸಮ ಮಾಡಿಕೊಂಡ. ಬಿದುರಿನ ಕಡ್ಡಿಯೇ ಲೇಖನಿಯಾಯಿತು. ಕಡ್ಡಿಯ ತುದಿಯಿಂದ ಮೃಣ್ಮೂರ್ತಿಯೊಂದನ್ನು ಜೇಡಿಮಣ್ಣಿನಲ್ಲಿ ಅರಳಿಸಲೆತ್ನಿಸಿದ.

ಹೊತ್ತು ಸಾಗುತ್ತಲೇ ಇತ್ತು.

ಸಂಧ್ಯಾರಮಣಿಯ ಕಡೆಗೆ ಓಗೊಟ್ಟು ಸೂರ್ಯದೇವ ಪಶ್ಚಿಮಾದ್ರಿಯ ಕಡೆಗೆ ಧಾವಿಸುತ್ತಿದ್ದ.

ಮೃಣ್ಮೂರ್ತಿ ಮುಗಿದಿತ್ತು. ಅದನ್ನು ಜೋಕೆಯಿಂದ ತನ್ನ ಬಟ್ಟೆಯ ಮೇಲಿಟ್ಟು ಕೊಳದಲ್ಲಿ ಕೈತೊಳೆದುಕೊಂಡು, ಬಟ್ಟೆಗಳನ್ನೂ, ಮೂರ್ತಿಯನ್ನೂ ಸಂಗ್ರಹಿಸಿಕೊಂಡು ಮನೆಗೆ ನಡೆದ.

ಮುದುಕಿ ಶ್ರೀಕಂಠನಿಗೆ ತಂದಿಟ್ಟಿದ್ದ ಅನ್ನ ಸಾರು ಬೆಕ್ಕಿನ ಪಾಲಾಗಿತ್ತು.

ಹಸಿವನ್ನು ಮರೆತು ಶ್ರೀಕಂಠ ತನ್ನ ಮೃಣ್ಮೂರ್ತಿ ನೋಡಿ ಮುಗುಳ್ನಗೆ ನಕ್ಕ.

ಇನ್‌ಸ್ಪೆಕ್ಟರ್ ರಾಮನಾಥಯ್ಯನವರ ಸೂಚನೆ ಮಾದಯ್ಯನವರಿಗೆ

" ಬಿಸಿಲಿನ ತಾಪಕ್ಕೆ ನೀನು ಏನು ಎನೋ ಮಾತಾಡುತ್ತಿರುವೆ. "

" ಇಲ್ಲ ಸ್ವರ್ಣ. ನೀನು ಬಂದು ನಾಲ್ಕು ದಿನ ನನ್ನ ಎದುರಿಗೆ ಕುಳಿತರೆ ಮೂರ್ತಿ ಮಾಡಿಬಿಡುತ್ತೇನೆ. "

" ಮೂರ್ತಿಗಳನ್ನು ಮಾಡುವ ಹುಚ್ಚು ಹೋಗಲೊಲ್ಲದೇ ಶ್ರೀಕಂಠ. "

" ಏಕೆ ಹೋಗಬೇಕು "

" ನೀನು ಪರೀಕ್ಷೆಯಲ್ಲಿ ಪ್ಯಾಸು ಮಾಡಿ, ದೊಡ್ಡ ಕೆಲಸ ಸಂಪಾದಿಸುತ್ತೀ ಎಂದುಕೊಂಡಿದ್ದೆ. "

" ನಾನು ಕೆಲಸಕ್ಕೆ ಹೋಗದಿದ್ದರೆ ನಿನಗೆ ಬೇಸರವಾಗುತ್ತವೆಯೇ ? "

" ಕೆಲಸಕ್ಕೆ ಹೋಗದಿದ್ದರೆ ಸಂಪಾದನೆ ಹೇಗೆ ಮಾಡುತ್ತೀ ? "

" ಮೂರ್ತಿಗಳನ್ನು ಮಾಡಿ. ಇದನ್ನೇ ಚೆನ್ನಾಗಿ ರೂಢಿಸಿಕೊಂಡು ನಾನು ಒಳ್ಳೆಯ ಶಿಲ್ಪಿಯಾಗಬೇಕೆಂದು ಇನ್ಸ್‌ಪೆಕ್ಟರು ಹೇಳಿದ್ದಾರೆ. "

" ಏನೋಪ್ಪ - ನಿನ್ನ ಮಾತೇ ನನಗೆ ಅರ್ಥವಾಗುವುದಿಲ್ಲ. "

" ನಾಳೆಯಿಂದ ಬಂದು ಕೂಡುವೆಯಾ ? "

" ಸ್ಕೂಲು.... "

" ಸ್ಕೂಲು ಮುಗಿದ ಮೇಲೆ....ಅಥವಾ ಬೆಳಿಗ್ಗೆ ಬಂದು ಬಿಡು. "

" ಅಮ್ಮನಿಗೆ ತಿಳಿದರೆ ಬಯ್ಯುತ್ತಾಳೆ. "

" ಮೂರ್ತಿ ನಾನು ಮಾಡಿದಮೇಲೆ ನಿಮ್ಮಮ್ಮ ಸಂತೋಷಪಡುತ್ತಾರೆ."

" ನೀನು ಮಾಡಿದ ಮೂರ್ತಿ ಅಮ್ಮ ನೋಡಿಬಿಟ್ಟರೆ ನನ್ನ ಕಥೆ ಮುಗಿದೇ ಹೋಗುತ್ತದೆ. ಆಗಲಿ - ನಾಳೆಯಿಂದ ಬರುತ್ತೇನೆ. ಆದರೆ ನನ್ನದೊಂದು ಕರಾರು. "

" ಏನು ಕರಾರು ? "

" ಮೂರ್ತಿಯನ್ನು ಯಾರಿಗೂ ತೋರಿಸಕೂಡದು. "

" ಹಾಗೇ ಆಗಲಿ. "

ಎಂದು ಒಪ್ಪಿಕೊಂಡ. ಸ್ವರ್ಣ ಹೊರಡಲೆದ್ದಳು. ಶ್ರೀಕಂಠ ಕುಳಿತ ಸ್ಥಳದಿಂದ ಅಲುಗಾಡಲಿಲ್ಲ.

" ನೀನು ಮನೆಗೆ ಹೋಗುವುದಿಲ್ಲವೇ ? "

" ಸ್ವಲ್ಪ ಹೊತ್ತು ಬಿಟ್ಟು ಹೋಗುತ್ತೇನೆ. ಬೆಳಿಗ್ಗೆ ಬೇಗ ಬಂದುಬಿಡು."

'ಆಗಲಿ' ಎನ್ನುತ್ತ ಸ್ವರ್ಣ ತನ್ನ ಮನೆಯ ಕಡೆ ಓಡಿದಳು.

ಸ್ವರ್ಣ ಹೋಗಿ ಬಹಳ ಹೊತ್ತುಗಳೆದರೂ ಶ್ರೀಕಂಠ ಅವಳು ಹೋದೆಡೆ ಯನ್ನೇ ದಿಟ್ಟಿಸಿ ನೋಡುತ್ತಿದ್ದ. ಅಸ್ಪಷ್ಟವಾದ ಅವ್ಯಕ್ತವಾದ ಯಾವದೋ ಭಾವನೆ, ಚಿಂತನೆ ಅವನ ಮನಸ್ಸನ್ನಾಕ್ರಮಿಸಿತ್ತು.

ಒಮ್ಮೆಲೇ ತಲೆ ಕೊಡವಿಕೊಂಡು ಎದ್ದು ಕೆರೆಯ ದಂಡೆಗೆ ಹೋದ. ಹೆಪ್ಪುಗಟ್ಟಿದ ಕೆರೆಯ ಜೇಡಿಮಣ್ಣು ಅಲ್ಲಲ್ಲಿ ಬಿರುದು ಬಿಲ್ಲೆಗಳಾಗಿದ್ದವು. ಶ್ರೀ ಕಂಠ ಕೆಲವನ್ನು ಪರೀಕ್ಷಿಸಿ, ಅವುಗಳಲ್ಲಿ ತನಗೆ ಒಪ್ಪಿಗೆಯಾದ ಒಂದೆರಡನ್ನು ಕೈಯಲ್ಲಿ ಹಿಡಿದು ಬಂದು ಮೊದಲು ಕುಳಿತಿದ್ದ ಸ್ಥಳದಲ್ಲಿಯೇ ಕುಳಿತ. ನೀರು ಬೇಕಾಯಿತು. ತನ್ನ ಹಳೆಯ ಟವಲನ್ನೇ ತೊಯಿಸಿ ತಂದಿಟ್ಟುಕೊಂಡು, ಬಿದುರಿನ ಕಡ್ಡಿಯೊಂದನ್ನಾಯ್ದು ಅದನ್ನೇ ಉಗುರಿನ ಮೊನೆಯಿಂದ ಅಣಿಮಾಡಿ ಕೊಂಡ.

ಜೇಡಿಮಣ್ಣಿನ ಒಂದು ಬಿಲ್ಲೆಯನ್ನು ಕೈಗೆತ್ತಿಕೊಂಡು, ಅದರ ಮೇಲ್ಭಾಗ ವನ್ನು ಸಮ ಮಾಡಿಕೊಂಡ. ಬಿದುರಿನ ಕಡ್ಡಿಯೇ ಲೇಖನಿಯಾಯಿತು. ಕಡ್ಡಿಯ ತುದಿಯಿಂದ ಮೃಣ್ಮೂರ್ತಿಯೊಂದನ್ನು ಜೇಡಿಮಣ್ಣಿನಲ್ಲಿ ಅರಳಿಸಲೆತ್ನಿ ಸಿದ.

ಹೊತ್ತು ಸಾಗುತ್ತಲೇ ಇತ್ತು.

ಸಂಧ್ಯಾರಮಣಿಯ ಕಡೆಗೆ ಓಗೊಟ್ಟು ಸೂರ್ಯದೇವ ಪಶ್ಚಿಮಾದ್ರಿಯ ಕಡೆಗೆ ಧಾವಿಸುತ್ತಿದ್ದ.

ಮೃಣ್ಮೂರ್ತಿ ಮುಗಿದಿತ್ತು. ಅದನ್ನು ಜೋಕೆಯಿಂದ ತನ್ನ ಬಟ್ಟೆಯ ಮೇಲಿಟ್ಟು ಕೊಳದಲ್ಲಿ ಕೈತೊಳೆದುಕೊಂಡು, ಬಟ್ಟೆಗಳನ್ನೂ, ಮೂರ್ತಿಯನ್ನೂ ಸಂಗ್ರಹಿಸಿಕೊಂಡು ಮನೆಗೆ ನಡೆದ.

ಮುದುಕಿ ಶ್ರೀಕಂಠನಿಗೆ ತಂದಿಟ್ಟಿದ್ದ ಅನ್ನ ಸಾರು ಬೆಕ್ಕಿನ ಪಾಲಾಗಿತ್ತು.

ಹಸಿವನ್ನು ಮರೆತು ಶ್ರೀಕಂಠ ತನ್ನ ಮೃಣ್ಮೂರ್ತಿ ನೋಡಿ ಮುಗುಳ್ನಗೆ ನಕ್ಕ.

೩

ಇನ್‌ಸ್ಪೆಕ್ಟರ್ ರಾಮನಾಥಯ್ಯನವರ ಸೂಚನೆ ಮಾದಯ್ಯನವರಿಗೆ

' ಮಹದಾಜ್ಞೆ ' ಯಾಗಿತ್ತು. ಶ್ರೀಕಂಠನಿಗೆ ಇಂಗ್ಲಿಷ್ ಹೇಳಿಕೊಡುವ ಜವಾಬ್ದಾರಿಯನ್ನು ಅವರು ತ್ರಿಕರಣಪೂರ್ವಕವಾಗಿ ಸ್ವೀಕರಿಸಿ ಇನ್‌ಸ್ಪೆಕ್ಟರ ವಿಶ್ವಾಸಕ್ಕೆ ಪಾತ್ರರಾಗಲು ನಿರ್ಧರಿಸಿದ್ದರು. ಮಾರನೆಯ ದಿನ ಬೆಳಿಗ್ಗೆ ಮನೆಗೆ ಬಂದ ಮಾದಯ್ಯನವರನ್ನು ನೋಡಿ ಶ್ರೀಕಂಠನ ಮನಸ್ಸಿಗೆ ಕಿರಿಕಿರಿಯಾಯಿತು. ವೃಥಾ ಕಾಲಹರಣಕ್ಕೆ ಅವಕಾಶ ಕೊಡದೆ ಮಾದಯ್ಯನವರು ಚಾಪೆಯಮೇಲೆ ಕುಳಿತು ಇಂಗ್ಲಿಷ್ ಪುಸ್ತಕ ಹೊರತೆಗೆದರು.

ಇಂಗ್ಲಿಷ್ ಕಲಿಯುವುದಕ್ಕೆ ಶ್ರೀಕಂಠ ಉತ್ಸುಕನಾಗಿದ್ದ. ಸ್ವಯಂ ಹೆಡ್ ಮಾಸ್ಟರೇ ಮನೆಗೆ ಬಂದು ಪಾಠ ಹೇಳುವುದು ಅವನಿಗೆ ಅಭಿಮಾನಾಸ್ಪದವಾಗಿತ್ತು. ಇಂಗ್ಲಿಷನ್ನು ಬಹು ಬೇಗ - ಚೆನ್ನಾಗಿ ಕಲಿತು ಎಲ್ಲರನ್ನೂ ಆಶ್ಚರ್ಯಚಕಿತರನ್ನಾಗಿ ಮಾಡಬೇಕೆಂಬ ಲವಲವಿಕೆಯೂ ಅವನಲ್ಲಿ ನೆಲಸಿತ್ತು.

ಆದರೆ ಅಂದು ಬೆಳಿಗ್ಗೆ ಪಾಠ ಆರಂಭಿಸುವುದು ಅವನಿಗೆ ಅಪ್ರಿಯವಾಗಿತ್ತು. ಚಿತ್ತ ಬೇರೆ ಎಲ್ಲಿಯೋ ಹರಿದಿತ್ತು ಕ್ಷಣಕ್ಕೊಮ್ಮೆ ಬಾಗಿಲು ಕಡೆ ನೋಡುವನು. ಮಾದಯ್ಯನವರ ಪಾಠ ಗಾಳಿಯಲ್ಲೇ ಗುಂಯ್‌ಗುಡಲಾರಂಭಿಸಿತು. ಶ್ರೀಕಂಠನ ಅಸ್ಥಿರತೆಯನ್ನು ಮಾದಯ್ಯನವರು ನಾಲ್ಕಾರು ಬಾರಿ ಗಮನಿಸಿದರು. ಚಿತ್ತವನ್ನು ಪಾಠದ ಮೇಲಿಟ್ಟು, ಏಕಾಗ್ರಚಿತ್ತತೆಯಿಂದ ಅಭ್ಯಾಸ ಮಾಡಬೇಕೆಂದು ಶಿಷ್ಯನಿಗೆ ಸೂಚಿಸಿದರು. ಅವರು ಎಚ್ಚರವಿತ್ತಾಗ ಶ್ರೀಕಂಠ ಪುಸ್ತಕ ದಿಟ್ಟಿಸಿ ನೋಡುವನು. ಮರುಕ್ಷಣವೇ ಅವನ ಮನಸ್ಸು ಬಾಗಿಲತ್ತ ಹಾರಿಹೋಗುತ್ತಿತ್ತು.

ಮಾದಯ್ಯನವರು ಬೇಸರಗೊಂಡು

" ಏನಾಗಿದೆಯೋ ನಿನಗೆ ಶ್ರೀಕಂಠ " ಎಂದು ಕೇಳಿದರು.

ಬಾಗಿಲಾಚೆ ಸ್ವರ್ಣ ಸುಳಿದಾಡಿದುದನ್ನು ಕಂಡಿದ್ದ ಶ್ರೀಕಂಠ ತಬ್ಬಿಬ್ಬಾಗಿ

" ಏನೂ ಇಲ್ಲ ಸಾರ್ " ಎಂದ.

" ಏನೂ ಇಲ್ಲದಿದ್ದರೆ ಹೀಗೇಕೆ ಆಡುತ್ತಿರುವೆ. ಪಾಠ ಬೇಡವೇನು? "

" ಬೇಕು ಸಾರ್. "

" ನಿನ್ನ ಬೃಹಸ್ಪತಿ ಮಾಡಬೇಕೆಂದು ಇನ್‌ಸ್ಪೆಕ್ಟರ ಇಚ್ಛೆ. ನೀನೋ ಮಂಗನ ಹಾಗೆ ಆಡುತ್ತಿದ್ದೀ! ನಿಮ್ಮ ಮಧ್ಯೆ ಸಿಕ್ಕಿಕೊಂಡು ನಾನು ಅವಸ್ಥೆ ಪಡಬೇಕಾಗಿದೆ. "

ಸುಳ್ಳು ಹೇಳದೆ ಆ ಬಿಕ್ಕಟ್ಟಿನಿಂದ ಶ್ರೀಕಂಠ ಪಾರಾಗುವ ಹಾಗೇ ಇರಲಿಲ್ಲ. ಹೊರಗಡೆ ಸುಳಿದಾಡುತ್ತಿದ್ದ ಸ್ವರ್ಣ, ಮೇಸ್ಟರ ಕಣ್ಣಿಗೆ ಬಿದ್ದರೆ ಅನಾಹುತವಾಗುವುದೆಂಬ ಭಯವೂ ಅವನನ್ನು ಆವರಿಸಿತು. ಮೇಸ್ಟ್ರನ್ನು ಆದಷ್ಟು ಬೇಗ ಮನೆಯಿಂದ ಕಳುಹಿಸಲು ಅವನು ಬುದ್ಧಿ ಓಡಿಸತೊಡಗಿದ.

"ನಿನ್ನೆ ರಾತ್ರಿ ಸ್ವಲ್ಪ ಜ್ವರ ಬಂತು ಸಾರ್ - ಮೈಯಲ್ಲಿ ಚೆನ್ನಾಗಿಲ್ಲ."

"ಮೊದಲೇ ಏಕೆ ಹೇಳಬಾರದಾಗಿತ್ತು. ನಾಳೆಯಿಂದ ಪಾಠ ಆರಂಭಿಸುತ್ತಿದ್ದೆ. ಈಗ ಹೇಗಿದೆ ಮೈಯಲ್ಲಿ ?"

"ಜ್ವರ ಬಿಟ್ಟಿದೆ. ಆದರೆ ಮೈಕೈ ತುಂಬ ನೋವು."

"ಶೀತಜ್ವರ ಇರಬೇಕು. ಬೆಚ್ಚಗೆ ಹೊದೆದುಕೊಂಡು ಮಲಗಿ ಬಿಡು. ಶಾಲೆಗೆ ಬರಬೇಡ. ನಾಳೆ ಬೆಳಿಗ್ಗೆ ಬಂದು ನಾನು ಪಾಠ ಮುಂದುವರಿಸುತ್ತೇನೆ."

ಎಂದು ಮಾದಯ್ಯನವರು ಹೇಳಿ ಮೇಲಕ್ಕೆದ್ದರು. ಮೇಸ್ಟರಿಗೆ ಎಷ್ಟು ಕೃತಜ್ಞತೆ ತೋರಿಸಿ, ಎಷ್ಟು ಅಭಿವಂದಿಸಿದರೂ ಸಾಲದೆನಿಸಿತು ಶ್ರೀಕಂಠನಿಗೆ.

ಮಾದಯ್ಯನವರು ಹೋದುದನ್ನೇ ನೋಡುತ್ತಿದ್ದ ಸ್ವರ್ಣ ಮೆಲ್ಲನೆ ಶ್ರೀಕಂಠನ ಮನೆಗೆ ಬಂದಳು. ನಿತ್ಯದ ನಗೆ ಅವಳ ಮುಖದಿಂದ ಮಾಯವಾಗಿತ್ತು. ನಸುಗೋಪ ಅವಳ ರಕ್ತವರ್ಣ ಕಾಂತಿಗೆ ಮೆರುಗುಗೊಟ್ಟಿತ್ತು.

"ಕೋಪ ಬಂತೇ ಸ್ವರ್ಣ?" ಎಂದು ಶ್ರೀಕಂಠ ಕೇಳಿದ.

ಸ್ವರ್ಣ ಉತ್ತರ ಕೊಡಲಿಲ್ಲ.

"ಇಷ್ಟು ಬೇಗ ನಿನಗೆ ಕೋಪ ಬರುವುದೆಂದು ನನಗೆ ಗೊತ್ತಿರಲಿಲ್ಲ!"

ಸ್ವರ್ಣ ಶ್ರೀಕಂಠನ ಕಡೆ ತಿರುಗಿ ಕುಡಿಮಿಂಚಿನ ನೋಟ ಬೀರುತ್ತಾ

"ಮೇಸ್ಟ್ರು ಬರುತ್ತಾರೆಂದು ನೀನೇಕೆ ನನಗೆ ಹೇಳಲಿಲ್ಲ."

"ಅವರು ಬರುವುದು ನನಗೆ ಗೊತ್ತಿರಲಿಲ್ಲ — ನಿಜವಾಗಿ ಗೊತ್ತಿರಲಿಲ್ಲ ಸ್ವರ್ಣ. ನನ್ನ ಮಾತನ್ನು ನಂಬು."

"ಹೊರಗೆ ಕಾದಿರುವುದು ಎಷ್ಟು ಕಷ್ಟ ಗೊತ್ತೋ ?"

ಶ್ರೀಕಂಠ ಮರುಮಾತಾಡದೆ ಹಿಂದಿನ ರಾತ್ರಿ ತಾನು ಮುಗಿಸಿದ್ದ ಮೃಣ್ಮೂರ್ತಿಯನ್ನು ತಂದು ಸ್ವರ್ಣನಿಗೆ ತೋರಿಸಿದ.

ಕೋಪದ ಮೋಡಗಳು ಮೆಲ್ಲನೆ ಜಾರಿ, ನಸುಬೆಳದಿಂಗಳು ಮೂಡಿತು.

ಮೃಣ್ಮೂರ್ತಿಯನ್ನು ಕೈಯಲ್ಲಿ ಹಿಡಿದು ಸ್ವರ್ಣ ಅದನ್ನೇ ದಿಟ್ಟಿಸಿ ನೋಡುತ್ತ ಮಧ್ಯೆ ಮಧ್ಯೆ ತಲೆಯೆತ್ತಿ ಶ್ರೀಕಂಠನನ್ನು ನೋಡುತ್ತಿದ್ದಳು.

" ಮೂರ್ತಿ ಸರಿಯಾಗಿದೆಯೇ ? "

" ನೀನೇ ಇದನ್ನು ಮಾಡಿದೆಯಾ ಶ್ರೀಕಂಠ. "

" ನಿನ್ನೆ ನಿನ್ನ ಎದುರಿಗೇ ಆರಂಭಿಸಲಿಲ್ಲವೇ ? "

" ಹೌದು - ಆದರೂ ನಂಬಲಾರೆ. "

ಶ್ರೀಕಂಠ ನಿರೀಕ್ಷಿಸಿದ್ದ ಸಂಭಾವನೆ ದೊರೆತಂತಾಯಿತು. ತೃಪ್ತಿಯಿಂದ ನಸುನಕ್ಕ. ಸ್ವರ್ಣ ತನ್ನ ವಿಸ್ಮೃತಿಯಿಂದ ಎಚ್ಚೆತ್ತು

" ಸ್ಕೂಲಿಗೆ ಹೊತ್ತಾಗಲಿಲ್ಲವೇ ? "

" ಮೇಷ್ಟ್ರು ನನಗೆ ರಜಾ ಕೊಟ್ಟಿದ್ದಾರೆ. "

" ಏಕೆ ? "

" ಮೈಯಲ್ಲಿ ಸರಿಯಿಲ್ಲವೆಂದು ಹೇಳಿದೆ. "

" ಮೈಯಲ್ಲಿ ಸರಿಯಾಗಿಲ್ಲವೇ ? "

" ನನಗೇನೂ ಆಗಿಲ್ಲ - ಮೇಷ್ಟ್ರುನ್ನು ಕಳಿಸಲು ಹಾಗೆ ಹೇಳಬೇಕಾಯಿತು. "

" ಮೇಷ್ಟ್ರಿಗೆ ಸುಳ್ಳು ಹೇಳುತ್ತಾರೆಯೇ ? "

" ಇನ್ನೇನು ಮಾಡಲಿ - ಬಡಪೆಟ್ಟಿಗೆ ಅವರು ಕದಲುವಂತಿರಲಿಲ್ಲ. "

" ಮೇಷ್ಟ್ರು ದಿನಾ ಪಾಠಕ್ಕೆ ಬಂದರೆ ನಾನು ಹೇಗೆ ಬರಲಿ ? "

" ಅದಕ್ಕೊಂದು ಮಾರ್ಗ ಯೋಚಿಸಿದ್ದೇನೆ. ಆದರೆ........ "

" ಹೇಳು ಶ್ರೀಕಂಠ. "

" ನಿನಗೆ ತೊಂದರೆಯಾಗುತ್ತದೆ. "

" ತೊಂದರೆಯಾದರೂ ಚಿಂತೆಯಿಲ್ಲ - ಹೇಳು. "

" ಹುಲಿಯೂರಿಗೆ ಹೋಗುವ ರಸ್ತೆಯ ಬದಿಯಲ್ಲಿ ಒಂದು ಹಾಳು ಮಂಟಪವಿದೆ. "

" ಅಲ್ಲಿ ಭೂತಗಳು ವಾಸ ಮಾಡುತ್ತವಂತೆ. "

" ಅಂಜುಬುರುಕರು ಹುಟ್ಟಿಸಿರುವ ಸುದ್ದಿ - ಭೂತಗಳು ಬೆಳಿಗ್ಗೆ ಹೊತ್ತು ಹೊರಬರುವುದಿಲ್ಲ. "

"ನನಗೆ ಭಯವಾಗುತ್ತದಪ್ಪಾ."

"ನಾನಿರುವಾಗ ಭಯವೇಕೆ? ಬೆಳಗ್ಗೆ ಅಲ್ಲಿಗೆ ನಾನು ಬರುತ್ತೇನೆ – ನೀನೂ ಬಂದು ಬಿಡು. ಬಾ - ಹೋಗೋಣ - ಸ್ಥಳ ತೋರಿಸುತ್ತೇನೆ." ಎಂದು ಹೇಳಿದ.

ಅಂಜಿಕೊಂಡ ಸ್ವರ್ಣ ಶ್ರೀಕಂಠನನ್ನು ಹಿಂಬಾಲಿಸಿದಳು.

ಹುಲಿಯೂರು ರಸ್ತೆಯ ಬದಿಗಿದ್ದ ಹಾಳು ಮಂಟಪದ ಬಗ್ಗೆ ಸ್ವರ್ಣ ಹೇಳಿದುದು ಯಥಾರ್ಥವಾಗಿತ್ತು. ಸೂರ್ಯಾಸ್ತವಾದ ಮೇಲೆ ಜನ ಒಬ್ಬೊಬ್ಬರೇ ಆ ರಸ್ತೆಯಲ್ಲಿ ತಿರುಗಾಡಲು ಹೆದರುತ್ತಿದ್ದರು. ಒಂದು ಭೂತ ಸಂಸಾರ ಸಮೇತ ಅಲ್ಲಿ ಮನೆ ಮಾಡಿಕೊಂಡಿದೆಯೆಂದು ಜನರಲ್ಲಿ ಪ್ರಸಾರವಾಗಿತ್ತು.

ಈ ಹಾಳು ಮಂಟಪದಲ್ಲಿ ಒಂದು ಕಾಲಕ್ಕೆ ಆಂಜನೇಯ ಸ್ವಾಮಿಯ ನಾಲ್ಕಡಿ ಮೂರ್ತಿಯಿತ್ತು. ವಾರಕ್ಕೊಮ್ಮೆ ಗುಂಜೂರಿನಿಂದ ಒಬ್ಬ ಪೂಜಾರಿ ಬಂದು, ದೇವರ ತಲೆಯ ಮೇಲೆ ಒಂದು ಚೆಂಬು ಬಗ್ಗಡದ ನೀರು ಸುರಿದು ನಾಲ್ಕು ಹೂವೇರಿಸಿ ಹೋಗುತ್ತಿದ್ದ. ಪೂಜಾರಿಗೆ ಬರುತ್ತಿದ್ದ ಎರಡೂಕಾಲಾಣೆ ಮಾಸಾಶನ ಏತಕ್ಕೂ ಸಾಲುತ್ತಿರಲಿಲ್ಲವಾದ್ದರಿಂದ, ಅವನು ದೇವರಿಗೆ ದೀಪ ಹಚ್ಚುವ ಗೋಜಿಗೂ ಹೋಗುತ್ತಿರಲಿಲ್ಲ.

ಒಂದು ದಿನ ಆಂಜನೇಯಸ್ವಾಮಿಗೆ ಗ್ರಹಚಾರ ಒಕ್ಕರಿಸಿತು. ಸ್ವಾಮಿಯ ವಿಗ್ರಹದ ಕೆಳಗೆ ಹಣವಿದೆಯೆಂಬ ಭ್ರಾಂತಿಯಿಂದ ಯಾರೋ ಪುಂಡರು ವಿಗ್ರಹ ಕದಲಿಸಲು ಪ್ರಯತ್ನಿಸಿ ಅದನ್ನು ಛಿನ್ನಭಿನ್ನ ಮಾಡಿಬಿಟ್ಟಿದ್ದರು. ಭಿನ್ನಮೂರ್ತಿಗೆ ಪೂಜೆ ಸಲ್ಲಿಸಲು ಇಷ್ಟಪಡದೆ ಪೂಜಾರಿ ಅಲ್ಲಿಗೆ ಬರುವುದನ್ನೇ ನಿಲ್ಲಿಸಿಬಿಟ್ಟಿದ್ದ.

ಪೂಜಾರಿ ಬರುವುದು ನಿಂತು ಹೋದ ಮೇಲೆ ಊರಿನ ಪುಂಡು ಪೋಕರಿಗಳಿಗೆ ಹಾಳು ದೇವಸ್ಥಾನ ಆಶ್ರಯ ಕೊಟ್ಟಿತು. ಗಾಂಜಾ, ಅಫೀಮು ಸೇದುವವರಿಗೂ, ಮೂರೆಲೆ ಆಟವಾಡುವವರಿಗೂ ಆಂಜನೇಯ ಸ್ವಾಮಿಯ ಹಾಳು ಮಂಟಪ ತೌರುಮನೆಯಾಗುತ್ತ ಬಂತು. ಆ ರಸ್ತೆಯಲ್ಲಿ ತಿರುಗಾಡುವುದಕ್ಕೆ ಜನ ಹೆದರುತ್ತಿದ್ದರು. ಆಗಾಗ್ಗೆ ರಸ್ತೆಯಲ್ಲಿ ಬರುತ್ತಿದ್ದ ಒಂಟಿಗಾಡಿಗಳನ್ನು ಹಿಡಿದು ನಿಲ್ಲಿಸಿ ಪುಂಡರು ದೋಚುತ್ತಿದ್ದರು. ಸ್ತ್ರೀಯರ ಮಾನಾಪಹರಣ ಪ್ರಸಂಗಗಳೂ ನಡೆಯುತ್ತಿದ್ದವು.

ಊರಿನ ಪೋಲೀಸಿನವರಿಗೆ ಹಲವು ದೂರುಗಳು ಹೋದರೂ ಅವರು

ಪುಂಡರ ಮೇಲೆ ಕೈಯೆತ್ತಲಿಲ್ಲ. ಪುಂಡರಿಗೂ ಪೋಲೀಸಿನವರಿಗೂ ಒಪ್ಪಂದವಾಗಿದೆಯೆಂಬ ದೂರು ಸರ್ಕಾರದವರೆಗೂ ಹೋಯಿತು. ಸಬ್ ಇನ್‌ಸ್ಪೆಕ್ಟರ್ ಶೀನಪ್ಪನಿಗೆ ವರ್ಗವಾಗಿ ಅವನ ಸ್ಥಾನಕ್ಕೆ ನಂಜುಂಡಸ್ವಾಮಿ ಬಂದ.

ಗುಂಜೂರಿಗೆ ಬಂದ ನಂಜುಂಡಸ್ವಾಮಿ ಎರಡು ಮೂರು ತಿಂಗಳು ಆಲಸ್ಯ ವೃತ್ತಿಯನ್ನವಲಂಬಿಸಿಬಿಟ್ಟ. ಪುಂಡರು ಅವನಿಗೆ 'ಮಾಮೂಲಿ'ನ ರುಚಿ ತೋರಿಸಿದ್ದಾರೆಂದು ಜನ ಆಡಿಕೊಳ್ಳಲು ಮೊದಲು ಮಾಡಿದರು. ಒಂದು ಸಂಜೆ ನಂಜುಂಡಸ್ವಾಮಿ ದೇವಸ್ಥಾನವನ್ನು ಪೋಲೀಸ ದಳದ ಸಹಾಯದಿಂದ ಸುತ್ತುಗಟ್ಟಿ, ದೇವಸ್ಥಾನದಲ್ಲಿದ್ದ ಸಮಸ್ತರನ್ನೂ ಸೆರೆಹಿಡಿದು ತಂದು, ಸ್ಟೇಶನ್ನಿನಲ್ಲಿ ಹಾಕಿಕೊಂಡು ಕೈಕಾಲು ತುಂಡಾಗುವ ಹಾಗೆ ಬಡಿದ. ಪುಂಡರ ಮೇಲೆ ಕೇಸು ದಾಖಲೆಯಾಗಿ ಅವರಿಗೆ ಉಗ್ರ ಶಿಕ್ಷೆಗಳು ವಿಧಾಯಕವಾದವು.

ಪುಂಡರ ಕಾಟದಿಂದ ಆಂಜನೇಯಸ್ವಾಮಿ ಬಿಡುಗಡೆ ಹೊಂದಿದ. ಆದರೆ ದೇವಸ್ಥಾನದ ಅಪಕೀರ್ತಿ ಅಳಿಸಿ ಹೋಗಲಿಲ್ಲ. ಜನಗಳ ಮನಸ್ಸಿನಿಂದ ಭಯ ದೂರವಾಗಲಿಲ್ಲ. ದೇವಸ್ಥಾನ ಹಾಳುಬಿತ್ತು.

ಏಕಾಂಗಿಯಾಗಿದ್ದ ಶ್ರೀಕಂಠ ಆಗಾಗ್ಗೆ ಆಂಜನೇಯ ದೇವಸ್ಥಾನದ ಬಳಿ ಹೋಗಿ ಕೂಡುತ್ತಿದ್ದ. ಅತ್ತ ಯಾರೂ ಸುಳಿಯುತ್ತಿರಲಿಲ್ಲವಾದ್ದರಿಂದ ಅವನ ಏಕಾಂತ ಚಿಂತನೆಗೆ ಭಂಗ ಬರುತ್ತಿರಲಿಲ್ಲ.

ಶಿಲ್ಪಾಭ್ಯಾಸಕ್ಕೆ ಈ ಸ್ಥಳವೇ ಉತ್ತಮವಾದುದೆಂದು ಶ್ರೀಕಂಠನಿಗೆ ಮನವರಿಕೆಯಾಯಿತು. ಮೊದಲು ಅಂಜಿದ್ದ ಸ್ವರ್ಣ ಕಾಲಕ್ರಮೇಣ ಪರಿಸ್ಥಿತಿಗೆ ಹೊಂದಿಕೊಳ್ಳತೊಡಗಿದಳು.

ಹೊತ್ತು ಹುಟ್ಟಿದ ಸ್ವಲ್ಪ ವೇಳೆಯೊಳಗಾಗಿ ಇಬ್ಬರೂ ಅಲ್ಲಿ ಸೇರುತ್ತಿದ್ದರು.

## ೪

ಸ್ಕೂಲ್ ವರ್ಷ ಮುಗಿದು ಬೇಸಿಗೆ ರಜಾ ಆರಂಭವಾಗಿತ್ತು. ಕ್ರಮ ತಪ್ಪಿಸದೆ ಮಾದಯ್ಯನವರು ರಜಾದಲ್ಲಿ ಬಂದು ಶಿಷ್ಯನಿಗೆ ಪಾಠ ಹೇಳಿ ಹೋಗುತ್ತಿದ್ದರು. ಒಂದೊಂದು ದಿನ ಶ್ರೀಕಂಠನೇ ಮಾದಯ್ಯನವರ ಮನೆಗೆ ಹೋಗಿ

ಪಾಠ ಹೇಳಿಸಿಕೊಂಡು ಬರುತ್ತಿದ್ದ. ಶ್ರೀಕಂಠನಿಗೆ ಇಂಗ್ಲಿಷಿನ ಎರಡು ಪುಸ್ತಕಗಳು ಮುಗಿದಿದ್ದುದಲ್ಲದೆ ಹರಕು ಮುರುಕು ಇಂಗ್ಲಿಷ್ ಮಾತನಾಡುವುದೂ ಅಭ್ಯಾಸವಾಗಿತ್ತು. ಸ್ವರ್ಣನ ಮುಂದೆ ತನ್ನ ಪಾಂಡಿತ್ಯ ಪ್ರದರ್ಶನ ಮಾಡುತ್ತಿದ್ದ. ಅವನ 'ಕ್ಯಾಟ್ - ರ್‍ಯಾಟ್ - ಬ್ಯಾಟ್' ಕೇಳಿ ಸ್ವರ್ಣ ಕಿಲಕಿಲನೆ ನಗುತ್ತಿದ್ದಳು.

ಒಂದು ದಿನ ಮಧ್ಯಾಹ್ನವೇ ಮಾದಯ್ಯನವರ ಮನೆಗೆ ಹೋಗಿ ಪಾಠ ಮುಗಿಸಿಕೊಂಡು ಶ್ರೀಕಂಠ ಮನೆ ಸೇರಿದ. ಮನೆಯಲ್ಲಿ ಕಣ್ಣಿಗೆ ಬಿದ್ದ ದೃಶ್ಯ ಅವನನ್ನು ಚಕಿತನನ್ನಾಗಿ ಮಾಡಿತು.

ಎಂದೂ ಬೆಳಿಗ್ಗೆ ಮನೆಗೆ ಕಾಲಿಡದ ನಾಗಲಿಂಗಾಚಾರಿ ಮನೆಗೆ ಬಂದಿದ್ದ. ಅವನೆದುರಿಗೆ ಶ್ರೀಕಂಠ ಮಾಡಿದ್ದ ಹಲವು ಮೃಣ್ಮೂರ್ತಿಗಳು ನಿಂತಿದ್ದವು. ಶ್ರೀಕಂಠನ ಪಾದಶಬ್ದ ಕೇಳಿಬಂದೊಡನೆಯೇ ನಾಗಲಿಂಗಾಚಾರಿ ತನ್ನ ಗಡಸು ಧ್ವನಿಯಲ್ಲಿ 'ಯಾರು?' ಎಂದು ಕೇಳಿದ.

"ನಾನು."

"ಶ್ರೀಕಂಠನೇ!"

"ಹೌದು ಅಪ್ಪಾಜಿ."

"ಪಾಠ ಮುಗಿಯಿತೇ?"

"ಮುಗಿಯಿತು."

ನಾಗಲಿಂಗಾಚಾರಿ ಕ್ಷಣಕಾಲ ಮೌನ ತಾಳಿ ಮಗನ ಕಡೆಗೆ ತಿರುಗಿ

"ಇವುಗಳನ್ನು ಮಾಡಿದವರು ಯಾರು?"

"ನಾ....ನು...."

"ನೀನು – ದೊಡ್ಡ ಶಿಲ್ಪಿ. ಈ 'ಅನ್ನಪೂರ್ಣಾದೇವಿ' ಯೂ ನಿನ್ನದೋ?"

"ಹೌದು."

"ಲಕ್ಷಣಗಳು ಹೇಗೆ ಗೊತ್ತಾಯಿತು ನಿನಗೆ."

"ನಿನ್ನ ಪುಸ್ತಕದಲ್ಲಿ ನೋಡಿಕೊಂಡೆ."

"ಅಯ್ಯೋ ಭಡವಾ! ಪುಸ್ತಕ ನೋಡಿಕೊಂಡು ಮೂರ್ತಿ ಕಡೆಯುತ್ತಾರೇನೋ?"

" ಕಡೆಯಬಾರದೇ ? "

" ವಂಶ ನಾಶವಾಗಿ ಹೋಗುತ್ತದೆ. ಬರಬಾರದ ರೋಗಗಳು ಬರುತ್ತವೆ. ಅಂಗಹೀನತ್ವ ಪ್ರಾಪ್ತವಾಗುತ್ತದೆ. "

" ಪುಸ್ತಕದಲ್ಲಿ ಎಲ್ಲಾ ಇದೆಯೆಂದು ನೀನೇ ಹೇಳಿದ್ಯೆ. ಹಾಗಾದರೆ ಈಗ ಏನು ಮಾಡಬೇಕು ? "

" ಗುರುಮುಖೇನ ಅಭ್ಯಾಸ ಮಾಡಬೇಕು. "

" ಗುರುವನ್ನೆಲ್ಲಿಂದ ತರಲಿ ? "

ಮಗನ ಉತ್ತರ ತಂದೆಯ ಮುಖಕ್ಕೆ ಬಂದು ಅಪ್ಪಳಿಸಿತು. ' ಗುರುವನ್ನೆಲ್ಲಿಂದ ತರಲಿ ? '

' ಶ್ರೀಕಂಠ ಗುರುವನ್ನು ಹುಡುಕುತ್ತಿದ್ದಾನೆಯೇ ? '

' ಗುರುವಿಲ್ಲದೆಯೇ ಇಷ್ಟು ಸಾಧಿಸಿದ್ದಾನಲ್ಲಾ ! '

' ಏಕಲವ್ಯ ಗುರುವಿನ ಮೂರ್ತಿ ಮಾಡಿಟ್ಟುಕೊಂಡು ಧನುರ್ವಿದ್ಯಾ ಪಾರಂಗತನಾಗಲಿಲ್ಲವೇ ? '

' ಶ್ರೀಕಂಠನೂ ಒಬ್ಬ ಏಕಲವ್ಯನೇ ? '

' ನಾನೇಕೆ ಮಗನನ್ನು ನಿರಾಕರಿಸಿದೆ — ಶ್ರೀಕಂಠನಲ್ಲಿ; ವಿಶ್ವಕರ್ಮ ಪುನರಾವತಾರ ಏಕೆ ಮಾಡಿರಬಾರದು ? '

ತಂದೆಯ ಹೃದಯ ಅಭಿಮಾನದಿಂದ ತುಂಬಿ ತುಳುಕುತ್ತಿತ್ತು. ನಿತ್ಯ ರಕ್ತವರ್ಣಾಚ್ಛಾದಿತವಾಗಿದ್ದ ಅವನ ನೇತ್ರಗಳು ತಿಳಿಯಾಗಿದ್ದವು. ಧ್ವನಿಯಲ್ಲಿ ಅದೇ ಗಡಸು - ಅದೇ ಕಾಠಿಣ್ಯ. ಆದರೆ ಸಹಜ ಕಾಠಿಣ್ಯ ಮಾಯವಾಗಿ ಕೃತ್ರಿಮ ಕಾಠಿಣ್ಯಕ್ಕೆ ಎಡೆ ಕೊಟ್ಟಿತ್ತು.

ದುರ್ಬಲ ಮನೋಭಾವ ತೋರುವುದು ತನ್ನ 'ಶ್ರೀಮದ್ಗಾಂಭೀರ್ಯ' ಕ್ಕೆ ಕುಂದೆಂದು ನಾಗಲಿಂಗಾಚಾರಿ ಭಾವಿಸಿದ್ದ. ಮಗನನ್ನು ಅಪರಾಧಿಯಂತೆ ಪರಿಗಣಿಸುತ್ತ

" ಅನ್ನಪೂರ್ಣಾದೇವಿಯ ಲಕ್ಷಣವೇನು ಹೇಳು. "

ಶ್ರೀಕಂಠ ತಬ್ಬಿಬ್ಬಾದ. ನಾಗಲಿಂಗಾಚಾರಿ ತನ್ನ ಪ್ರೀತ್ಯಾಸ್ಪದ ವಿಷಯವನ್ನು ಸ್ಮರಿಸಿಕೊಂಡು

" ಅನ್ನಪೂರ್ಣಾ ಪರಮ ಮಂಗಳೆ. ನವತರುಣಿಯಾದ ಈ ದೇವಿ

ಕೆಂಪು ವರ್ಣದವಳು. ಚಂದ್ರವದನ, ತ್ರಿನೇತ್ರಗಳು, ತುಂಬಿದ ಸ್ತನಗಳು ಆಕೆಯ ಲಕ್ಷಣಗಳಾಗಿವೆ. ಎಡದ ಕೈಯಲ್ಲಿ ಮಧು ತುಂಬಿದ, ಕೆಂಪು ಕೆತ್ತಿದ ಪಾತ್ರೆ ಹಿಡಿದಿದ್ದಾಳೆ. ಬಲದ ಕೈಯಲ್ಲಿ ಕೆಂಪು ಕೆತ್ತಿದ ಸಟ್ಟುಗ ಹಿಡಿದಿದ್ದಾಳೆ. ಸಟ್ಟುಗದಲ್ಲಿ ಸಿಹಿ ಅನ್ನವಿದೆ. ಸರ್ವಾಲಂಕೃತೆಯಾದ ದೇವಿ ಕೈಗಳಿಗೆ ಕೆಂಪಿನ ಬಳೆಗಳನ್ನು ಧರಿಸಿದ್ದಾಳೆ. ಎದೆಯ ಮೇಲೆ ಅಂದವಾಗಿ ಕೂಡುವ ಹಾರ ಧರಿಸಿದ್ದಾಳೆ. ಕೆಲವು ಸಲ ಆಕೆಗೆ ನಾಲ್ಕು ಕೈಗಳನ್ನು ಕಾಣಿಸುವುದೂ ಉಂಟು. ಆ ಕೈಗಳೆರಡರಲ್ಲಿ ಪಾಶ, ಅಂಕುಶ ಹಿಡಿದಿದ್ದಾಳೆ. ಉಳಿದ ಎರಡು ಕೈಗಳು ಅಭಯ ವರದ ಮುದ್ರೆಗಳನ್ನು ತೋರುತ್ತಿರುತ್ತವೆ. ಆಕೆಯ ಕಿರೀಟವನ್ನು ಅರ್ಧಚಂದ್ರ ಅಲಂಕರಿಸಿರಬೇಕು.— ನೀನು ಕಡೆದಿರುವ ಮೂರ್ತಿಯ ದೋಷಗಳನ್ನು ಪರಿಗಣಿಸು. ದೇವಿಯ ಕಿರೀಟದಲ್ಲಿ ಚಂದ್ರನಿಲ್ಲ, ಹಣೆಗಣ್ಣು ಮಾಯವಾಗಿದೆ. ದೇವಿಯ ಮುಖ ಸಣ್ಣ ಹುಡುಗಿಯ ಮುಖವಾಗಿದೆ. ಯಾವ ಹುಡುಗಿಯ ಮುಖ ನೋಡಿ ಈ ಶಿಲ್ಪ ಮಾಡಿದೆ ಶ್ರೀಕಂಠ."

ಶ್ರೀಕಂಠ ಹೇಳಲು ಅನುಮಾನಿಸಿದ. ನಾಗಲಿಂಗಾಚಾರಿ ನಾಲ್ಕಾರು ಬಾರಿ ಪ್ರಶ್ನೆಯನ್ನು ಕೇಳಿ ಕೇಳಿ ಬೇಸತ್ತು, ಕನಲಿ, ಕಣ್ಣುಗಳಿಂದ ಕಿಡಿ ಕಾರುತ್ತಾ

"ಯಾರು ಹುಡುಗಿ – ಹೇಳದಿದ್ದರೆ ಚಮಡಾ ಸುಲಿದು ಬಿಡುತ್ತೇನೆ ಭಡವಾ" ಎಂದು ಗದರಿದ.

ಶ್ರೀಕಂಠನ ಮೈಯಲ್ಲಿ ನಡುಕ ಹುಟ್ಟಿತು. ದ್ರವವಾರಿದ್ದ ನಾಲಿಗೆ ನುಡಿಯದಾಯಿತು. ತಂದೆಯ ವೀರಭದ್ರಾವತಾರ ನೋಡಿ ಮೆಲ್ಲನೆ

"ಸ್ವರ್ಣನದು........" ಎಂದ.

"ಸ್ವರ್ಣ – ಯಾವ ಸ್ವರ್ಣ?"

"ಮೋಹನರಂಗಂ ಅವರ ಮಗಳು."

"ಅವಳು ಇಲ್ಲಿಗೆ ಬರುತ್ತಿದ್ದಾಳೆಯೇ?"

"ಇಲ್ಲ."

"ಅವಳು ಬರದೆಯೇ ಅವಳ ಮುಖ ರೂಪಿಸುತ್ತಿರುವೆಯಾ?"

"ನಾನು ಇಲ್ಲಿ ಕೆಲಸ ಮಾಡುವುದಿಲ್ಲ."

"ಮತ್ತೆಲ್ಲಿ ಕೆಲಸ ಮಾಡುತ್ತಿರುವೆ?"

ಹುಲಿಯೂರು ರಸ್ತೆ ಮಗ್ಗುಲಿಗಿರುವ ಪಾಳು ದೇವಾಲಯದಲ್ಲಿ."

"ಅಯ್ಯೋ ಅವಿವೇಕಿ! ಆ ದೈಯ್ಯದ ದೇಗುಲಕ್ಕೆ ಏಕೆ ಹೋಗುತ್ತೀಯೋ?"

"ಸ್ವರ್ಣ ಇಲ್ಲಿಗೆ ಬಂದರೆ ಜನ ಆಡಿಕೊಳ್ಳುತ್ತಾರೆ."

"ಇನ್ನು ಮೇಲೆ ದೈಯ್ಯದ ಗುಡೀಗೆ ಹೋಗಬೇಡ – ಇಲ್ಲೇ ಕೆಲಸ ಮಾಡು. ಯಾರು ಏನಂದರೂ ನಾನು ನೋಡಿಕೊಳ್ಳುತ್ತೇನೆ."

ತಂದೆಯ ವಕ್ರ ನಡತೆಯಲ್ಲಿ ಕಂಡುಬಂದ ಮಾರ್ದವತೆ ನೋಡಿ ಶ್ರೀಕಂಠನಿಗೆ ಆಶ್ಚರ್ಯವಾಯಿತು. ತನ್ನ ಮೂರ್ತಿಯನ್ನು ನೋಡಿ ವಿಚಾರಮಾಡುತ್ತ

"ಮುಖ ಸರಿಯಾಗಿಲ್ಲವೇ ಅಪ್ಪಾಜಿ?" ಎಂದು ಕೇಳಿದ.

"ಇಲ್ಲ ಶ್ರೀಕಂಠು."

"ಪರಿಚಯದ ಮುಖದ ಪ್ರತಿ ಇಳಿಸದೆ ಸ್ವತಂತ್ರನಾಗಿ ಸೃಷ್ಟಿ ಮಾಡುವುದು ಹೇಗೆ?"

"ಅದೇ ಕಲೆ — ಅದೇ ನಿಜವಾದ ಶಿಲ್ಪ. ಅದಕ್ಕೆ ತಪಸ್ಸು ಬೇಕು."

"ನಾನು ಋಷಿಯಾಗಬೇಕೇ?"

"ಜಟಾಜೂಟಧಾರಿಯಾದ ಋಷಿಯಲ್ಲ — ರಸಋಷಿ. ನಿನ್ನ ತಪಸ್ಸಿಗೆ ಮೆಚ್ಚಿ ದೇವಿ ಒಲಿದರೆ ನಿನ್ನ ಕೃತಿ ಅಮರವಾಗುತ್ತದೆ."

"ದೇವಿಯನ್ನು ಒಲಿಸಿಕೊಳ್ಳುವುದು ಹೇಗೆ?"

"ಸತತ ಧ್ಯಾನದಿಂದ."

"ಧ್ಯಾನ ಮಾಡಿದರೆ ದೇವಿ ದರ್ಶನ ಕೊಡುವಳೇ?"

"ಕೊಡುತ್ತಾಳೆ."

"ಹೇಗೆ ಸಾಧ್ಯ."

"ನಿನಗೆ ಕನಸಾಗುವದಲ್ಲವೇ?"

"ಆಗಾಗ್ಗೆ ಆಗುತ್ತದೆ."

"ಮಲಗುವ ಮುನ್ನ ಯಾರನ್ನಾದರೂ ನೀನು ಕುರಿತು ಯೋಚಿಸಿದರೆ ಅವರು ಕನಸಿನಲ್ಲಿ ಕಾಣಿಸಿಕೊಳ್ಳುತ್ತಾರಲ್ಲವೇ?"

"ಕಾಣಿಸಿಕೊಳ್ಳುತ್ತಾರೆ."

"ಹಾಗೆ ದೇವಿಯೂ ಕಾಣಿಸಿಕೊಳ್ಳುತ್ತಾಳೆ. ಕನಸು ಅಸ್ಥಿರ–ಅಶಾಶ್ವತ.

ದೇವಿಯ ದರ್ಶನ ಸ್ಥಿರ – ಶಾಶ್ವತ. ರಾತ್ರಿ ಪರಮ ಭಕ್ತಿಯಿಂದ ದೇವಿ ಧ್ಯಾನ ಮಾಡುತ್ತ ಮಲಗಬೇಕು. ಆಕೆ ದರ್ಶನ ಕೊಡುತ್ತಾಳೆ. ಚಿತ್ತದ ಮೇಲೆ ಮೂಡಿದ ಬಿಂಬವನ್ನು ಕೃತಿಗೆ ತರಲು ಯತ್ನಿಸಬೇಕು. ಮನಸ್ಸು, ಕೈ ಎರಡೂ ಪಳಗಿದಷ್ಟೂ ಈ ಕೆಲಸ ಯಶಸ್ವಿಯಾಗುತ್ತದೆ."

"ಸ್ವರ್ಣಳ ಮುಖ ದೇವಿಗಿಟ್ಟುದು ತಪ್ಪಾಯಿತು!"

"ಉತ್ತಮ ಶಿಲ್ಪಿಯಾಗಬಯಸುವವನು ಹೆಣ್ಣನ್ನು ಹತ್ತಿರ ಸೇರಿಸ ಬಾರದು."

"ಏಕೆ?"

"ಹೆಣ್ಣು ಮಾಯೆ – ಗಂಡಿನ ತಪೋಭಂಗ ಮಾಡುವುದೇ ಹೆಣ್ಣಿನ ಗುರಿ. ಸೃಷ್ಟಿ ಹೇಗೆ ಗಂಡಿಗೆ ಪ್ರಿಯವೋ ಹಾಗೆ ಲಯ ಹೆಣ್ಣಿಗೆ ಪ್ರಿಯ. ನೋವಿನಲ್ಲಿ ಹುಟ್ಟಿ, ನೋವಿನಲ್ಲಿ ಬೆಳೆಯುವ ಹೆಣ್ಣು ನೋವನ್ನೇ ಪ್ರೀತಿಸುತ್ತದೆ. ಇತರರು ನೋವಿಗೀಡಾದರೇ ಹೆಣ್ಣಿಗೆ ಸುಖ. ಇತರರ ಸುಖ ಹೆಣ್ಣಿನ ನೋವಿಗೆ ಕಾರಣವಾಗುತ್ತದೆ."

ತಂದೆಯ ಕಹಿ ಮಾತು ಶ್ರೀಕಂಠನ ಮುಗ್ಧ ಮನಸ್ಸಿಗೆ ಅರ್ಥವಾಗಲಿಲ್ಲ. 'ಸ್ವರ್ಣ ನನಗೆ ನೋವಾಗಬೇಕೆಂದು ಬಯಸುವಳೇ? - ಅವಳೂ ನೋವಿನಲ್ಲಿ ಹುಟ್ಟಿ, ನೋವಿನಲ್ಲಿ ಬೆಳೆದಿದ್ದಾಳೆಯೇ?' ಎನ್ನುವ ಜಿಜ್ಞಾಸೆ ಅವನ ಮನಸ್ಸಿನಲ್ಲಿ ಬೆಳೆಯಿತು. ಪ್ರಸನ್ನನಾಗಿದ್ದ ತಂದೆಯ ಮನಸ್ಸನ್ನು ಕದಡಲು ಶ್ರೀಕಂಠ ಇಚ್ಛೆಪಡದೆ ಸುಮ್ಮನಾದ.

ಶಿಲ್ಪಕಲೆಯಲ್ಲಿ ಮಗನಿಗಿದ್ದ ಪ್ರೇಮ, ಅದನ್ನು ಸಾಧಿಸುವುದಕ್ಕೆ ಅವನು ಪಡುತ್ತಿದ್ದ ಪ್ರಯಾಸ ನಾಗಲಿಂಗಾಚಾರಿಯ ಮನಸ್ಸಿಗೆ ಭಾಸವಾಗಿದ್ದವು. ಮೌನ ತಾಳಿ ಕುಳಿತಿದ್ದ ತಂದೆಯ ಸಮೀಪಕ್ಕೆ ಬಂದು ಶ್ರೀಕಂಠ

"ಅಪ್ಪಾಜಿ, ಒಂದು ವಿಷಯ ಕೇಳಲೇ?"

"ಕೇಳು."

"ನೀನು ನನಗೆ ಶಿಲ್ಪ ಹೇಳಿಕೊಡುವುದಿಲ್ಲವೇ?"

"ಶ್ರದ್ಧೆಯಿಂದ ಕಲಿಯುವೆಯಾ?"

"ಕಲಿಯುತ್ತೇನೆ."

"ತುಂಬ ಕಷ್ಟಪಡಬೇಕಾಗುತ್ತದೆ."

" ಕಷ್ಟಪಡುವುದಕ್ಕೆ ಸಿದ್ಧವಾಗಿದ್ದೇನೆ."

" ಊಟ - ನಿದ್ರೆ ಬಿಡಬೇಕಾಗುತ್ತದೆ. "

" ಆಗಬಹುದು. ಎಂದು ಆರಂಭಿಸುವೆ ?"

" ಇಂದೇ - ಈಗಲೇ. "

ಎಂದೆದ್ದವನೇ ನಾಗಲಿಂಗಾಚಾರಿ ಕೈಗೆ ಜೇಡಿಮಣ್ಣು ತೆಗೆದುಕೊಂಡು ನೀರು ಬೆರಸಿ ಕಲಸಿದ. ಮಣ್ಣು ಹದವಾಗಲು ಎರಡು ಭಾಗ ಮಾಡಿ ಮಗನಿಗೆ ಒಂದು ಭಾಗ ಕೊಟ್ಟು

" ನಾನು ಮಾಡುವುದನ್ನು ನೋಡಿಕೊಂಡು, ಅದರಂತೆ ಮಾಡು. "

ಎಂದು ಹೇಳಿ ಕ್ಷಣಕಾಲ ಧ್ಯಾನಿಸಿ ಮಣ್ಣನ್ನು ರೂಪಿಸಲಾರಂಭಿಸಿದ. ಒಂದು ಮೂರ್ತಿಯ ಸ್ಥೂಲ ರೂಪರೇಷೆ ಸಿದ್ಧವಾಯಿತು. ಮಣ್ಣಿನ ತೆರೆಯನ್ನು ಭೇದಿಸಿಕೊಂಡು ಮೂರ್ತಿ ಪ್ರಕಟವಾಗತೊಡಗಿತು. ಶ್ರೀಕಂಠ ತಂದೆಯ ಕೃತಿಯನ್ನೇ ಗಮನಿಸುತ್ತಾ ಆನಂದಾತಿರೇಕದಿಂದ

" ಅದೇ ಮೂರ್ತಿ - ಅನ್ನಪೂರ್ಣೇಶ್ವರಿ " ಎಂದ.

ನಾಗಲಿಂಗಾಚಾರಿಯ ಕಿವಿಗಳಮೇಲೆ ಮಗನ ಹರ್ಷೋದ್ಗಾರ ಬೀಳಲೇ ಇಲ್ಲ.

ಶಿಲ್ಪಿ ತನ್ನ ಪ್ರತಿಭೆಯ ಇಂದ್ರಜಾಲಕ್ಕೆ ಪರವಶನಾಗಿದ್ದ. ಅವನ ಮುಖದಲ್ಲಿ ದೇದೀಪ್ಯಮಾನ ಪ್ರಭೆ. ಮಗ ತಂದೆಯನ್ನು ನೋಡುತ್ತ, ತನ್ನೆರಡು ಕೈಗಳನ್ನೂ ಜೋಡಿಸಿದ.

೫

ಮಾರನೆಯ ಬೆಳಿಗ್ಗೆ ಸ್ವರ್ಣ ಶ್ರೀಕಂಠನನ್ನು ಹುಡುಕಿಕೊಂಡು ಬಂದಾಗ ಅವನಿನ್ನೂ ಮುಸುಗು ತೆಗೆದಿರಲಿಲ್ಲ. ಸ್ವರ್ಣ ಮುಸುಗು ಕಿತ್ತು ಹಾಕಿ ಅವನನ್ನೆಬ್ಬಿಸಿದಳು. • ಶ್ರೀಕಂಠ ಮುಖ ತೊಳೆದುಕೊಂಡು ಬಂದ. ಸ್ವರ್ಣನಿಗೆ ಕೋಪ ಬಂದಿತ್ತೆಂದು ಯಾರೂ ಹೇಳಬೇಕಾಗಿರಲಿಲ್ಲ. ಸಂಜೆಯಾಗಸದಂತೆ ನಖಶಿಖಾಂತ ಕೆಂಪೇರಿದ್ದ ಅವಳ ಮುಖ ನೋಡಿ

" ನನ್ನ ಮೇಲೆ ತುಂಬ ಕೋಪ ಬಂದಿದೆಯಲ್ಲವೇ ಸ್ವರ್ಣ ? " ಎಂದು ಕೇಳಿದ.

" ಕೋಪ ಬರದಿರುತ್ತದೆಯೋ. ಇನ್ನು ಮೇಲೆ ನಿನ್ನ ಮುಖ ನೋಡ ಕೂಡದೆಂದುಕೊಂಡಿದ್ದೆ. "

" ಹಾಗಾದರೆ ಬೆಳಗಾಗ ಎದ್ದ ಕೂಡಲೆ ಏಕೆ ಬಂದೆ ? "

" ಪಾಪ ! ಹೋಗಲಿ ಎಂದು. "

" ನನ್ನದು ತಪ್ಪಾಯಿತು – ಆದರೇನು ಮಾಡಲಿ - ವಿಧಿಯಿರಲಿಲ್ಲ. ಅಪ್ಪಾಜಿ ಕೂಡಿಸಿಕೊಂಡರು. "

" ಅಪ್ಪಾಜಿ! ಸುಳ್ಳು ಹೇಳುವುದನ್ನು ಅಭ್ಯಾಸ ಮಾಡಿಕೊಂಡಿರುವೆಯಾ ಶ್ರೀಕಂಠ. "

" ಇಲ್ಲ ಸ್ವರ್ಣ. "

ಎಂದು ಹಿಂದಿನ ದಿನದ ಘಟನೆಗಳನ್ನು ವಿವರಿಸಿದ. ಸ್ವರ್ಣನಿಗೆ ನಂಬಿಕೆ ಯಾಗಲಿಲ್ಲ. ' ಇಲ್ಲಿ ನೋಡು ' ಎಂದು ತೊಯ್ದ ಬಟ್ಟೆಗಳಿಂದ ಆವೃತವಾಗಿದ್ದ ಎರಡು ಮೃಣ್ಮೂರ್ತಿಗಳನ್ನು ತೋರಿಸಿದ.

ಸ್ವರ್ಣ ಮೂಕಳಂತೆ ಅವುಗಳನ್ನೇ ದಿಟ್ಟಿಸಿ ನೋಡುತ್ತ ನಿಂತಳು.

ನಾಗಲಿಂಗಾಚಾರಿ ಕಡೆದಿದ್ದ ಮೂರ್ತಿ ಅವಳನ್ನು ದಿಗ್ಭ್ರಾಂತಳನ್ನಾಗಿ ಮಾಡಿತ್ತು. ಮಣ್ಣಿನ ಕ್ಷುದ್ರ ಮಿತಿಯನ್ನು ದಾಟಿ ಮೂರ್ತಿ ವಿಶ್ವರೂಪ ತಳೆದು ನಿಂತಿತ್ತು.

ಅನ್ನಪೂರ್ಣೆ ಸದಾಪೂರ್ಣೆ - ಶಂಕರವಲ್ಲಭೆ - ಲೋಕಮಾತೆ ಅನ್ನ ದಾತಳಾಗಿ ನಿಂತಿದ್ದಳು.

ತಾಯ್ತನದ ಅಮೃತ ಸಂಕೇತವಾಗಿದ್ದ ಅನ್ನಪೂರ್ಣೆ, ತಾಯಿಯಾಗ ಲಿದ್ದ ಮುಗ್ಧ ಕನ್ನೆಯ ಮನಸ್ಸಿನಲ್ಲಿ ಸುಪ್ತವಾಗಿದ್ದ ಅನೇಕ ಅನುಭವಗಳನ್ನೂ, ವಿಚಾರಗಳನ್ನೂ ಪ್ರಚೋದನಗೊಳಿಸಿದ್ದಳು.

ಸ್ವರ್ಣ ನಾಗಲಿಂಗಾಚಾರಿ ನಿರ್ಮಿಸಿದ್ದ ಮೂರ್ತಿಯಿಂದ ಕಣ್ಣು ಕೀಳದೆ " ಇದು - ಅಪ್ಪಾಜಿಯವರು ಮಾಡಿದ್ದೇ ? " ಎಂದು ಕೇಳಿದಳು.

" ಹೌದು – ಹೇಗೆ ಗುರುತಿಸಿದೆ ? "

" ಹೇಗೆ ಎಂದು ಹೇಳಲಾರೆ. ಇನ್ನೊಂದು ನಿನ್ನದಿರಬೇಕೆನಿಸಿತು. "

" ನೀನು ತುಂಬ ಜಾಣೆ ಸ್ವರ್ಣ. "

" ಅಪ್ಪಾಜಿ ಇಷ್ಟು ದೊಡ್ಡ ಶಿಲ್ಪಿಗಳು ಎನ್ನುವುದು ನನಗೆ ಗೊತ್ತೇ ಇರ

ಲಿಲ್ಲ. ಅವರೇಕೆ ಮೂರ್ತಿಗಳನ್ನು ಕಡೆಯುವುದಿಲ್ಲ. "

"ಅದು ಅವರ ರಹಸ್ಯ – ಕಾರಣವನ್ನು ಯಾರೂ ಕಾಣರು."

"ಇನ್ನುಮೇಲೆ ನಿನಗವರು ಪಾಠ ಹೇಳಿಕೊಡುವರೇ ?

"ಅದೂ ನಿಶ್ಚಯವಿಲ್ಲ. ನಿನ್ನೆ ಲಹರಿ ಬಂತು – ಸ್ವಲ್ಪ ಹೇಳಿಕೊಟ್ಟರು. ಅವರು ಒಂದು ದಿನ ಹೇಳಿಕೊಟ್ಟುದನ್ನು ನಾನು ಚೆನ್ನಾಗಿ ಅರ್ಥಮಾಡಿಕೊಂಡು, ಜೀರ್ಣಿಸಿಕೊಳ್ಳಬೇಕಾದರೆ ಒಂದು ವಾರವಾದರೂ ಬೇಕು "

"ನಿನ್ನ ಮೇಲೆ ನಾನು ಸಿಟ್ಟು ಮಾಡುವುದಿಲ್ಲ ಶ್ರೀಕಂಠೂ."

"ನಾನು ತಪ್ಪು ಮಾಡಿದರೆ ನೀನು ಸಿಟ್ಟು ಮಾಡಲೇ ಬೇಕು."

"ಇಲ್ಲ. ಯಾವ ಕಾರಣಕ್ಕೂ ಸಿಟ್ಟು ಮಾಡುವುದಿಲ್ಲ. ಆದರೆ ಒಂದು ಕರಾರು."

"ಏನು ಹೇಳು."

"ಅಪ್ಪಾಜಿಯವರಿಗೆ ಬರುವಷ್ಟನ್ನೂ ನೀನು ಕಲಿತುಕೊಳ್ಳಬೇಕು."

"ನಿನ್ನ ಮೂರ್ತಿ ಮಾಡಕೂಡದೆಂದು ಅಪ್ಪಾಜಿ ಹೇಳುತ್ತಾರಲ್ಲೇ ಸ್ವರ್ಣ."

"ಅವರ ಮಾತು ಮೀರಬೇಡ. ನನ್ನ ಮೂರ್ತಿ ಮಾಡದಿದ್ದರೆ ಪ್ರಪಂಚ ಕೊಳ್ಳೆ ಹೋಗುವುದೇ ?"

"ಹಾಗೇಕೆನ್ನುವೆ?"

"ದೇವರ ಮೂರ್ತಿ ನೀನು ಮಾಡಿದರೆ ಎಷ್ಟು ಜನ ಸಂತೋಷಪಡುತ್ತಾರೆ ನೋಡು. ಅಪ್ಪಾಜಿಯವರ ಮೂರ್ತಿ ನೋಡಿ ನನಗೇ ಹಿಡಿಸಲಾರದಷ್ಟು ಸಂತೋಷವಾಯಿತು. ಅದಕ್ಕೆ ಮನಸ್ಸಿನಲ್ಲಿಯೇ ಭಕ್ತಿಯಿಂದ ಕೈಮುಗಿದೆ. ಮಣ್ಣು ಮುದ್ದೆಗೆ ಎಲ್ಲರ ಕೈಯ್ಯಿಂದ ನಮಸ್ಕಾರ ಮಾಡಿಸುವುದು ಸುಮ್ಮನಾಯಿತೇ ? ನೀನು ನನ್ನ ಮೂರ್ತಿ ಮಾಡಿದರೆ ಅದಕ್ಕೆ ಯಾರು ನಮಸ್ಕಾರ ಮಾಡುತ್ತಾರೆ."

"ನಿನ್ನ ಮೂರ್ತಿ ಮಾಡದಿದ್ದರೆ ನನ್ನ ಮನಸ್ಸಿಗೆ ತುಂಬ ಬೇಸರವಾಗುತ್ತದೆ."

"ಅಪ್ಪಾಜಿಯವರಲ್ಲಿ ಕಲಿಯಬೇಕಾದುದನ್ನು ನೀನು ಕಲಿತರೆ ನನ್ನ ಮೂರ್ತಿ ಮಾಡುವುದು ದೊಡ್ಡ ವಿಷಯವೆನಿಸುವುದಿಲ್ಲ."

ಅವಳ ಸೂಚನೆಯುಲ್ಲಡಕವಾಗಿದ್ದ ಸತ್ಯ ಶ್ರೀಕಂಠನ ಮನಸ್ಸಿಗೆ ಥಟ್ಟನೆ ಹೊಳೆಯಿತು. ಆದರೆ ಸ್ವರ್ಣನ ಸಂಗದಿಂದ ದೂರವಿರಲು ಶ್ರೀಕಂಠ ಸಿದ್ಧ ನಾಗಿರಲಿಲ್ಲ.

" ಹಾಗಾದರೆ ನಿನ್ನನ್ನು ನೋಡುವುದು........ "

" ದಿನಾ ಬರುತ್ತೇನೆ. ನಿನ್ನ ಪಾಠ ಮುಂದುವರಿಯುವುದನ್ನು ನೋಡಿ ಸಂತೋಷಪಡುತ್ತೇನೆ....ಈಗ ಮೇಷ್ಟ್ರು ಬರುತ್ತಾರಲ್ಲವೇ ? '

" ಬರಬಹುದು. "

" ನಾನಿನ್ನು ಹೊರಡುತ್ತೇನೆ. "

ಎಂದು ಸ್ವರ್ಣ ಅಲ್ಲಿಂದ ಜಿಗಿದಳು. ಸ್ವರ್ಣನ ಮಾತುಗಳು ಶ್ರೀಕಂಠನ ಮನಸ್ಸಿನಲ್ಲಿ ಮಧುರ ಯಾತನೆಯನ್ನು ನೆಟ್ಟಿತ್ತು.

' ಅಪ್ಪಾಜಿಯವರಿಗೆ ಬರುವಷ್ಟನ್ನೂ ನೀನು ಕಲಿತುಕೊಳ್ಳಬೇಕು. '

ಅವಳ ಸಂದೇಶ ಅವನ ಚಿತ್ತದ ಮೇಲೆ ಶಾಶ್ವತವಾಗಿ ನೆಲಸಿತು.

ಶ್ರೀಕಂಠನಿಗೆ ಸ್ವಲ್ಪವೂ ಬಿಡುವಿಲ್ಲದಂತಾಯಿತು. ಬೆಳಿಗ್ಗೆ ಎದ್ದ ಸ್ವಲ್ಪ ಹೊತ್ತಿನೊಳಗಾಗಿ ಮಾದಯ್ಯನವರು ಪಾಠಕ್ಕೆ ಬರುತ್ತಿದ್ದರು ಅವರು ಹೋದ ಮೇಲೆ ಊಟ ಮುಗಿಸಿಕೊಂಡು ಸ್ಕೂಲಿಗೆ ಹೋಗಿ ಸಂಜೆ ಐದು ಗಂಟೆಗೆ ಹಿಂತಿರುಗುತ್ತಿದ್ದ. ಸಂಜೆ ಆಟಕ್ಕೂ ಹೋಗುವಂತಿರಲಿಲ್ಲ. ಹಿಂದಿನ ರಾತ್ರಿ ತಂದೆ ಹೇಳಿಕೊಟ್ಟಿದ್ದುದನ್ನು ರೂಢಿಸಿಕೊಳ್ಳಬೇಕಾಗಿತ್ತು.

ನಾಗಲಿಂಗಾಚಾರಿ ರಾತ್ರಿ ಎಂಟಕ್ಕೋ ಒಂಭತ್ತಕ್ಕೋ ಎಲ್ಲಿಂದಲೋ ಅವತರಿಸುತ್ತಿದ್ದ. ಮಗನ ಪ್ರಗತಿ ಸಮಾಧಾನಕರವಾಗಿದ್ದರೆ ಸುಮ್ಮನಿರುತ್ತಿದ್ದ. ನ್ಯೂನಾತಿರೇಕಗಳು ಕಂಡುಬಂದರೆ- ಮೈ ಬಾಸುಂಡೆ ಬರುವವರೆಗೂ ಬಡಿಯುತ್ತಿದ್ದ. ತಂದೆಯ ಪಾಠಕ್ಕೆ ಮುಕ್ತಾಯವೇ ಇರುತ್ತಿರಲಿಲ್ಲ. ರಾತ್ರಿ ಎರಡು, ಮೂರು, ನಾಲ್ಕು ಗಂಟೆಯಾದರೂ ಸೈ. ಶ್ರೀಕಂಠ ತೂಕಡಿಸುವ ಹಾಗಿರಲಿಲ್ಲ. ಒಂದು ಘಳಿಗೆಯೂ ಅವನ ಚಿತ್ತ ಅತ್ತಿತ್ತ ಹಾರಾಡಕೂಡದು. ನಾಗಲಿಂಗಾಚಾರಿಯ ರಣಹದ್ದಿನಂಥ ನೇತ್ರಗಳು ಮಗನಮೇಲೆ ನೆಟ್ಟಿರುತ್ತಿದ್ದವು. ಆಯಾಸ, ಆಲಸ್ಯಗಳೆರಡಕ್ಕೂ ನಾಗಲಿಂಗಾಚಾರಿಯ ಶಿಕ್ಷಣಕ್ರಮದಲ್ಲಿ ಸ್ಥಾನವಿರಲಿಲ್ಲ.

ಒಮ್ಮೊಮ್ಮೆ ನಾಗಲಿಂಗಾಚಾರಿಯ ಕಲ್ಲು ಮನಸ್ಸು ಕರಗುವದು. ಶಿಲ್ಪದಲ್ಲಿ ಅತಿ ಕ್ಲಿಷ್ಟವಾದ ತ್ರಿಭಂಗಿಯನ್ನು ಮಗ ಸಾಧಿಸಿದರೆ, ಮೂರ್ತಿಗಳ ನೇತ್ರ

ಪರಿಪಾಠವನ್ನು ತೃಪ್ತಿಕರವಾಗಿ ನಿರ್ವಹಿಸಿದರೆ ತಂದೆಯ ಹೃದಯ ಅಭಿಮಾನ ದಿಂದ ಬಿರಿಯುತ್ತಿತ್ತು.

‘ ಶ್ರೀಕಂಠ ನನ್ನನ್ನು ಮೀರಿಸುತ್ತಾನೆ. ನಮ್ಮ ವಂಶದ ಶಿಲ್ಪಕಲೆಯೇ ಇವನಲ್ಲಿ ಭಟ್ಟಿಯಿಳಿದು ಬಿಟ್ಟಿದೆ. ’

ಎಂದುಕೊಳ್ಳುವನು. ಆದರೆ ಬಾಯಿಬಿಟ್ಟು ಒಂದು ಉಪಚಾರದ ಮಾತನ್ನೂ ಆಡುತ್ತಿರಲಿಲ್ಲ.

ಶ್ರೀಕಂಠನ ಶ್ರದ್ಧೆಗೆ ದೊರೆಯುತ್ತಿದ್ದ ಪ್ರತಿಫಲ ಮತ್ತಷ್ಟು ಶ್ರಮ – ಮತ್ತಷ್ಟು ಕೆಲಸ – ಮತ್ತಷ್ಟು ಬೈಗಳು. ಮಗ ತೀರ ಬೇಸರಗೊಂಡರೆ ತಂದೆ ಕ್ಷಣಕಾಲ ಕೈಯ್ಯಲ್ಲಿದ್ದ ಮರದ ಉಳಿ ಕೆಳಗಿಟ್ಟು, ಕೈಗೆ ಮೆತ್ತಿಕೊಂಡಿದ್ದ ಜೇಡಿ ಮಣ್ಣನ್ನು ಕೆರೆದು ಉದುರಿಸುತ್ತ

“ ಇವನು ಯಾಕೆ ಇಷ್ಟು ಕಾಡಿಸ್ತಾನೆ ಅನಿಸುತ್ತದಲ್ಲವೇ ಶ್ರೀಕಂಠ. ”

ಖಂಡಿತವಾಗಿಯೂ ಅನಿಸುತ್ತಿತ್ತು — ಆದರೆ ಬಾಯಿಬಿಟ್ಟು ಹೇಳು ವುದು ಹೇಗೆ? ಮೌನವೇ ಉತ್ತರವಾಗುತ್ತಿತ್ತು.

“ ನಾನೂ ಸ್ಕೂಲ್ ಮೇಷ್ಟ್ರು ಕೂಲಿ ತೆಗೆದುಕೊಂಡು ಪಾಠ ಹೇಳುವ ಹಾಗೆ ಹೇಳಬಹುದಾಗಿತ್ತು. ಆದರೆ ಕೂಲಿ ಪಾಠದಲ್ಲಿ ಈ ವಿದ್ಯೆ ಬರುವುದಿಲ್ಲ. ದುಡಿಯಬೇಕು - ದಿನವೂ ದುಡಿಯಬೇಕು. ದಿನದ ಇಪ್ಪತ್ತನಾಲ್ಕು ಘಂಟೆಯೂ ದುಡಿಯಬೇಕು. ಶಿಲ್ಪವನ್ನು ತಪಸ್ಸೆಂದು ತಿಳಿದ ಹೊರತೂ ಈ ವಿದ್ಯೆ ಸ್ವಾಧೀನವಾಗುವುದಿಲ್ಲ. — ನಮ್ಮ ಸ್ಥಾಪತಿ ಸಂಪ್ರದಾಯ ನಾಮಶೇಷ ವಾಗುತ್ತಿದೆ. ಹಿಂದಿನ ಕಾಲದಂತೆ ಲಕ್ಷಾಂತರ ಕೋಟ್ಯಂತ ರೂಪಾಯಿ ಖರ್ಚು ಮಾಡಿ ದೇವಸ್ಥಾನಗಳನ್ನು ಕಟ್ಟಿಸುವ ದೊರೆಗಳು, ಧಣಿಗಳು ಇನ್ನು ದೊರೆ ಯುವುದಿಲ್ಲ. ಬಜಾರಿನಲ್ಲಿ ಸಿಕ್ಕುವ ಹೊಲಸು ಬಣ್ಣದ ದೇವರ ಚಿತ್ರಗಳೇ ಈಗಿನವರಿಗೆ ಸಾಕು — ಅಳಿದುಳಿದಿರುವ ನಾವು ಇಬ್ಬರು ಮೂವರು ಕಣ್ಣು ಮುಚ್ಚಿಕೊಂಡರೆ ಈ ಸಂಪ್ರದಾಯ ಸಂಪೂರ್ಣವಾಗಿ ನಾಶವಾಗುತ್ತದೆ. ಅದಕ್ಕೇ ಬೇಸತ್ತು ನಾನೂ ತೆಪ್ಪಗಾಗಿದ್ದೆ. ಮನೆತನದ ವಿದ್ಯೆ ನನ್ನ ತಲೆಗೇ ಕೊನೆ ಎಂದು ಎದೆ ಗಟ್ಟಿ ಮಾಡಿಕೊಂಡಿದ್ದೆ. ಆದರೆ ನೀನು ಆಶಾಂಕುರ ಮಾಡಿದೆ. ಸ್ವಭಾವಜನ್ಯವಾಗಿಯೇ ನಿನ್ನಲ್ಲಿ ಶಿಲ್ಪಕಲೆ ಇದ್ದುದನ್ನು ಕಂಡೆ. ಈ ಕುಡಿಯನ್ನು ಪೋಷಿಸಬೇಕು. ಇದು ಬದುಕಿ ವೃಕ್ಷವಾದಲ್ಲಿ ಹಲವರಿಗೆ ಆಶ್ರಯ

ವಾಗುತ್ತದೆ. ನಶಿಸುತ್ತಿರುವ ಪುರಾತನ ಕಲೆಯೂ ಬದುಕಿಕೊಳ್ಳುತ್ತದೆ — ಎನ್ನುವ ಆಸೆ ಮೂಡಿತು. ನೀನಾದರೂ ಸರಿಯಾಗಿ ಕಲಿತು ಉದ್ಧಾರವಾಗುವೆಯಾ ? ಅದೂ ಇಲ್ಲ – ಮಹಾ ಸೋಮಾರಿ. ನಿದ್ರೆಗೆಡಲು ಹಿಂದುಮುಂದೆ ನೋಡುವೆ – ದುಡಿಯಲು ಅಳುಕುವೆ. ”

“ ಇಲ್ಲ ಅಪ್ಪಾಜಿ - ನೀನು ಹೇಗೆ ಹೇಳಿದರೆ ಹಾಗೆ ಕೇಳುತ್ತೇನೆ. ರಾತ್ರಿಯೆಲ್ಲಾ ಎಚ್ಚರವಾಗಿರುತ್ತೇನೆ. ಪಾಠ ಮುಂದುವರಿಸು — ಬೇಸರ ಪಟ್ಟುಕೊಳ್ಳಬೇಡ. ”

ಎಂದು ಶ್ರೀಕಂಠ ತಂದೆಯನ್ನು ಅಂಗಲಾಚುತ್ತಿದ್ದ.

ಶ್ರೀಕಂಠನ ಪ್ರಯತ್ನ ಬೆಳೆದಷ್ಟೂ ಶ್ರಮವೂ ಬೆಳೆಯುತ್ತಿತ್ತು, ತಂದೆಯ ಕಟುಮಾತುಗಳು, ಪ್ರಹಾರ ಸೇವೆ ಬೆಳೆಯುತ್ತಿತ್ತು. ಒಂದು ತಪ್ಪು ಸರಿಮಾಡಿಕೊಂಡರೆ, ಬೇರೊಂದು ತಪ್ಪಾಗುತ್ತಿತ್ತು.

ಒಂದೊಂದು ದಿನ ಸ್ಥಿರ ಮನಸ್ಸಿನಿಂದ ಕುಳಿತು ದೋಷರಹಿತವಾದ ಮೂರ್ತಿಯನ್ನು ಕಡೆದಿಡುವನು. ಇಂದು ಅಪ್ಪಾಜಿ ಇದನ್ನು ಒಪ್ಪಿಕೊಂಡೇ ಒಪ್ಪಿಕೊಳ್ಳುತ್ತಾನೆ ಎಂದು ಸಮಾಧಾನ ತಂದುಕೊಳ್ಳುವನು.

ಆದರೆ - ಅದೇ ರಾತ್ರಿ - ನಾಗಲಿಂಗಾಚಾರಿ ಮಗನ ಕೃತಿಯಲ್ಲಿ ನೂರು ದೋಷಗಳನ್ನು ಆಯ್ದು ತೋರಿಸಿ, ಮೂರ್ತಿಯನ್ನು ಛಿನ್ನಭಿನ್ನ ಮಾಡಿಬಿಡುವನು.

ಮಗನ ಕಣ್ಣಿನಿಂದ ನೀರು ತೊಟ್ಟಿಕ್ಕುತ್ತಿತ್ತು.

ತಂದೆಯ ಹೃದಯದಿಂದ ನೆತ್ತರು ಹನಿ ತೊಟ್ಟಿಕ್ಕುತ್ತಿತ್ತು

ಮಗನ ಕಣ್ಣೀರು ತಂದೆಗೆ ಕಾಣುತ್ತಿತ್ತು.

ತಂದೆಯ ನೆತ್ತರುಹನಿ ಮಗನಿಗೆ ಕಾಣುತ್ತಿರಲಿಲ್ಲ.

ತನ್ನ ಸಮಸ್ತ ಅನುಭವ, ಆಸೆನಿರಾಶೆ, ಸುಖದುಃಖವನ್ನು ಶ್ರೀಕಂಠ ಸ್ವರ್ಣನಲ್ಲಿ ತೋಡಿಕೊಳ್ಳಬೇಕು. ಅವನ ನಿರಾಶೆಯನ್ನು ತೊಡೆದು ಹಾಕಿ, ಕಂಬನಿಯೊರಸಿ ಅವಳು ಆಶಾವೃಕ್ಷಕ್ಕೆ ನೀರೆರೆಯಬೇಕು.

ವಿಹಾರ, ವಿರಾಮವಿಲ್ಲದ ಜೀವನ ಶ್ರೀಕಂಠನಿಗೆ ಸಾಕುಸಾಕಾಗಿ ಹೋಗುತ್ತಿತ್ತು. ಊಟೋಪಚಾರಗಳಲ್ಲಿಯೂ ತೃಪ್ತಿಯಿರಲಿಲ್ಲ. ಮುದುಕಿಯ ‘ ಸತ್ತುಕೂಳು ’ ತಿಂದು ತಿಂದು ಸಾಕಾಗಿತ್ತು.

ಆಗಾಗ್ಗೆ ಸ್ವರ್ಣ ತನ್ನ ಮನೆಯಲ್ಲಿ ಮಾಡಿದ ತಿಂಡಿ ಪದಾರ್ಥಗಳನ್ನು ಮುಚ್ಚಿ ತಂದುಕೊಡುವಳು. ಅವಳು ತಂದುಕೊಡುತ್ತಿದ್ದ ಕೋಡಬಳೆ, ಚಕ್ಕುಲಿ ಪುಳ್ಳಂಗಾಯ ಉಂಡೆ, ಹುರಿಗಾಳು ಶ್ರೀಕಂಠನಿಗೆ ಅಮೃತಪ್ರಾಯವಾಗಿತ್ತು.

ಒಮ್ಮೊಮ್ಮೆ ಸಂಜೆ ಸ್ವರ್ಣ ಶ್ರೀಕಂಠನನ್ನರಸುತ್ತಾ ಬರುವಳು. ಕೈಯಲ್ಲಿ ಉಳಿ ಹಿಡಿದು ಚಿಂತಾಮಗ್ನನಾಗಿ ಅವನು ಕುಳಿತಿರುತ್ತಿದ್ದ; ಇಲ್ಲದಿದ್ದರೆ 'ಶಿಲ್ಪ ಸಿದ್ಧಾಂತ' ದ ಸೂತ್ರಗಳನ್ನು ಉರುಹೊಡೆಯುತ್ತಿದ್ದ. ಉಳಿಯನ್ನೊ ಪುಸ್ತಕ ವನ್ನೊ ಅವನ ಕೈಬಿಡಿಸಿ ಸ್ವರ್ಣ ಮೃದುವಾಗಿ ಎಳೆಯುವಳು.

"ಈ ಸೂತ್ರಗಳನ್ನು ನಾನು ಕಂಠಪಾಠ ಮಾಡಿಕೊಂಡು ಒಪ್ಪಿಸದಿದ್ದರೆ ಅಪ್ಪಾಜಿ ನನ್ನ ಬಲಿಹಾಕಿ ಬಿಡುತ್ತಾರೆ."

"ಒಂದೇ ಸಮನೆ ಉರು ಹೊಡೆದರೆ ಪಾಠ ಹತ್ತುವುದಿಲ್ಲ. ಬಾ - ಸ್ವಲ್ಪ ಹೊತ್ತು ತಿರುಗಾಡಿಕೊಂಡು ಬರೋಣ."

"ಅಪ್ಪಾಜಿ ಹೇಳಿದ್ದು ನಿಜ!"

"ಯಾವುದು ?"

"ಹೆಣ್ಣು ಮಾಯೆ - ಗಂಡನ್ನು ಅಡ್ಡದಾರಿಗೆ ಎಳೆಯುವುದೇ ಅದರ ಕೆಲಸವೆಂದು."

"ಹಾಗೆ ಹೇಳುವ ನಿನ್ನ ಅಪ್ಪಾಜಿ ಪಾರ್ವತಿ, ಲಲಿತಾಂಬಾ, ಅನ್ನ ಪೂರ್ಣೇಶ್ವರಿ ಮೂರ್ತಿಗಳನ್ನೇಕೆ ಕಡೆಯುತ್ತಾರೆ. ಪಾರ್ವತಿ ಗಂಡೋ ಹೆಣ್ಣೋ."

"ಅವರು ದೇವರುಗಳು."

"ಅವರನ್ನು ಮಾಡಿದವರು ಯಾರು ?"

"ಹುಚ್ಚಿ. ದೇವರನ್ನು ಯಾರಾದರೂ ಮಾಡುತ್ತಾರೇನೇ?"

"ಇಲ್ಲಿರುವ ಜೇಡಿಯ ಮಣ್ಣು ಇದ್ದಕ್ಕಿದ್ದಂತೆ ಪಾರ್ವತಿಯಾಗಿ ಬಿಡು ತ್ತದೆಯೇ ?"

"ಇಲ್ಲ - ಶಿಲ್ಪಿ ಅದನ್ನು ಕಡೆಯುತ್ತಾನೆ."

"ಶಿಲ್ಪಿ ಮೂರ್ತಿ ಕಡೆದು ಅದಕ್ಕೆ ಪಾರ್ವತಿ ಎಂದು ಹೆಸರಿಡುತ್ತಾನೆ. ಅದನ್ನೇ ದೇವರು ಎಂದು ಪೂಜಿಸುತ್ತಾನೆ. ಒಂದೇ ಮುದ್ದೆಯಲ್ಲಿ ದೇವರನ್ನೂ ಮಾಡಬಹುದು – ಭೂತವನ್ನೂ ಮಾಡಬಹುದಲ್ಲವೇ ?"

"ಹೌದು."

ವಿಜಯದ ಸುಮ್ಮಾನ ಸ್ವರ್ಣನ ಮುಖದಲ್ಲಿ ತೇಲಿತು.

" ಹೋಗೋಣ ನಡೀ. " ಎಂದಳು.

ಶ್ರೀಕಂಠ ಪ್ರತಿಯಾಡದೆ ಅವಳನ್ನು ಹಿಂಬಾಲಿಸಿದ.

ಕೆಸರು ತುಂಬಿದ ಗದ್ದೆಯ ಬದುವಿನ ಮೇಲೆ ನಡೆದು ಹೋಗುತ್ತಾ ಪ್ರಕೃತಿಶ್ರೀಯನ್ನು ನೋಡಿ ಇಬ್ಬರೂ ಅರೆಮೂಕವಾಗಿ ನಿಂತುಬಿಡುವರು. ಕೆಸರಿನಲ್ಲಿ ನಿಂತುಕೊಂಡು ಪೈರು ನೆಡುತ್ತಿದ್ದ ಹೆಣ್ಣುಮಕ್ಕಳ ಸಾಲು. ಆಗಾಗ್ಗೆ ಅವರ ಬಾಯಿಂದ ಹೊರಬೀಳುತ್ತಿದ್ದ ಮಧುರಗೀತ. ಎತ್ತಲಿಂದಲೋ ಹಾರಿ ಬಂದು, ನಿರ್ಭಯವಾಗಿ ಬದುವಿನ ಮೇಲೆ ಕುಳಿತು ಹಾರಿಹೋಗುತ್ತಿದ್ದ ಬೆಳ್ಳಕ್ಕಿ ಸಾಲು. ಗದ್ದೆಯ ಮೇಲೆ ತೆರೆಯಂತೆ ನಿಂತಿರುತ್ತಿದ್ದ ರಾಡಿ ನೀರನ್ನು ಕುಡಿದು ದಣಿವಾರಿಸಿಕೊಳ್ಳುತ್ತಿದ್ದ ಕಾಗೆಗಳು. ಅವುಗಳನ್ನು ನೋಡುತ್ತ ನೋಡುತ್ತ ಶ್ರೀಕಂಠ

" ಅಗೋ ಅಲ್ಲಿ ನೋಡು ಸ್ವರ್ಣ " ಎಂದ.

" ಏನಿದೆ ? "

" ಪಂಚವರ್ಣದ ಗಿಣಿ. "

ಗಿಣಿಯನ್ನು ಎವೆಯಿಕ್ಕದೆ ನೋಡುತ್ತ ಸ್ವರ್ಣ ಮೈಮರೆಯುತ್ತಿದ್ದಳು. ತನ್ನ ಸೌಂದರ್ಯಾರಾಧಕರ ವಿಸ್ಮಯವನ್ನು ಲೆಕ್ಕಿಸದೆ ಗಿಣಿ ಹಾರಿ ಹೋಗುತ್ತಿತ್ತು. ಸ್ವರ್ಣ ತುಸು ಮುನಿಸಿನಿಂದ

" ಹಾಳಾದ್ದು ಹಾರಿ ಹೋಯಿತು " ಎನ್ನುತ್ತಿದ್ದಳು.

ಪ್ರಕೃತಿಯಲ್ಲಿ ಅವಿನಾಭಾವದಲ್ಲಿ ಬೆರೆತಿದ್ದ ವರ್ಣಸಮುದಾಯ, ರೇಖಾವಿನ್ಯಾಸ ಕಂಡು ಶ್ರೀಕಂಠನ ಹೃದಯ ಹಿಗ್ಗಿನಿಂದ ತುಂಬುತ್ತಿತ್ತು. ಆಗಲೇ ಅವನ ಹೃದಯದಲ್ಲಿ ಹೊಸ, ಅತೃಪ್ತಿಯೊಂದು ಕುಡಿಯೊಡೆಯುತ್ತಿತ್ತು.

' ಶಿಲ್ಪದಲ್ಲಿ ವರ್ಣವನ್ನು ತರಲಾಗುವುದಿಲ್ಲ. ರೇಖೆ, ವರ್ಣಗಳೆರಡರಲ್ಲಿಯೂ ಸಿದ್ಧಹಸ್ತನಾಗದೆ ಕಲೆಯ ರಹಸ್ಯ - ಪ್ರಕೃತಿಯ ರಹಸ್ಯ ಅರಿವಾಗುವುದಿಲ್ಲ. '

ಒಂದೊಂದು ದಿನ ಇಬ್ಬರೂ ಹಸಿರು ಹುಲ್ಲಿನ ಹಾಸಿನ ಮೇಲೆ ಕುಳಿತು ಎದುರಿಗೆ - ಅನತಿ ದೂರದಲ್ಲಿ ತಲೆಯೆತ್ತಿ ನಿಂತಿದ್ದ ಬೆಟ್ಟಗುಡ್ಡಗಳ ಸಾಲುಗಳನ್ನು ಈಕ್ಷಿಸುವರು. ಕಲ್ಲಿನ ಕಠೋರತೆಯನ್ನೂ ಸಂಧ್ಯಾರಾಗ ಕರಗಿಸು

ತ್ತಿತ್ತು. ಅದೇ ಅಸ್ತಮಿಸುತ್ತಿದ್ದ ದಿವಾಕರ ತನ್ನ ನಸುಗೆಂಪು ಕಿರಣಗಳನ್ನು ಕಲ್ಲಿನ ಕಂದು ಬಣ್ಣದ ಮೇಲೆ ಪಸರಿಸಿ ಅದಕ್ಕೊಂದು ಅಪೂರ್ವ ಮಾರ್ದವತೆಯನ್ನೂ – ಸ್ನಿಗ್ಧತೆಯನ್ನೂ ತಂದುಕೊಡುತ್ತಿದ್ದ.

ಎದುರಿಗಿದ್ದುದು ಕಲ್ಲು - ಕಗ್ಗಲ್ಲು.

ಆದರಾ ಕಗ್ಗಲ್ಲಿನಲ್ಲಿ ಎಷ್ಟು ಕಥೆಗಳಿವೆ. ಎಷ್ಟು ಚರಿತ್ರೆಗಳಿವೆ - ಎಷ್ಟು ಪುರಾಣಗಳಿವೆ.

ಆ ಕಗ್ಗಲ್ಲಿನ ಅವಕುಂಠನದ ಹಿಂದೆ ಎಂಥೆಂಥ ಮಹಾನುಭಾವರು ಮುಖ ಮರಸಿಕೊಂಡಿದ್ದಾರೆ.

ಪ್ರಕೃತಿ ತನ್ನ ಗರ್ಭದಲ್ಲಿ ಎಷ್ಟು ಶಕ್ತಿ – ಎಷ್ಟು ಸೌಂದರ್ಯವನ್ನು ಅಡಗಿಸಿಕೊಂಡಿದೆ.

ಪ್ರಕೃತಿ ಮಾತೆ ಲೋಭಿಯೇ ? ತನ್ನ ರಹಸ್ಯ ಯಾರಿಗೂ ತಿಳಿಯಬಾರದೆಂದು, ತನ್ನ ಅನುಪಮ ಸಂಪತ್ತಿನಲ್ಲಿ ಯಾರೂ ಪಾಲು ಪಡೆಯಬಾರದೆಂದು ಅವಳು ಬಯಸುವಳೇ ?

ಇಲ್ಲ - ಇಲ್ಲ - ಪ್ರಕೃತಿಮಾತೆ ತನ್ನ ಮಕ್ಕಳೊಂದಿಗೆ ಚೆಲ್ಲಾಟವಾಡುತ್ತಿದ್ದಾಳೆ. ಕೈಮುಚ್ಚಿಕೊಂಡು ‘ ಏನಿದೆ ಹೇಳು ? ’ ಎಂದು ಮಕ್ಕಳನ್ನು ಎಡಿಸುತ್ತಾಳೆ. ತಾಯಿಯ ಕೈಯಲ್ಲಿರುವುದನ್ನು ಊಹಿಸಿದವರಿಗೆ ಅದು ಸಿಕ್ಕುತ್ತದೆ.

ತಾಯಿಯ ಕೈಯಲ್ಲಿರುವುದನ್ನು ಊಹಿಸಬೇಕು !

ಅವಳ ಅನಂತ ಲೀಲಾ ವಿಲಾಸದ - ಪ್ರಸುಪ್ತ ಶಕ್ತಿ, ಸೌಂದರ್ಯದ ವಿವಿಧ ಆವಿಷ್ಕಾರಗಳನ್ನು ಕಲೆಯ ಬಲೆಯಲ್ಲಿ ಸೆರೆ ಹಿಡಿಯಬೇಕು.

ಶ್ರೀಕಂಠನ ಮನಸ್ಸಿನಲ್ಲಿ ತರಂಗತರಂಗವಾಗಿ ಏಳುತ್ತಿದ್ದ ಭಾವನಾ ಲಹರಿಗಳನ್ನೆದುರಿಸುವಂತೆ ಸ್ವರ್ಣ

“ ನಮ್ಮ ಬೆಟ್ಟದ ಚಿತ್ರ ಬರೆದು ಕೊಡುವುದಿಲ್ಲವೇ ನನಗೆ ಶ್ರೀಕಂಠ ” ಎಂದು ಕೇಳಿದಳು.

“ ನಾನು ಚಿತ್ರಗಾರನಲ್ಲ - ಶಿಲ್ಪಿ. ಮಣ್ಣಿನಲ್ಲಿ ಬಣ್ಣವನ್ನು ಹೇಗೆ ತುಂಬಲಿ ? ”

“ ಶಿಲ್ಪಿ ಚಿತ್ರಗಾರನಾಗಬಾರದೇ ? ”

“ ಏಕಾಗಬಾರದು? ಆದರೆ ಆಗುವುದು ಹೇಗೆ ? ನನ್ನ ಕೈ ಹಿಡಿದು

ಮುನ್ನಡೆಸುವವರು ಯಾರು ?"

"ಶಿಲ್ಪ ಕಲಿಯುವುದಕ್ಕೆ ನಿನಗೆ ದೈವಸಹಾಯ ಒದಗಿದಂತೆ ಇದಕ್ಕೂ ಒದಗುತ್ತದೆ."

"ನಾನು ಮೈಸೂರಿಗೆ ಹೋದರೆ........"

"ಅಲ್ಲಿ........"

"ಕಲಾಶಾಲೆಯಿದೆ. ಚಿತ್ರಕಲೆ ಅಭ್ಯಾಸ ಮಾಡಬಹುದು. ಇನ್ಸ್‌ಪೆಕ್ಟರ್ ರಾಮನಾಥಯ್ಯನವರು ಸಹಾಯ ಮಾಡುವುದಾಗಿ ಹೇಳಿದ್ದಾರೆ."

"ಇನ್ನೇಕೆ ಚಿಂತೆ ?"

"ಎಂದು ಸೇರುವುದು - ಎಂದು ಕಲಿಯುವುದು ?"

"ಎಲ್ಲಕ್ಕೂ ಕಾಲ ಬರಬೇಕು - ಬರುತ್ತದೆ."

"ಬೇಗ ಬರಬಾರದೇ ಎಂದು ಮನಸ್ಸು ಧಾವತಿ ಪಡುತ್ತಿದೆ."

ಸ್ವರ್ಣ ಮಾತು ಬೆಳಸವೆ ಮೌನ ತಾಳುವಳು. ಶ್ರೀಕಂಠ ಭಾವನಾಪರ ವಶನಾಗುವನು.

ಮಾತು ಹೇಳಲಾಗದುದನ್ನು ಮೌನ ಹೇಳುತ್ತಿತ್ತು. ಒಂದು ಹೃದಯದ ಭಾವನೋದ್ವೇಗಕ್ಕೆ ಇನ್ನೊಂದು ಹೃದಯದ ಮಧುರ ರಸಾನುಭೂತಿ ಬೆರೆಯುತ್ತಿತ್ತು.

ಎರಡು ಜೀವಗಳು - ತಮಗರಿವಾಗದ - ಯಾವದೋ ಗುರಿಯನ್ನರಸುತ್ತಿದ್ದವು.

## ೬

ರಾಮನಾಥಯ್ಯ 'ಎದ್ದು ಹೋಗೋ ಮಾತು ಬಿದ್ದು ಹೋಗಲಿ, ಎಂದು ಮಾತಾಡುವವರಲ್ಲ. ಮನುಷ್ಯ ತುಂಬಾ ಆಳ ಸಮುದ್ರದ ಮೊಸಳೆ ಯಿದ್ದ ಹಾಗೆ' ಎಂದು ಅವರ ಸಂಗಡಿಗರು ಪರಿಹಾಸ್ಯ ಮಾಡುತ್ತಿದ್ದರು. ಮೊಸಳೆಯ ಕ್ರೌರ್ಯವಿರದಿದ್ದರೂ ಸಮುದ್ರದ ಆಳ ರಾಮನಾಥಯ್ಯನವರಲ್ಲಿತ್ತು.

ಅವರ ಮನೆತನ ಒಂದು ಕಾಲಕ್ಕೆ ಶ್ರಮಜೀವನ, ಕಲಾಪ್ರಾವೀಣ್ಯ ಎರಡಕ್ಕೂ ಹೆಸರಾಗಿತ್ತು. ಅವರ ತಾತ ರುದ್ರಪಟ್ಟಣದ ವೆಂಕಟಕೃಷ್ಣಯ್ಯ

ನವರು ಸ್ವಯಂ ಹೊಲ ಉಳುತ್ತಿದ್ದರು; ಅಡಿಕೆ ತೋಟದ ಕೆಲಸ ಮಾಡುತ್ತಿದ್ದರು; ಅಡಿಕೆ ಬೇಯಿಸುತ್ತಿದ್ದರು. ಮನೆಗೆ ಬಂದಮೇಲೆ ಸಾಂಗವಾಗಿ ದೇವರ ಪೂಜೆ, ರುದ್ರಾಭಿಷೇಕ ಮಾಡಿ ಪುಷ್ಟ ಊಟ ಹೊಡೆದು ಸ್ವಲ್ಪ ಹೊತ್ತು ಮಲಗುತ್ತಿದ್ದರು. ಎದ್ದಮೇಲೆ ಕೈತುಂಬ ಕೆಲಸ. ರಾತ್ರಿ ಒಂದೆರಡು ಗಂಟೆಗಳು ಬಿಡುವು ಮಾಡಿಕೊಂಡು ಕೈಯಲ್ಲಿ ವೀಣೆ ಹಿಡಿಯುತ್ತಿದ್ದರು. ನೇಗಿಲು ಹಿಡಿಯುತ್ತಿದ್ದ ಕೈ ವೀಣೆ ಹಿಡಿಯುವುದನ್ನು ನೋಡಿ ಜನ ಬೆಕ್ಕಸ ಬೆರಗಾಗುತ್ತಿದ್ದರು.

ದುಡಿಮೆ, ಕಲಾಪ್ರೇಮ ಎರಡು ಗುಣಗಳೂ ವೆಂಕಟಕೃಷ್ಣಯ್ಯನವರ ಮತಸ್ಥರಲ್ಲಿ ಪರಂಪರಾಗತವಾಗಿ ಬೆಳೆದು ಬಂದಿದ್ದ ಗುಣಗಳು. ಅವರಲ್ಲಿ ಕೆಲವರು ಶತಪಾಠಿ, ಘನಪಾಠಿಗಳಾಗಿ ಖ್ಯಾತಿ ಗಳಿಸಿದ್ದರು. ಆ ಜನ ಸಾಕಷ್ಟು ಪ್ರಸಿದ್ಧಿಗೆ ಬಂದಿದ್ದುದಕ್ಕೆ ಅವರ ಸ್ವಗ್ರಾಮ ಪ್ರೇಮವೇ ಮೂಲ ಕಾರಣವಾಗಿತ್ತು. ಅಖಂಡ ಭೂಮಂಡಲದ ಪ್ರಭುತ್ವ ಕೂಡ ತನ್ನ ಒಂದು ಎಕರೆ ಗದ್ದೆ, ಅರ್ಧ ಎಕರೆ ಅಡಿಕೆ ತೋಟಕ್ಕೆ ಸರಿಬರಲಾರದೆಂದು ಪ್ರತಿಯೊಬ್ಬನೂ ತಿಳಿದಿದ್ದ. ರೈಲು ಹತ್ತದಿದ್ದವರು, ಸಿನೀಮಾ ನೋಡದಿದ್ದವರು ಕೂಡ ಆ ಊರಿನಲ್ಲಿ ದೊರೆಯುತ್ತಿದ್ದರು.

ಪ್ರತಿವರ್ಷ ರಾಮನವಮಿ ಕಾಲದಲ್ಲಿ ನಡೆಯುತ್ತಿದ್ದ 'ಶ್ರೀರಾಮನವಮಿ ಮಹೋತ್ಸವ' ಊರಿನ ಹಿರಿಹಬ್ಬವಾಗಿತ್ತು. ಚಿಕ್ಕವರು, ದೊಡ್ಡವರು, ಶ್ರೀಮಂತರು, ಬಡವರು, ಬ್ರಾಹ್ಮಣರು, ಒಕ್ಕಲಿಗರು ಸಮಸ್ತ ಜನರೂ ಸೌಹಾರ್ದದಿಂದ ಕೂಡಿಕೊಂಡು ಹತ್ತು ದಿವಸ ಉತ್ಸವವನ್ನು ಸಂಭ್ರಮದಿಂದ ನೆರವೇರಿಸುತ್ತಿದ್ದರು. ಕೊನೆಯ ದಿವಸ ಊರ ಸಂತರ್ಪಣೆ ನಡೆದು ಉತ್ಸವ ಮುಕ್ತಾಯವಾಗುತ್ತಿತ್ತು. ಈ ಸಮಯದಲ್ಲಿ ಮೈಸೂರಿನ ಹಾಗೂ ಮೈಸೂರು ಹೊರಗಿನ ವಿದ್ವಾಂಸರಿಗೂ, ಸಂಗೀತಗಾರರಿಗೂ ಆಹ್ವಾನಗಳು ಹೋಗುತ್ತಿದ್ದವು.

ರುದ್ರಪಟ್ಟಣದ ಜನ ಕೊಡುತ್ತಿದ್ದ ಸಂಭಾವನೆ ಸಂಖ್ಯಾಮಾನದಿಂದ ಹಿರಿದಲ್ಲವಾದರೂ, ವಿದ್ವಾಂಸರು ರುದ್ರಪಟ್ಟಣಕ್ಕೆ ಬಂದು ಉತ್ಸವದಲ್ಲಿ ಭಾಗಿಗಳಾಗಿ, ಊರಿನವರ ಕೈಯಲ್ಲಿ ' ಸೈ ' ಎನಿಸಿಕೊಳ್ಳಲು ತವಕಪಡುತ್ತಿದ್ದರು. ರುದ್ರಪಟ್ಟಣದಲ್ಲಿ ಪಾರಾಗಿ ಬಂದವನು, ವಿಶ್ವದಲ್ಲಿ ಎಲ್ಲಿಯಾದರೂ ಪಾರಾಗಬಲ್ಲ ಎನ್ನುವ ನಂಬಿಕೆ ಕಾರಣವಾಗಿದ್ದುದಲ್ಲದೆ, ಊರಿನವರ ವಿದ್ವತ್ಪ್ರೌಢಿಮೆಯೂ

ಕಾರಣವಾಗಿತ್ತು.

ಒಮ್ಮೆ ಆಲೆಕ್ಕಾಡ ರಾಮನಾರಾಯಣ ಅಯ್ಯರ್ ಎನ್ನುವ ವಿದ್ವಾಂಸರೊಬ್ಬರು ಆಗಮಿಸಿದ್ದರು. ಅವರ ಕೀರ್ತಿಯಷ್ಟೇ ವಿಶಾಲವಾಗಿತ್ತು ಅವರ ಸೊಬಗಸ್ತು. ಅಯ್ಯರು ಬರುವಾಗಲೇ ಇಬ್ಬರು ಶಿಷ್ಯಂದಿರು, ಒಬ್ಬ ಸೇವಕನನ್ನು ಜತೆಯಲ್ಲಿ ಕರೆದುಕೊಂಡು ಬಂದಿದ್ದರು. ಅವರ ವಾಸಕ್ಕೆ ಪ್ರತ್ಯೇಕ ಮನೆ, ಅಡಿಗೆಗೆ ಒಬ್ಬ ಅಡಿಗೆಯವನು, ಸೇವೆ ಶಿಶ್ರೂಷೆಗೆ ಒಬ್ಬ ಆಳು ಗೊತ್ತು ಮಾಡಲ್ಪಟ್ಟಿತು. ಅಯ್ಯರವರಿಗೂ, ಅವರ ಬಳಗಕ್ಕೂ ದಿನಕ್ಕೆ ಆರು ಸೇರು ಹಸುವಿನ ಹಾಲು ಸರಬರಾಯಿ ಆಗುತ್ತಿತ್ತು. ಚೆಟ್ಟಿಪಪುರದಿಂದ ಸ್ಪೆಷಲ್ ನಶ್ಯ, ಮೈಸೂರಿನಿಂದ ಬುತ್ತಿ ಚಿಗುರು ವೀಳೆಯದೆಲೆ - ಹೂವು ಬರುತ್ತಿತ್ತು. ಈ ರಾಜೋಪಚಾರ ಅಯ್ಯರವರಿಗೆ ಹೊಸದೇನೂ ಅಲ್ಲ. ಪುರುಕೋಟೆ, ತಿರುವನಂತಪುರಗಳ ' ಆಸ್ಥಾನ ವಿದ್ವಾನ ' ರಾಗಿದ್ದ ಅಯ್ಯರವರು ರಾಜವೈಭವದಲ್ಲಿಯೇ ಬೆಳೆದಿದ್ದರು. ಮದ್ರಾಸು ಸಂಸ್ಥಾನದ ಹಲವಾರು ಚಿಲ್ಲರೆ ರಾಜರ ಕೈಯಲ್ಲಿ ಅಯ್ಯರವರು ಶಿಶ್ರೂಷೆ ಮಾಡಿಸಿಕೊಂಡಿದ್ದರು.

ಅಯ್ಯರವರು ಎರಡು ದಿನ ವಿಶ್ರಾಂತಿ ಪಡೆದು ಮೂರನೆಯ ದಿನ ತಮ್ಮ ' ವೀಣೆ ಕಛೇರಿ ' ಮಾಡಲು ಒಪ್ಪಿಕೊಂಡರು. ಅವರ ಖ್ಯಾತಿಯನ್ನು ಕೇಳಿದ್ದ ನೂರಾರು ಜನ ಮೈಸೂರು, ಶ್ರೀರಂಗಪಟ್ಟಣ, ಮೇಲುಕೋಟೆ, ಹಾಸನಗಳಿಂದ ಆಗಮಿಸಿದ್ದರು. ರಾಮನವಮಿ ಚಪ್ಪರದ ತಡಿಕೆಗಳೆಲ್ಲಾ ನುಚ್ಚುನೂರಾಗಿದ್ದವು.

ಸಂಜೆ ಆರಕ್ಕೆ ಸರಿಯಾಗಿ ಅಯ್ಯರವರ ಶಿಷ್ಯರು ವೇದಿಕೆಯ ಮೇಲೆ ಬಂದು, ವೇದಿಕೆಯ ಮಧ್ಯೆ ಗುರುಗಳ ವೀಣೆಯಿಟ್ಟು, ಅತ್ತಿತ್ತ ತಮ್ಮ ವೀಣೆಗಳನ್ನಿಟ್ಟುಕೊಂಡು ಕುಳಿತರು. ಶಿಷ್ಯರು ಒಂದು ವರ್ಣ ನುಡಿಸಿ ಮುಗಿಸುವ ವೇಳೆಗೆ ಗುರುಗಳ ಸವಾರಿ ಚಿತ್ತೈಸಿತು.

ಅಯ್ಯರು ಪ್ರವೇಶಿಸುದುದನ್ನು ನೋಡಿ ಸಭಾಸದರು ಚಕಿತರಾದರು. ಅವರ ಎರಡು ಕೈಯಲ್ಲಿಯೂ ಎರಡು ಬಂಗಾರದ ತೋಡಾಗಳು. ಕೊರಳಲ್ಲಿ ಚಿನ್ನದ ಪದಕಗಳ ಸರಮಾಲೆ - ಚಿನ್ನದ ದಾರದಲ್ಲಿ ಬಿಗಿದಿದ್ದ ಏಕರುದ್ರಾಕ್ಷಿ. ಮೈತುಂಬ ಜರತಾರಿ ಶಾಲು. ಕೈಯಲ್ಲಿ ಬೆಳ್ಳಿಯ ಕೆಲಸ ಮಾಡಿದ ಕರೀಮರದ ಸೊಣ್ಣೆ.

ಅಯ್ಯರವರು ವೇದಿಕೆಯ ಮೇಲೆ ಕುಳಿತು, ಮೊದಲು ಒಂಗು ಚಿಟಿಕೆ

ನಶ್ಯ ಮೂಗಿಗೇರಿಸಿ, ವೀಣೆಯನ್ನು ಕೈಗೆ ತೆಗೆದುಕೊಂಡು ಸಭಾಸದರನ್ನು ಎಚ್ಚರಿಸುವಂತೆ ಒಂದು ಮೀಟು ಹಾಕಿದರು.

ಕಛೇರಿ ಭೈರವಿ ವರ್ಣದಿಂದ ಆರಂಭವಾಯಿತು.

ವಾದ್ಯದ ಮೇಲೆ ಅಯ್ಯರವರಿಗಿದ್ದ ಸ್ವಾಮ್ಯ ಕಂಡು ಜನ ಬೆರಗಾದರು.

ತೋಡಿ ರಾಗ, ತಾನ, ಕೀರ್ತನೆಯಾಯಿತು.

ಸಭೆಯಲ್ಲೇಕೋ ಸ್ವಲ್ಪ ಗುಜುಗುಂಪಲಾಯಿತು.

ಅಯ್ಯರವರ ಪ್ರಖರ ನೇತ್ರಗಳು ಸದ್ದಡಗಿಸಿದವು.

ಅಯ್ಯರವರು ಮುಖಾರಿ ರಾಗದ ಆಲಾಪ ನುಡಿಸುತ್ತಿದ್ದಾಗ ಮತ್ತೆ ಗುಜುಗುಂಪಲಾಯಿತು.

ಅಯ್ಯರವರು ಕೆರಳಿ

" ಇದು ಘನ ಸಂಗೀತ. ನೀವು ನಿಶ್ಯಬ್ದವಾಗಿ ಕೇಳಿದರೆ ನುಡಿಸಲು ಸಾಧ್ಯ. ಹೀಗೆ ಗಲಭೆ ಮಾಡಿದರೆ ನಾನು ಕಛೇರಿ ನಿಲ್ಲಿಸಿ ಬಿಡಬೇಕಾಗುತ್ತದೆ " ಎಂದರು.

ವೆಂಕಟಕೃಷ್ಣಯ್ಯನವರೆದ್ದು ನಿಂತುಕೊಂಡು, ಸಭೆಗೆ ಕೈಮುಗಿದು

" ದಯವಿಟ್ಟು ಯಾರೂ ಗಲಾಟೆ ಮಾಡಬಾರದು. ದೊಡ್ಡ ವಿದ್ವಾಂಸರು ಬಂದಿದ್ದಾರೆ. ಅವರ ಸಂಗೀತ ತಾವು ಸಾವಕಾಶವಾಗಿ ಕೇಳಿ ಆನಂದಿಸಬೇಕು."

ಎಂದೊಡನೆಯೇ ಸಭಾ ಮಧ್ಯೆ ಕುಳಿತಿದ್ದ ಹರಕಲು ಷರಟಿನ ಒಬ್ಬ ಶ್ರಾವಕ

" ಯಾವ ಘನಸಂಗೀತ ಸ್ವಾಮಿ ಇದು – ಇದೇನು ಸಂಗೀತವೋ ಭತ್ತ ಕುಟ್ಟುವ ಕೊಟ್ಟಣೆಯೋ ? " ಎಂದು ಕೇಳಿದ.

ಅವನ ಮಾತಿಗೆ ಸಭೆಯ ಜನ ಗೊಳ್ಳೆಂದು ನಕ್ಕರು.

ಸಭಾಸದರನ್ನು ಮತ್ತೆ ಸಮಾಧಾನಗೊಳಿಸಲು ಎದ್ದುನಿಂತ ವೆಂಕಟ ಕೃಷ್ಣಯ್ಯನವರ ಷರಟು ಜಗ್ಗಿ ಅಯ್ಯರವರು

" ಅದೇನು - ಅವರು ಏನು ಹೇಳಿದರು. "

ಎಂದು ತಮಿಳಿನಲ್ಲಿ ಕೇಳಿದರು.

" ಆ ವಿಷಯ ಬೇಡಿ ಸ್ವಾಮಿ – ತಮ್ಮ ಕಛೇರಿ ಸಾಗಲಿ. "

ಎಂದು ವೆಂಕಟಕೃಷ್ಣಯ್ಯನವರು ಹೇಳಿದರೂ ಸಮಾಧಾನಗೊಳ್ಳದೆ

ಅಯ್ಯರವರು ' ಅದೇನು ಹೇಳಿ ' ಎಂದು ಒತ್ತಾಯ ಮಾಡಿದರು.

ವೆಂಕಟಕೃಷ್ಣಯ್ಯ ಹೇಳಲೊಲ್ಲರು; ಅಯ್ಯರು ಬಿಡಲೊಲ್ಲರು.

ಹರಕು ಷರಟಿನ ಸಭಾಸದನೇ ಎದ್ದು ನಿಂತು ತಮಿಳಿನಲ್ಲಿ

" ನಿಮ್ಮ ಸಂಗೀತ ಕುಸ್ತಿ ಇದ್ದ ಹಾಗಿದೆ ಎಂದು ಇಲ್ಲಿ ಜನ ಅಭಿಪ್ರಾಯ ಪಡುತ್ತಾರೆ " ಎಂದ.

ಅಯ್ಯರವರಿಗೆ ನಖಶಿಖಾಂತ ಉರಿಯೆದ್ದಿತು. ಇನ್ನೊಂದು ಚಿಟಿಕೆ ನಶ್ಯ ಮೂಗಿಗೇರಿಸಿ, ಕಣ್ಣು ಕೆಂಪಗೆ ಮಾಡಿಕೊಂಡು

" ಸಂಗೀತದ ವಿಷಯ ನಿಮಗೇನು ಗೊತ್ತು. " ಎಂದರು.

ಸಂಭಾಷಣೆ ತೀರ ವಿರಸವಾಗುತ್ತಿದ್ದುದನ್ನು ಕಂಡು ವೆಂಕಟಕೃಷ್ಣಯ್ಯನವರು ದೈನ್ಯದಿಂದ

" ದಯವಿಟ್ಟು ಕಛೇರಿ ಮುಂದುವರಿಸಿ ವಿದ್ವಾಂಸರೇ "

ಎಂದು ಬೇಡಿಕೊಂಡರು.

ಅಯ್ಯರವರ ಕೋಪ ಉಪಶಮನವಾಗಿರಲಿಲ್ಲ. ಕೋಪದ ಕೈಗೆ ಸಿಕ್ಕಿದ ನಾಲಗೆ ಮನಸ್ಸು ಬಂದಂತೆ ಗಳಹುವುದಕ್ಕಾರಂಭಿಸಿತು.

" ಮಡೆಯರ ಮುಂದೆ ಕಛೇರಿ ಮಾಡಲೊಪ್ಪಿಕೊಂಡದ್ದು ನನ್ನ ತಪ್ಪು. ಮೈಸೂರಿನವರಿಗೆ ಸಂಗೀತ ಬರುವುದಿಲ್ಲವೆಂದು ನನಗೆ ಮೊದಲೇ ಗೊತ್ತಿತ್ತು. ಎಂದರು.

ವೆಂಕಟಕೃಷ್ಣಯ್ಯನವರ ಸ್ವಾಭಿಮಾನ ಕೆರಳಿತು.

ಹರಕು ಷರಟಿನವನು ಜನಗಳ ಮಧ್ಯೆ ದಾರಿ ಬಿಡಿಸಿಕೊಂಡು ವೇದಿಕೆಯ ಬಳಿಗೆ ಬಂದಿದ್ದ.

ಜನಗಳಲ್ಲಿ ಮತ್ತೆ ಗುಜುಗುಂಪಲಿಗೆ ಆರಂಭವಾಯಿತು.

ಹರಕು ಷರಟಿನವನು

" ವಿದ್ವಾಂಸರು ತಾವು ಆಡಿದ ಮಾತು ಹಿಂದಕ್ಕೆ ತೆಗೆದುಕೊಂಡು ಕಛೇರಿ ಮುಂದುವರಿಸಲಿ " ಎಂದ.

" ಹೋಗಲಿ ಬಿಡೋ ಶ್ರೀನಿವಾಸಮೂರ್ತಿ. ಹೊರಗಿನಿಂದ ಬಂದವರನ್ನು ಅವಮಾನ ಮಾಡುವುದು ಧರ್ಮವಲ್ಲ. "

" ಕಣಿವೇ ಕೆಳಗಿನವರು ಮೈಸೂರಿನವರನ್ನು ಅವಮಾನ ಮಾಡುವುದೂ

ಧರ್ಮವಲ್ಲ. "

ಸಭೆ ಶ್ರೀನಿವಾಸಮೂರ್ತಿಯ ಮಾತಿಗೆ ಬೆಂಬಲವಿತ್ತು ಘೋಷಿಸಿತು.

ಅಲ್ಲಿ ನಡೆದಿದ್ದ ಸಂಭಾಷಣೆ ಪೂರ್ತಿಯಾಗಿ ಅಯ್ಯರವರಿಗೆ ಅರ್ಥವಾಗಿರಲಿಲ್ಲ.

" ಏನಂತೆ! " ಎಂದು ಠೀವಿಯಿಂದ ಕೇಳಿದರು.

" ಮೈಸೂರಿನವರಿಗೆ ಸಂಗೀತ ಬರುವದಿಲ್ಲವೆಂದು ನೀವು ಹೇಳಬಾರದಾಗಿತ್ತು ವಿದ್ವಾಂಸರೇ. "

" ಆ ವಿಷಯ ಲೋಕಪ್ರಸಿದ್ಧವಾಗಿದೆಯಲ್ಲ! "

ಹುಣ್ಣಿನ ಮೇಲೆ ಬರೆ ಎಳೆದಂತಾಯಿತು. ಕಫ್‌ಲಿಂಕ ಇಲ್ಲದೆ ಹಕ್ಕಿಯ ರೆಕ್ಕೆಗಳಂತೆ ಹಾರಾಡುತ್ತಿದ್ದ ಷರಟಿನ ತೋಳು ತುದಿಯನ್ನು ಮೇಲಕ್ಕೇರಿಸಿ ಶ್ರೀನಿವಾಸಮೂರ್ತಿ

" ಕಣಿವೇ ಕೆಳಗಿನವರಿಗೆ ಏನು ಬರುತ್ತದೆ ಒಂದು ಕೈ ನೋಡಿಯೇ ಬಿಡುತ್ತೇನೆ " ಎಂದ

ಶಾಂತಿಸಂಧಾನ ಮಾಡಲು ಬಂದ ವೆಂಕಟಕೃಷ್ಣಯ್ಯನವರ ಕೈಕೊಡವಿ

" ಬಿಡು ಮಾವಯ್ಯ – ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ, ಜಿತ್ವಾ ವಾ ಭೋಕ್ಷ್ಯಸೇ ಮಹೀಮ್. "

ಎಂದವನೇ ಸಭೆಯ ಕಡೆ ತಿರುಗಿ ' ರಾಮಣ್ಣಾ ' ಎಂದು ಕೂಗಿದ. ಹದಿನಾರು ವರ್ಷದ ರಾಮಣ್ಣ ಎದ್ದು ಬರಲು

" ಮನೆಗೆ ಓಡಿಹೋಗಿ ನನ್ನ ವೀಣೆ ತೆಗೆದುಕೊಂಡು ಬಾ " ಎಂದ.

ಕೋಪತಪ್ತನಾಗಿದ್ದ ಶ್ರೀನಿವಾಸಮೂರ್ತಿಯ ಮೈಕೈಯೆಲ್ಲಾ ಅದುರುತ್ತಿತ್ತು. ಧ್ವನಿಗೂ ಕಂಪನವೇರಿತ್ತು. ರಕ್ತಛಾಯೆಗೊಂಡಿದ್ದ ಕಣ್ಣುಗಳಲ್ಲಿ ಹನಿಗೂಡಿದ್ದವು. ಅಯ್ಯರವರ ಕಡೆ ತಿರುಗಿ

" ಮೈಸೂರು – ಕಣಿವೇ ಕೆಳಗಿನ ಸಂಗೀತದ ಪರೀಕ್ಷೆ ನಡೆದುಹೋಗಲಿ ವಿದ್ವಾಂಸರೇ. " ಎಂದ.

ಅಯ್ಯರವರು ಮತ್ತಷ್ಟು ಠೀವಿಯಿಂದ ಕುಳಿತು, ಶ್ರೀನಿವಾಸಮೂರ್ತಿಯನ್ನು ತಿರಸ್ಕಾರದಿಂದ ನೋಡಿ

" ನನ್ನೆದುರು ಕುಳಿತು ನೀನು ನುಡಿಸುವೆಯಾ? " ಎಂದರು.

" ಹೂ ! ನಾನೇ ನುಡಿಸುತ್ತೇನೆ."

" ಆಗಬಹುದು. ನಿನಗೆ ಆಂಡವನೇ ಗತಿ. "

" ನಿಮ್ಮ ಆಂಡವ ನಿಮ್ಮನ್ನು ರಕ್ಷಿಸಿದರೆ ಸಾಕು. "

ರಾಮಣ್ಣ, ಹರಕಲು ಗೌಸು ಧರಿಸಿದ್ದ ವೀಣೆಯನ್ನು ತಂದು ಶ್ರೀನಿವಾಸ ಮೂರ್ತಿಯ ಕೈಗಿತ್ತ.

ಪ್ರಸಂಗ ಕೈಮೀರಿ ಹೋದುದಕ್ಕೆ ಚಿಂತಿಸುತ್ತಾ ವೆಂಕಟಕೃಷ್ಣಯ್ಯ ತಲೆಯ ಮೇಲೆ ಕೈಹೊತ್ತು ಕುಳಿತು ಬಿಟ್ಟರು. ಶ್ರೀನಿವಾಸಮೂರ್ತಿ ವೀಣೆಯ ಗೌಸು ತೆಗೆದು ವೇದಿಕೆಯ ಮೇಲಿಟ್ಟು ವೆಂಕಟಕೃಷ್ಣಯ್ಯನವರ ಪಾದಮುಟ್ಟಿ ನಮಸ್ಕರಿಸಿ ಬಂದು, ವೇದಿಕೆಯ ಮೇಲೆ ಕುಳಿತ.

ಬಡವರ ಮನೆಯ ಮಗಳಂತೆ ನಿರಾಭರಣ ಸುಂದರಿಯಾಗಿತ್ತು ಶ್ರೀನಿವಾಸಮೂರ್ತಿಯ ವೀಣೆ.

ಆಪಾದ ಮಸ್ತಕ ಜವಾಹಿರಿ ಹೊತ್ತ ಶ್ರೀಮಂತರ ಮನೆಯ ಮಗಳಂತೆ ಅಯ್ಯರವರ ವೀಣೆ ಶೋಭಿಸುತ್ತಿತ್ತು.

ಶ್ರೀನಿವಾಸಮೂರ್ತಿ ವೀಣೆ ಶ್ರುತಿ ಮಾಡಿಕೊಂಡು

" ಆರಂಭಿಸಬಹುದು. " ಎಂದ.

" ನೀನೇ ಆರಂಭಿಸು " ಎಂದರು ಅಯ್ಯರು.

" ಹಾಗೂ ಆಗಬಹುದು. ಶಂಕರಾಭರಣ ರಾಗ ಒಪ್ಪಿಗೆಯೋ ? "

" ಬೇಕಾದ ರಾಗ ನುಡಿಸಬಹುದು. "

ಶ್ರೀನಿವಾಸಮೂರ್ತಿ ಮೊದಲನೆಯ ಕಾಲದಲ್ಲಿ ರಾಗ ನುಡಿಸಿ ಕೈಬಿಟ್ಟ. ಜನತೆ ಹರ್ಷೋದ್ಗಾರ ವ್ಯಕ್ತಪಡಿಸಿತು.

" ಇವನು ಕೇವಲ ನಿಷ್ಪ್ರಯೋಜಕನಲ್ಲ. "

ಎಂದುಕೊಂಡೇ ಅಯ್ಯರು ವೀಣೆ ಕೈಗೆತ್ತಿಕೊಂಡರು. ವಾದಿ, ಪ್ರತಿವಾದಿಗಳಂತೆ ಇಬ್ಬರೂ ತ್ರಿಕಾಲ ರಾಗ ನುಡಿಸಿದರು. ಇಬ್ಬರೂ ಸೋಲುವ ಹಾಗಿರಲಿಲ್ಲ.

ಶ್ರೀನಿವಾಸಮೂರ್ತಿ ಕೀರ್ತನೆ ಎತ್ತಿಕೊಂಡುದಷ್ಟೇ ಅವನಿಗೆ ನೆನಪು – ಸಭಾಸದರಿಗೂ ಹಾಗೆಯೇ ಆಗಿತ್ತು. ಅವನ ಕೀರ್ತನೆ ಮುಗಿಯುವ ವೇಳೆಗೆ ರಾತ್ರಿ ಹನ್ನೊಂದು ಗಂಟೆಯಾಗಿತ್ತು.

ಅಯ್ಯರು ಪಲ್ಲವಿ ನುಡಿಸಿದರು - ಅನುಪಲ್ಲವಿ ನುಡಿಸಿದರು. ಚರಣಕ್ಕೆ ಬರುವ ವೇಳೆಗೆ ಅವರ ಮುಖದ ಮೇಲೆ ಬೆವರು ಹನಿಗಳು ಕಾಣಿಸಿಕೊಂಡವು. ಮಧ್ಯೆ ಶಿಷ್ಯರಿಗೆ ಒಂದು ಆವರ್ಣ ಬಿಟ್ಟು ಬೆವರೊರಸಿಕೊಂಡು ಒಂದು ಚಿಟಿಕೆ ನಶ್ಯವೇರಿಸಿದರು.

ಎರಡನೆಯ ಚರಣ ಎತ್ತಿಕೊಂಡು ಸ್ವರ ಪ್ರಸ್ತಾರಕ್ಕೆ ಬರುವ ವೇಳೆಗೆ ಅಯ್ಯರವರಿಗೆ ಅಸ್ಥಾವಸ್ಥೆಯಾಗಿ ಹೋಯಿತು. ಕೈ ಓಡುವುದು ನಿಂತು ಹೋಯಿತು. ಶ್ರೀನಿವಾಸಮೂರ್ತಿಗೆ ಮೇಲ್ಗೈಯಾಗಿ ನುಡಿಸುವ ಮಾತಂತಿರಲಿ - ತಕ್ಕಮಟ್ಟಿಗೆ ನುಡಿಸಿ ಗೌರವ ಉಳಿಸಿಕೊಳ್ಳುವುದೂ ಕಷ್ಟವಾಯಿತು. ಮೇಲಿಂದ ಮೇಲೆ ತಾಳ ಮುಗ್ಗರಿಸತೊಡಗಿತು.

ಹತ್ತು ನಿಮಿಷ ಒಂದೇ ಸಮನೆ ಅಯ್ಯರವರು ವೀಣೆಯೊಂದಿಗೆ ಸೆಣಸಾಡಿ ನಿರಾಶೆಗೊಂಡು ವೀಣೆ ಕೆಳಗಿಳಿಸಿ ಬಿಟ್ಟರು.

ಸಭೆಯಲ್ಲಿ ಎಳ್ಳು ಹಾಕಿದರೆ ಸಿಡಿಯುವಂಥ ನಿಶ್ಶಬ್ದ.

ಅಯ್ಯರ ಕಣ್ಣಲ್ಲಿ ಧಾರಾಕಾರವಾಗಿ ನೀರು ಸುರಿಯಲಾರಂಭಿಸಿತು. ಕೈ ಜೋಡಿಸಿಕೊಂಡು

" ತಪ್ಪಾಯಿತು. ಕ್ಷಮಿಸಬೇಕು. ಮೈಸೂರಿನಲ್ಲಿ ಇಂಥ ವಿದ್ವಾಂಸರಿದ್ದಾರೆ ಎನ್ನುವುದು ನನಗೆ ಗೊತ್ತಿರಲಿಲ್ಲ. " ಎಂದರು.

ಶ್ರೀನಿವಾಸಮೂರ್ತಿ ನಸುನಗುತ್ತಾ

" ನನ್ನದೇನು ಘನವಿದ್ಯೆ – ಅಲ್ಲಿ ನೋಡಿ ನನ್ನ ಗುರುಗಳು. ಅವರ ವಿದ್ಯೆ ಘನವಿದ್ಯೆ " ಎಂದ.

ವೆಂಕಟಕೃಷ್ಣಯ್ಯನವರು ಅಯ್ಯರವರಿಗೆ ಸಮಾಧಾನ ಹೇಳಿದರು. ಸೋದರಳಿಯನ ಔದ್ಧತ್ಯಕ್ಕೆ ಅಸಮಾಧಾನವಾಗಿದ್ದರೂ ಅವನ ಧೈರ್ಯವನ್ನು ಮೆಚ್ಚಿಕೊಂಡಿದ್ದರು.

ವೆಂಕಟಕೃಷ್ಣಯ್ಯನವರ ಪರಂಪರೆಯನ್ನೇ ಅವರ ಮಕ್ಕಳು ಶ್ರೀಕಂಠಯ್ಯನವರು ಅನುಸರಿಸಿದರು. ವಂಶಪಾರಂಪರ್ಯವಾಗಿ ಬಂದ ವೀಣಾವಿದ್ಯೆ ರಾಮನಾಥಯ್ಯನಿಗೂ ತಂದೆಯಿಂದ ಲಭಿಸಿತ್ತು.

ರುದ್ರಪಟ್ಟಣದ ಸಂಪ್ರದಾಯವನ್ನು ಮೊದಲು ಮುರಿದವನು ಶ್ರೀನಿವಾಸಮೂರ್ತಿ. ಅಯ್ಯರವರ ಪ್ರಕರಣವಾದ ಎರಡು ವರ್ಷದ ಮೇಲೆ ವೆಂಕಟ

ಕೃಷ್ಣಯ್ಯನವರು ಸ್ವರ್ಗಸ್ಥರಾಗಲು ಶ್ರೀನಿವಾಸಮೂರ್ತಿ ಮೈಸೂರು ಸೇರಿದ. ಅವನ ಮೇಧಾಶಕ್ತಿಗೆ ಬೆರಗಾಗಿ ವೀಣೆ ಶೇಷಣ್ಣನವರು ಆಶ್ರಯವಿತ್ತರು. ಅರಮನೆಯ ' ಆಸ್ಥಾನ ವಿದ್ವಾನ್ ' ಪದವಿಯೂ ಕ್ಷಿಪ್ರದಲ್ಲಿಯೇ ಲಭಿಸಿ ಶ್ರೀನಿವಾಸಮೂರ್ತಿ ಪ್ರಸಿದ್ಧಿಗೆ ಬಂದ.

ರಾಮನಾಥಯ್ಯ ಸಂಗೀತವನ್ನಾಶ್ರಯಿಸಲಿಲ್ಲ. ಅವನೂ ಮೈಸೂರು ಸೇರಿ ಹೈಸ್ಕೂಲು, ಕಾಲೇಜು ಶಿಕ್ಷಣ ಅವಲಂಬಿಸಿದ. ಡಿಗ್ರಿ ಸಿಕ್ಕದ ಕೂಡಲೆ ಹೈಸ್ಕೂಲೊಂದರಲ್ಲಿ ಕೆಲಸವೂ ಸಿಕ್ಕಿತು. ನಾಲ್ಕು ವರ್ಷ ಸರ್ವಿಸ್ ಆದಮೇಲೆ ಇನ್ಸ್‌ಪೆಕ್ಟರ್ ಪದವಿಯೂ ದೊರೆಯಿತು.

ರಾಮನಾಥಯ್ಯ ವೀಣೆಗೇನೋ ತಿಲತರ್ಪಣವನ್ನರ್ಪಿಸಿಬಿಟ್ಟಿದ್ದ. ಆದರೆ ರಕ್ತಗತವಾಗಿದ್ದ ಕಲಾಭಿಮಾನ ಅವನಲ್ಲಿ ಜಾಗೃತವಾಗಿತ್ತು. ಇನ್ಸ್‌ಪೆಕ್ಷನ್ ನೆಪ ಹೂಡಿಕೊಂಡು, ಹಳ್ಳಿಯ ಮೇಷ್ಟ್ರುಗಳನ್ನು ಕಿತ್ತುಕೊಂಡು ತಿನ್ನುವ ' ವ್ಯಾಘ್ರನೀತಿ ' ಗೆ ರಾಮನಾಥಯ್ಯ ಕಟು ವಿರೋಧಿಯಾಗಿದ್ದ. ಇನ್ಸ್‌ಪೆಕ್ಷನ್ ಹೋದಾಗ ಹಳ್ಳಿಗಳಲ್ಲಿ ಒಳ್ಳೆಯ ಗಮಕಿಗಳು, ಸಂಗೀತಗಾರರು, ಚಿತ್ರಕಾರರು, ಶಿಲ್ಪಿಗಳು ತೂಗಲುಗೊಂಬೆ ಆಡಿಸುವವರು, ನೆರಳಾಟ ಆಡಿಸುವವರು, ಬಯಲಾಟದವರು ಮೊದಲಾದ ಕಲಾವಿದರಿಗೆ ತನ್ನ ಶಕ್ತಿಮೀರಿ ಸಹಾಯ ಮಾಡಿ ಪ್ರೋತ್ಸಾಹ ಕೊಡುತ್ತಿದ್ದ.

ಇನ್ಸ್‌ಪೆಕ್ಟರ ರಾಮನಾಥಯ್ಯನವರ ಈ ' ಬೃಹತ್ ಸಂಸಾರ ' ಕ್ಕೆ ಶ್ರೀಕಂಠಾಚಾರಿಯೂ ಸೇರಿದ್ದ. ರಾಮನಾಥಯ್ಯ ಆಗಾಗ್ಗೆ ಗುಂಜೂರಿಗೆ ಬಂದು ಶ್ರೀಕಂಠನ ಪ್ರಗತಿಯನ್ನು ಪರಾಮರ್ಶಿಸಿ ಹೋಗುತ್ತಿದ್ದರು.

ಗುಂಜೂರು ರೇಂಜು ತಪ್ಪಿ ರಾಮನಾಥಯ್ಯನವರಿಗೆ ನಂಜನಗೂಡು ರೇಂಜಿಗೆ ವರ್ಗವಾಯಿತು. ನಂಜನಗೂಡಿಗೆ ಹೋಗಿ ಕೆಲಸಕ್ಕೆ ಹಾಜರಾದ ಕೆಲವು ತಿಂಗಳ ಮೇಲೆ ಒಮ್ಮೆ ಅವರು ಗುಂಜೂರಿಗೆ ಬಂದರು ಮಾದಯ್ಯನವರಿಗೆ ರಾಮನಾಥಯ್ಯನವರ ಬಗ್ಗೆ ತುಂಬ ಅಸಂತುಷ್ಟಿಯಾಗಿತ್ತು.

" ನನ್ನ ವರ್ಗಾವಣೆ ವಿಷಯ ತಾವು ಕಿವಿಯ ಮೇಲೇ ಹಾಕಿಕೊಳ್ಳಲಿಲ್ಲ ಸ್ವಾಮಿ. "

ಎಂದು ಮಾದಯ್ಯ ತಿಳಿಸಲು ಅನುಮಾನ ಮಾಡಲಿಲ್ಲ.

" ನಿಮ್ಮ ಸಂಬಳ ಹೆಚ್ಚು ಮಾಡಿಸಿದೆನಲ್ಲಾ. "

" ಅದರಲ್ಲಿ ಏನಾಗುತ್ತದೆ ಸ್ವಾಮಿ. ವರ್ಗ ಮಾಡಿಸಿದರೆ ತುಂಬ ಉಪಕಾರವಾಗುತ್ತದೆ. "

" ಈ ವರ್ಷ ಶ್ರೀಕಂಠ ಲೋವರ್ ಸೆಕೆಂಡರಿ ಪರೀಕ್ಷೆಗೆ ಕಟ್ಟುತ್ತಾನಲ್ಲವೇ ? "

" ಹೌದು. "

" ಕ್ಲಾಸ್‌ನಲ್ಲಿ ಹೇಗಿದ್ದಾನೆ ? "

" ಪರವಾಗಿಲ್ಲ. "

" ನಿಮ್ಮ ಇಂಗ್ಲಿಷ್ ಶಿಕ್ಷಣ ಹೇಗೆ ಸಾಗಿದೆ. "

" ಸಮರ್ಪಕವಾಗಿ ಸಾಗಿದೆ. ಲೆಕ್ಕ, ಭೂಗೋಳದಲ್ಲಿ ಶ್ರೀಕಂಠ ಸ್ವಲ್ಪ ಹಿಂದಿದ್ದರೂ ಭಾಷೆಗಳನ್ನು ರೂಢಿಸಿಕೊಳ್ಳುವುದರಲ್ಲಿ ತುಂಬ ಜಾಣ. ಶಬ್ದಗಳನ್ನು ಕೂಡಿಸಿಕೊಂಡು ತಪ್ಪುತಪ್ಪಾಗಿ ಇಂಗ್ಲಿಷ್ ಮಾತಾಡುವುದನ್ನೂ ಕಲಿತಿದ್ದಾನೆ. "

" ಅವನ ಪರೀಕ್ಷೆ ಮುಗಿದ ಕೂಡಲೆ ನಿಮಗೆ ವರ್ಗ ಮಾಡಿಸುತ್ತೇನೆ ಮಾದಯ್ಯನವರೇ - ಈ ವಿಷಯದಲ್ಲಿ ಯಾವ ಅನುಮಾನವನ್ನೂ ಇಟ್ಟುಕೊಳ್ಳಬೇಡಿ. "

" ಸ್ವಾಮೀಗೆ ವರ್ಗವಾಗಿ ಹೋಗಿದೆ. "

" ಪಂಚಾಂಗ ಹೋದರೆ ನಕ್ಷತ್ರ ಹೋಗುತ್ತದೆ. ನನ್ನ ಸ್ಥಳಕ್ಕೆ ಬಂದಿರುವ ಇನ್ಸ್‌ಪೆಕ್ಟರು ಸುಬ್ಬಾಶಾಸ್ತ್ರಿಗಳು ನನ್ನ ಸ್ನೇಹಿತರು ಅವರಿಗಾಗಲೇ ನಿಮ್ಮ ವಿಷಯ ತಿಳಿಸಿದ್ದೇನೆ. "

" ತಮ್ಮ ಉಪಕಾರ ನಾನು ಸದಾ ಸ್ಮರಿಸಿಕೊಳ್ಳುತ್ತೇನೆ ಸ್ವಾಮಿ. "

" ನಾನು ನಿಮ್ಮ ಉಪಕಾರ ಸ್ಮರಿಸಿಕೊಳ್ಳಬೇಕಾಗಿದೆ ಮಾದಯ್ಯನವರೇ. "

" ಶ್ರೀಕಂಠನ ವಿಷಯ ಏನು ನಿರ್ಧರಿಸಿದಿರಿ ? "

" ಮೈಸೂರು ಚಾಮರಾಜೇಂದ್ರ ಟೆಕ್ನಿಕಲ್ ಇನ್‌ಸ್ಟಿಟ್ಯೂಟ್ ಸೇರಿಸುವ ಏರ್ಪಾಟು ಮಾಡಿದ್ದೇನೆ. ಅವನ ವಸತಿ, ಊಟದ ವ್ಯವಸ್ಥೆ ನೋಡಿಕೊಳ್ಳುವು

ದಕ್ಕೆ ಸಾಹುಕಾರ ಯಾಲಕ್ಕಪ್ಪಾಚಾರ್ಯರು ಒಪ್ಪಿಕೊಂಡಿದ್ದಾರೆ. ಈ ಹುಡುಗ ಮುಂದಕ್ಕೆ ಬಂದರೆ ನಮ್ಮ ದೇಶಕ್ಕೆ ತುಂಬ ಗೌರವ ಬರುತ್ತದೆ ಮಾದಯ್ಯನವರೇ."

"ಎದುರಿಗೆ ಹೇಳುವ ವಿಷಯವಲ್ಲ - ತಾವು ತುಂಬ ದೊಡ್ಡವರು ಸ್ವಾಮಿ. ಇಂದು ಯಾರಿಗೂ ಬೇಡವಾಗಿರುವ ಲಲಿತ ಕಲೆಗಳ ಬಗ್ಗೆ ತಾವು ತೋರಿಸುತ್ತಿರುವ ಅಭಿಮಾನ ಅನುಕರಣೀಯವಾಗಿದೆ."

"ಏನು ಹೇಳಲಿ ಮಾದಯ್ಯನವರೇ. ನಾನೂ ಬಡವ - ನನಗೆ ಬರುವುದು ನನ್ನ ಸಂಸಾರಕ್ಕೇ ಸಾಲದು. ಶ್ರೀಮಂತರಿಗೆ, ಸರ್ಕಾರಕ್ಕೆ ಈ ವಿಷಯದಲ್ಲಿ ಆಸಕ್ತಿಯಿಲ್ಲ. ನಮ್ಮೂರು ರುದ್ರಪಟ್ಟಣದ ಮಾತೇ ಹೇಳುತ್ತೇನೆ ಕೇಳಿ – ನಮ್ಮ ತಾತಂದಿರ ಕಾಲಕ್ಕೆ ಊರಿನ ತುಂಬ ಸಂಸ್ಕೃತ ವಿದ್ವಾಂಸರು, ಸಂಗೀತ ವಿದ್ವಾಂಸರು ಇದ್ದರು. ನಮ್ಮ ತೀರ್ಥರೂಪರ ಕಾಲಕ್ಕೆ ಅರ್ಧಕ್ಕರ್ಧ ಕಡಿಮೆಯಾಯಿತು. ಮಳೆ ಬೆಳೆಗಳು ಕೆಟ್ಟ ಮೇಲೆ ಊರಿನ ಜನ ಜೀವನೋಪಾಯಕ್ಕಾಗಿ ದೊಡ್ಡ ದೊಡ್ಡ ಪಟ್ಟಣಗಳನ್ನು ಸೇರಿಕೊಂಡರು. — ಆ ವಿಷಯದಲ್ಲಿ ನಾನೂ ಅಪರಾಧಿಯೇ ಅನ್ನಿ — ಇಂದು ನಮ್ಮೂರಿನಲ್ಲಿ ಸಂಗೀತ, ಸಾಹಿತ್ಯ ಕೇಳುವವರೇ ಇಲ್ಲ."

"ಸಾಹಿತ್ಯ, ಸಂಗೀತ ಸ್ತ್ರೀಕಲೆಗಳು ಸ್ವಾಮಿ. ವನಿತೆ, ವಿತ್ತಕ್ಕೆ ಹೇಗೆ ಆಶ್ರಯ ಬೇಕೋ ಹಾಗೆ ಪಂಡಿತರಿಗೂ ಆಶ್ರಯ ಬೇಕು."

"ನಾನು ಇನ್ಸ್‌ಪೆಕ್ಷನ್‌ಗಾಗಿ ಹಳ್ಳಿಹಳ್ಳಿ ಸುತ್ತಬೇಕಲ್ಲ. ಹಾಸನ, ತುಮಕೂರು ಜಿಲ್ಲೆಗಳಲ್ಲಿಯೂ ಕೆಲಸ ಮಾಡಿದ್ದೇನೆ. ನಾನು ಒಂದು ಊರಿಗೆ ಹೋದರೆ ಅಲ್ಲಿನ ಶಿಲ್ಪ, ಸಂಗೀತ, ಜನಪದ ಕಲೆಗಳನ್ನು ಅನುಲಕ್ಷಿಸುವ ಪರಿಪಾಠ ಇಟ್ಟುಕೊಂಡಿದ್ದೇನೆ. ಮುರಿದು ಬಿದ್ದಿರುವ ದೇವಾಲಯಗಳು, ತಲೆ, ಕೈಕಾಲು ಕಳೆದುಕೊಂಡಿರುವ ದೇವತಾ ವಿಗ್ರಹಗಳು, ಕಿಲುಬು ಹಿಡಿಯುತ್ತಿರುವ ಕಂಚಿನ ವಿಗ್ರಹಗಳು, ಒಡೆದು ಹೋಗುತ್ತಿರುವ ಗಂಟೆಗಳನ್ನು ನೋಡಿದಾಗ ನನ್ನ ಕಣ್ಣಲ್ಲಿ ನೀರೂರುತ್ತದೆ. ಪ್ರಾಚೀನ ಸಂಪ್ರದಾಯದಲ್ಲಿ ಆಗಮೋಕ್ತವಾದ ದೇವಾಲಯ ಕಟ್ಟುವ ಮಾತಂತಿರಲಿ – ಇಂದು ಆ ದೇವಸ್ಥಾನಗಳ ಮಾದರಿಯಲ್ಲಿ ಒಂದು ಬೋದಿಗೆ ಮಾಡಲು ಕೂಡ ಅಸಮರ್ಥರಾಗಿದ್ದೇವೆ. ಕಲ್ಲನ್ನು

ಮೇಣದಂತೆ ಉಪಯೋಗಿಸಿರುವ ನಮ್ಮ ಪ್ರಾಚೀನ ಶಿಲ್ಪಿಗಳ ಚಾತುರ್ಯಕ್ಕೆ ಸಾಟಿಯೆಲ್ಲಿದೆ? ಅವರಂತೆ ನಾವು ಭವ್ಯ ದಿವ್ಯವಾದ ಕಲಾಸೌಧಗಳನ್ನು ಕಟ್ಟದಿದ್ದರೆ ಚಿಂತೆಯಿಲ್ಲ–ಅವರು ಕಟ್ಟಿಕೊಟ್ಟಿರುವುದನ್ನು ಉಳಿಸಿಕೊಳ್ಳುವ ಯೋಗ್ಯತೆಯೂ ನಮಗಿಲ್ಲದಾಯಿತಲ್ಲ. ಸ್ಥಪತಿ ಮನೆತನಗಳು ನಾಶವಾಗಿ ಹೋದವು. ಅಲ್ಲಲ್ಲಿ ಉಳಿದಿರುವ ಒಬ್ಬಿಬ್ಬರು ಶಿಲ್ಪಿಗಳನ್ನಾದರೂ ನಾವು ಕಾಪಾಡಿಕೊಳ್ಳದಿದ್ದರೆ ನಮ್ಮ ಶಿಲ್ಪದ ಗತಿಯೇನು? — ಇದೇ ಹಗಲೂ ರಾತ್ರಿ ನನ್ನನ್ನು ಬಾಧಿಸುತ್ತಿರುವ ಪ್ರಶ್ನೆ."

"ತಮ್ಮ ಶಕ್ತಿಮೀರಿ ಈ ಬಗ್ಗೆ ಪ್ರಯತ್ನ ನಡಸುತ್ತಿರುವಿರಲ್ಲಾ!"

"ಸಾಲದು ಮಾದಯ್ಯನವರೇ. ನನ್ನ ಅಲ್ಪ ಪ್ರಯತ್ನದಿಂದ ಏನಾಗುತ್ತದೆ? — ಈಚೆಗೆ ನಾಗಲಿಂಗಾಚಾರ‍್ರನ್ನು ನೋಡಿದ್ದಿರಾ?"

"ನಾಲ್ಕೈದು ತಿಂಗಳ ಹಿಂದೆ ಆಕಸ್ಮಾತ್ತಾಗಿ ನೋಡಿದ್ದೆ."

"ಶ್ರೀಕಂಠನ ಮಾತು ಬಂದಿತೇ?"

"ಅವನ ವಿಷಯವೇ ಮಾತನಾಡಿದೆವು. ತಮ್ಮ ಆಕಾಂಕ್ಷೆಯನ್ನು ವ್ಯಕ್ತಪಡಿಸಿದೆ. ಮಗನಿಗೆ ಪಾಠ ಹೇಳುತ್ತಿರುವುದಾಗಿ ತಿಳಿಸಿದ. ಶ್ರೀಕಂಠನೂ ಆ ವಿಷಯ ಸಮರ್ಥನೆ ಮಾಡಿದ. — ಇನ್ನೊಂದು ಸಂತೋಷದ ವಿಷಯ ಸ್ವಾಮಿ."

"ಏನದು?"

"ನಾಗಲಿಂಗಾಚಾರಿ ಮಗನಿಗೆ ಲೋಹ ಮೂರ್ತಿಗಳ ತಂತ್ರ ಪರಿಚಯ ಮಾಡಿಕೊಡುತ್ತಿದ್ದಾನೆ. ಕೆತ್ತನೆ ವಿಗ್ರಹಗಳು, ಎರಕದ ವಿಗ್ರಹಗಳನ್ನು ಅವನ ಕೈಯಲ್ಲಿ ಮಾಡಿಸುತ್ತಿದ್ದಾನೆ."

"ಶ್ರೀಕಂಠ ಈಗಾಗಲೇ ಯಾವದಾದರೂ ವಿಗ್ರಹ ಮಾಡಿದ್ದಾನೆಯೇ?"

"ಮಾಡಿದ್ದಾನೆ — ತನ್ನ ಅಪ್ಪಣೆ ದೊರೆಯುವವರೆಗೂ ಯಾರಿಗೂ ತೋರಿಸಕೂಡದೆಂದು ನಾಗಲಿಂಗಾಚಾರಿಯ ಆಜ್ಞೆಯಾಗಿದೆಯಂತೆ!"

"ಹಾಗೇ ಮಾಡಲಪ್ಪ. ಮಾರಾಯ ಮಗನಿಗೆ ಪಾಠ ಹೇಳಿಕೊಡಲೊಪ್ಪಿಕೊಂಡಿರುವುದೇ ದೊಡ್ಡ ವಿಷಯ. ಅವನೆಲ್ಲಿಯಾದರೂ ಮುನಿಸಿಕೊಂಡು ಅರ್ಧದಲ್ಲಿಯೇ ಕೈಬಿಟ್ಟಾನು."

ರಾಮನಾಥಯ್ಯನವರ ಮನಸ್ಸಿಗೆ ತುಂಬ ನೆಮ್ಮದಿಯಾಯಿತು. ಇಟ್ಟ ಹಾಲು ಸಾರ್ಥಕವಾಯಿತೆಂಬ ಹೆಮ್ಮೆ ಅವರ ಹೃದಯವನ್ನು ಹಿರಿಹಿಗ್ಗಿಸಿತು

ಅದೇ ಗುಂಜೂರು ಬಿಡುವ ಮುನ್ನ ಶ್ರೀಕಂಠನನ್ನು ಕಂಡು ಅದೇ ವರ್ಷ ಅವನನ್ನು ಮೈಸೂರಿಗೆ ಕಳಿಸುವ ವಿಷಯ ತಿಳಿಸಿ, ರಾಮನಾಥಯ್ಯ ನಂಜನಗೂಡಿಗೆ ಪ್ರಯಾಣ ಬೆಳಸಿದರು.

## ೨

ರಾಮನಾಥಯ್ಯನವರು ಬಂದು ಹೋದ ಮಾರನೆಯ ದಿನವೇ ತಾನು ಮೈಸೂರಿಗೆ ಹೋಗುವ ವಿಷಯವನ್ನು ಸೂಕ್ಷ್ಮವಾಗಿ ಶ್ರೀಕಂಠ ಸ್ವರ್ಣಸಿಗೆ ತಿಳಿಸಿದ.

ಸ್ವರ್ಣನ ಮುಖ ಆರಕ್ತವಾಯಿತು.
ಅವಳ ಕಣ್ಣುಗಳಿಂದ ಹನಿಗಳುದುರಿದವು.
ಶ್ರೀಕಂಠನ ಮನಸ್ಸೂ ವ್ಯಾಕುಲಗೊಂಡಿತ್ತು.
ಮಾತಿಗೆ ನಿಲುಕದ ಮೂಕವೇದನೆ ಇಬ್ಬರನ್ನೂ ಬಾಧಿಸುತ್ತಿತ್ತು.
ಶ್ರೀಕಂಠ ಧೈರ್ಯ ತಂದುಕೊಂಡು
" ಏಕಳುತ್ತಿರುವೆ ಸ್ವರ್ಣ " ಎಂದು ಕೇಳಿದ.
ದುಃಖದ ಕಟ್ಟೆಯೊಡೆದು ನೆರೆ ಬಂದಂತಾಯಿತು.

ಸ್ವರ್ಣನ ದುಃಖ ಸ್ವಲ್ಪ ತಹಬಂದಿಗೆ ಬರುವವರೆಗೆ ಕಾಯುವುದೇ ಒಳ್ಳೆಯದೆಂದು ಶ್ರೀಕಂಠ ತೆಪ್ಪಗಾದ.

ಸ್ವರ್ಣ ದುಃಖ ನುಂಗಿಕೊಳ್ಳುತ್ತಾ
" ಮೈಸೂರಿಗೆ ಯಾವಾಗ ಹೊರಡುವೆ ? " ಎಂದು ಕೇಳಿದಳು.

" ಬೇಸಿಗೆಯ ರಜ ಮುಗಿಯಬೇಕು. ಸ್ಕೂಲು ಬಾಗಿಲು ತೆಗೆಯುವ ಹೊತ್ತಿಗೆ ಹೋಗಬೇಕಾಗುತ್ತದೆ. "

" ನನ್ನನ್ನು ಮರೆತುಬಿಡುತ್ತೀಯೋ ಏನೋ ? "

" ಏಕೆ ಮರೆಯಬೇಕು ? "

" ಮೈಸೂರು ದೊಡ್ಡ ಊರು.... "

" ದೊಡ್ಡ ಊರಾದರೆ.... ? "

" ನೀನು ದೊಡ್ಡ ಶಿಲ್ಪಿಯಾಗುವೆ. "

" ನಾನು ದೊಡ್ಡ ಶಿಲ್ಪಿಯಾಗುವುದು ನಿನಗಿಷ್ಟವಿಲ್ಲವೇ ? "

" ನಿನ್ನನ್ನು ದೊಡ್ಡ ಶಿಲ್ಪಿ ಮಾಡಬೇಕೆಂದು ನಾನು ನಿತ್ಯವೂ ದೇವರಲ್ಲಿ ಪ್ರಾರ್ಥಿಸುತ್ತಿದ್ದೇನೆ. "

" ಪ್ರಾರ್ಥನೆ ನೆರವೇರುವ ಸಮಯ ಬಂದಿರುವಾಗ ನೀನು ದುಃಖಿಸುವುದೇ ? "

" ಈಗ ನೀನು ಮೈಸೂರಿಗೆ ಹೋದರೆ ಪುನಃ ಬರುವುದು ಯಾವಾಗ -"

" ನವರಾತ್ರಿ ರಜಕ್ಕೆ ಬರಬಹುದು. "

ಸ್ವರ್ಣ ಕ್ಷಣಕಾಲ ಮೌನ ತಾಳಿ

" ನನ್ನ ಗತಿಯೇನು ? "

" ನಿನಗೇನಾಗಿದೆ ಸ್ವರ್ಣ ? ನಿನ್ನ ಮನಸ್ಸಿನಲ್ಲಿ ಏನಿದೆ ಹೇಳು ? "

" ಮನೆಯಲ್ಲಿ ಮಾತು ಕತೆ ನಡೆಯುತ್ತಿದೆ. "

" ಯಾವ ವಿಷಯ ? "

" ನನ್ನ ಮದುವೆಯ ವಿಷಯ. ನನ್ನ ನೋಡಿಕೊಂಡು ಹೋಗುವುದಕ್ಕೆ ಮೈಸೂರಿನಿಂದ ಯಾರೋ ಬರುತ್ತಾರಂತೆ ! "

ಶ್ರೀಕಂಠನ ಬಾಯಲ್ಲಿ ಮಾತು ಹೊರಡಲಿಲ್ಲ. ಸ್ವರ್ಣ ಹೇಳಿದ ಸುದ್ದಿ ಅವನಿಗೆ ಮರ್ಮಘಾತವಾಗಿದ್ದಿತು. ಆ ಸುದ್ದಿಯನ್ನು ಸ್ವರ್ಣ ಹೇಳಿದ ರೀತಿ ಶ್ರೀಕಂಠನಿಗೆ ಹೊಸ ಲೋಕವೊಂದರ ಪರಿಚಯ ಮಾಡಿಕೊಟ್ಟಿತು.

' ಸ್ವರ್ಣನಿಗೆ ಮದುವೆಯೇ ! "

' ಅವಳಿಗೆ ಮದುವೆಯಾಗುವ ಇಚ್ಛೆಯಿಲ್ಲ. '

' ಸ್ವರ್ಣ ನನ್ನನ್ನು ಪ್ರೀತಿಸುತ್ತಾಳೆಯೇ ? '

' ನನ್ನನ್ನು ಮದುವೆಯಾಗಬೇಕೆಂದು ಅವಳು ಇಚ್ಛಿಸುತ್ತಿದ್ದಳೇ ? '

ಈ ಸಂದರ್ಭದಲ್ಲಿ ಏನು ಮಾತನಾಡಬೇಕೆಂಬುದು ಶ್ರೀಕಂಠನಿಗೆ ದೊಡ್ಡ ಸಮಸ್ಯೆಯಾಯಿತು.

" ನಿನಗೆ ಮದುವೆಯಾಗಲು ಇಚ್ಛೆಯಿಲ್ಲವೇ ? "

" ಅದು ನಿನಗೇ ಗೊತ್ತು. "

" ಈಗಲೇ ಮದುವೆಯಾಗಲು ಇಚ್ಛೆಯಿಲ್ಲವೆಂದು ಮನೆಯಲ್ಲಿ ತಿಳಿಸು. "

" ತಿಳಿಸಿದೆ – ನನ್ನ ಮಾತು ಯಾರು ಕೇಳುತ್ತಾರೆ – ಎಲ್ಲರೂ ಹೀಗೇ ಹೇಳುತ್ತಾರೆ. ಮದುವೆಯಾಗಿ ಗಂಡನ ಮನೆಗೆ ಹೋದರೆ ತೌರುಮನೆಯನ್ನೇ ಮರೆತು ಬಿಡುತ್ತಾರೆ ಎಂದು ಅಮ್ಮ ಹಾಸ್ಯ ಮಾಡಿದಳು. ನಾನೇನು ಮಾಡಲಿ ಹೇಳು. "

" ನನಗೆ ದಿಕ್ಕೇ ತೋರದಂತಾಗಿದೆ. ನೀನೇ ಹೇಳು ಏನು ಮಾಡಬೇಕೆಂಬುದನ್ನು. "

" ನಾನೂ ನಿನ್ನ ಜತೆ ಬಂದು ಬಿಡುತ್ತೇನೆ. "

" ನಾನು ಮನೆ ಮಠವಿಲ್ಲದ ಭಿಕಾರಿ. "

" ಚಿಂತೆಯಿಲ್ಲ. "

" ನಾನೇ ಮೈಸೂರಿನಲ್ಲಿ ಇನ್ನೊಬ್ಬರ ಆಶ್ರಯದಲ್ಲಿರಬೇಕಾಗುತ್ತದೆ. "

" ಅವರೇ ನನಗೂ ಆಶ್ರಯ ಕೊಡುತ್ತಾರೆ. "

" ನಮ್ಮ ಕಥೆ ಕೇಳಿದ ಮೇಲೆ ಯಾರೂ ಆಶ್ರಯ ಕೊಡುವುದಿಲ್ಲ. "

" ನೀನು ಮೂರ್ತಿಗಳನ್ನು ಮಾಡಿ ಸಂಪಾದಿಸುವೆಯಲ್ಲ ! "

" ಇಷ್ಟು ಬೇಗ ಸಂಪಾದನೆ ಹೇಗೆ ಸಾಧ್ಯ. ನಾನಿನ್ನೂ ಬಹಳ ಕಲಿಯಬೇಕಾಗಿದೆ. "

" ಹೋಗಲಿ ಬಿಡು — ನಾನು ನಿನಗೆ ಬೇಕಿಲ್ಲ.

" ಆ ಮಾತು ಹೇಳಬೇಡ ಸ್ವರ್ಣ. ಇಲ್ಲೇ ನಾನು ಅರೆಹೊಟ್ಟೆ ಊಟ ಮಾಡಿಕೊಂಡು ಕಾಲ ತಳ್ಳುತ್ತಿರುವುದು ನಿನಗೆ ಗೊತ್ತಿದೆ. ಮೈಸೂರಿನಲ್ಲಿ ನನ್ನ ಹಣೆಯಬರಹವೇನಾಗುತ್ತದೋ ಬಲ್ಲವರು ಯಾರು ? ಮನೆಯಲ್ಲಿ ಸುಖವಾಗಿರುವ ನಿನ್ನನ್ನು ಜತೆಯಲ್ಲಿ ಕರೆದುಕೊಂಡು ಹೋಗಿ ಇಲ್ಲದ ಸಲ್ಲದ ಕಷ್ಟಗಳಿಗೆ ಸಿಕ್ಕಿಸಲೇ ? "

" ನಿನ್ನ ಜತೆಯಲ್ಲಿರುವುದೇ ನನಗೆ ಸುಖ. "

" ನಾನೂ ನಿನ್ನ ಬಿಟ್ಟಿರಲಾರೆ ಸ್ವರ್ಣ. ನಿನ್ನ ಮುಖ ನೋಡಿದರೆ ಸಾಕು - ನನ್ನ ಕಷ್ಟಗಳೆಲ್ಲಾ ಮರೆತು ಹೋಗುತ್ತವೆ. ನಿನ್ನ ಕಾಣದಿದ್ದ ದಿನವೇ ನನಗೆ ಕೆಟ್ಟ ದಿನ. ನೀನು ಹುರಿದುಂಬಿಸದಿದ್ದರೆ ನನ್ನ ಶಿಲ್ಪ ಶಿಕ್ಷಣ ಇಷ್ಟು ಮುಂದುವರಿಯುತ್ತಿರಲಿಲ್ಲ. ಈಗಿನ ನನ್ನ ಸ್ಥಿತಿಯನ್ನು ಅರ್ಥ ಮಾಡಿಕೋ. ದುಡುಕಿದರೆ ಇಬ್ಬರೂ ತುಂಬ ಕಷ್ಟವನ್ನನುಭವಿಸಬೇಕಾಗುತ್ತದೆ. "

ಸ್ವರ್ಣ ಬಿಕ್ಕಿ ಬಿಕ್ಕಿ ಅತ್ತಳು. ಶ್ರೀಕಂಠ ಮೃದುವಾಗಿ ಅವಳ ತಲೆ ನೇವರಿಸಿದ. ಸ್ವರ್ಣ ಅವನ ಕೈಹಿಡಿದು ಕಣ್ಣಿಗೊತ್ತಿಕೊಂಡಳು. ಅವನ ಕೈ ಅವಳ ಕಂಬನಿಯಿಂದ ತೊಯ್ದು ಹೋಯಿತು.

" ನನ್ನ ಕೈ ಬಿಡಬೇಡ ಶ್ರೀಕಂಠ. "

" ಇಲ್ಲ - ಎಂದಿಗೂ ಬಿಡುವುದಿಲ್ಲ. "

" ನನ್ನ ಮರೆಯಬೇಡ. "

" ಇಲ್ಲ — ಮರೆಯುವುದಿಲ್ಲ. ಮರೆಯಲಾರೆ. "

" ನಿನ್ನನ್ನಲ್ಲದೆ ನಾನೂ ಬೇರೆ ಯಾರನ್ನೂ ಮದುವೆಯಾಗುವುದಿಲ್ಲ ಶ್ರೀಕಂಠ. "

" ನಿನ್ನನ್ನಲ್ಲದೆ ನಾನೂ ಬೇರೆ ಯಾರನ್ನೂ ಮದುವೆಯಾಗುವದಿಲ್ಲ ಸ್ವರ್ಣ. "

ಅನಿರೀಕ್ಷಿತವಾಗಿ ತನ್ನ ಬಾಯಿಂದ ಹೊರಬಿದ್ದ ಮಾತುಗಳನ್ನು ಕೇಳಿ ಶ್ರೀಕಂಠ ಚಕಿತನಾದ.

ಬೇಸಿಗೆಯ ರಜ ಬಂದಿತು. ಮಾದಯ್ಯನವರು ಗಂಟು ಮೂಟೆ ಕಟ್ಟಲಾರಂಭಿಸಿದ್ದರು. ನಿಂತ ಘಳಿಗೆಯಲ್ಲಿ ಅವರು ಗುಂಜೂರು ಬಿಡುವಂತಿರಲಿಲ್ಲ. ಗುಂಜೂರಿಗೆ ಬಂದುದರಿಂದ ಮಾದಯ್ಯನವರಿಗೆ ನಷ್ಟವೇನೂ ಆಗಿರಲಿಲ್ಲ. ಎಂಟು ಎಕರೆ ಹೊಲ ಅಗ್ಗದ ಬೆಲೆಗೆ ಕೊಂಡಿದ್ದರು, ಎರಡು ಸಾವಿರ ರೂಪಾಯಿಗಳನ್ನು ಬಡ್ಡಿಗೆ ಕೊಟ್ಟುಕೊಂಡಿದ್ದರು. ಹೊಲವನ್ನು ಗುತ್ತಿಗೆಗೆ ಕೊಡ

ಬೇಕಾದ ಕೆಲಸ, ಹಣದ ಬಡ್ಡಿಯ ವ್ಯವಸ್ಥೆ ಮಾಡಿಕೊಂಡೇ ಅವರು ಪ್ರಯಾಣ ಬೆಳಸಲು ಸಾಧ್ಯವಾಗಿತ್ತು.

ರಜಾ ಮುಗಿಯುತ್ತ ಬಂದಿರಲು ರಾಮನಾಥಯ್ಯ ಮಾದಯ್ಯನವರಿಗೆ ಕಾಗದ ಬರೆದು ಶ್ರೀಕಂಠನನ್ನು ಜತೆಯಲ್ಲಿ ಕರೆದುಕೊಂಡು ಯಾಲಕ್ಕಪ್ಪಾಚಾರ್ಯರ ಛತ್ರಕ್ಕೆ ಬರಬೇಕೆಂತಲೂ, ಅಲ್ಲಿ ತಾವು ಕಾದಿರುವುದಾಗಿಯೂ ತಿಳಿಸಿದ್ದರು.

ಪ್ರಯಾಣ ಮಾಡುವ ದಿನವೂ ನಿಷ್ಕರ್ಷೆಯಾಯಿತು. ಕೊನೆಯ ಬಾರಿಗೆ ಶ್ರೀಕಂಠ ಸ್ವರ್ಣಳನ್ನು ಕಂಡು ಅವಳ ಅಪ್ಪಣೆ ಪಡೆದ.

“ ಕಾಗದ ಬರೆಯುತ್ತಿರುವೆಯಲ್ಲವೇ ? ”

“ ಖಂಡಿತ ಬರೆಯುತ್ತೇನೆ. ”

“ ಮದುವೆಗೆ ಬಲವಂತ ಮಾಡಿದರೆ ಬರೆದು ತಿಳಿಸುತ್ತೇನೆ. ನೀನು ಬಂದು ನನ್ನ ಕರೆದುಕೊಂಡು ಹೋಗಬೇಕು. ”

“ ಹಾಗೇ ಆಗಲಿ ”

“ ನೀನು ಬರದಿದ್ದರೆ.... ”

“ ಖಂಡಿತ ಬರುತ್ತೇನೆ. ”

“ ನೀನು ಬರದಿದ್ದರೆ ನಾನು ಕಲ್ಯಾಣಿಯಲ್ಲಿ ಮುಳುಗಿಕೊಳ್ಳುತ್ತೇನೆ. ”

“ ಕೆಟ್ಟ ಮಾತಾಡಬಾರದು. ”

ಎಂದು ಸಮಾಧಾನಪಡಿಸಿದ.

ಮಗ ಊರಿಗೆ ಹೊರಡುವ ದಿನ ನಾಗಲಿಂಗಾಚಾರಿ ಮನೆಯಲ್ಲಿರುವ ಕೃಪೆ ಮಾಡಿದ. ಅವನ ಗಂಭೀರ ಮುಖ ಯಾವ ಉದ್ವೇಗವನ್ನೂ ಪ್ರಕಟಗೊಳಿಸಲಿಲ್ಲ. ತಾನು ಹೊರಟು ಹೋಗುವುದು ಕೂಡ ತಂದೆಯ ಮೇಲೆ ಯಾವ ಪರಿಣಾಮವನ್ನೂ ಮಾಡಲಿಲ್ಲವೆಂದು ಶ್ರೀಕಂಠ ವ್ಯಗ್ರನಾದ.

ನಾಗಲಿಂಗಾಚಾರಿ ತನ್ನ ಶಿಲ್ಪಗ್ರಂಥ, ಉಳಿಗಳು, ಅಪೂರ್ಣವಾಗಿದ್ದ ಮೂರ್ತಿಗಳನ್ನು ಮಗನ ಕೈಯಲ್ಲಿತ್ತು,

“ ಇದೇ ನಾನು ನಿನಗೆ ಕೊಡುವ ಆಸ್ತಿ. ಈ ಗ್ರಂಥ ಅನೇಕ ತಲೆಮಾರಿನಿಂದ ನಮ್ಮ ಮನೆಯಲ್ಲಿರುತ್ತದೆ. ಇದನ್ನು ಪ್ರಾಣಕ್ಕಿಂತಲೂ ಹೆಚ್ಚಾಗಿ

ಕಾಪಾಡಿಕೋ. ”

ಶ್ರೀಕಂಠ ತಂದೆಗೆ ನಮಸ್ಕರಿಸಿದ. ನಾಗಲಿಂಗಾಚಾರಿ ಮಗನ ತಲೆ ನೇವರಿಸಿದ. ಅವನ ಧ್ವನಿ ಗದ್ಗದಿತವಾಗಿತ್ತು.

ಕೀರ್ತಿಶಾಲಿಯಾಗಿ ಮನೆತನದ ಗೌರವ ಉಳಿಸು. ತಾಯಿ ಅನ್ನ ಪೂರ್ಣೇಶ್ವರಿಯಲ್ಲಿ ದೃಢವಾದ ಭಕ್ತಿ ವಿಶ್ವಾಸಗಳನ್ನಿಟ್ಟುಕೊಂಡಿರು. ಧರ್ಮ ವನ್ನು ನಾವು ಗೌರವಿಸುವ ವರೆಗೆ ಅದು ನಮ್ಮನ್ನು ರಕ್ಷಿಸುತ್ತದೆ. ಎಂದು ನಾವು ಧರ್ಮದ ಕೈ ಬಿಡುತ್ತೇವೋ ಅದು ಅಂದೇ ನಮ್ಮ ಕೈ ಬಿಡುತ್ತದೆ. ” ಎಂದ.

ಶ್ರೀಕಂಠ ಕಂಬನಿ ಸುರಿಸುತ್ತ ಮಾದಯ್ಯನವರನ್ನು ಹಿಂಬಾಲಿಸಿದ.

೧

ಮೈಸೂರಿನಲ್ಲಿ ಪುರಾತನ ಪ್ರಸಿದ್ಧವಾದ ಮನೆತನಗಳಲ್ಲಿ ಯಾಲಕ್ಕಪ್ಪಾಚಾರ್ಯರದೂ ಒಂದಾಗಿತ್ತು. ವಂಶಪಾರಂಪರ್ಯವಾಗಿ ಬಂದ ಶಿಲ್ಪಕಲೆ, ವಾಸ್ತುಶಿಲ್ಪಕಲೆಯನ್ನು ಆಚಾರ್ಯರೂ ಅವರ ಸೋದರರೂ ಭಕ್ತಿ, ವಿಶ್ವಾಸದಿಂದ ಬೆಳಸಿಕೊಂಡು ಬಂದಿದ್ದರು. ಅನೇಕ ವರ್ಷಗಳಿಂದ ಅರಮನೆ, ಸರ್ಕಾರದ ಕಂಟ್ರ್ಯಾಕ್ಟು ಮಾಡುತ್ತಿದ್ದ ಆಚಾರ್ಯ ಸೋದರರು ಧನಾಢ್ಯರಾಗಿ ಊರಿನಲ್ಲಿ ಗಣ್ಯರಾಗಿದ್ದರು.

ಆಚಾರ್ಯರ ಗಣ್ಯತೆಗೆ ಅವರ ಧನಾಢ್ಯತೆಗಿಂತಲೂ ಹೆಚ್ಚಾಗಿ ಅವರ ಶೀಲ ಸೌಜನ್ಯ, ಔದಾರ್ಯ, ಕಲಾಪ್ರೇಮಗಳು ಕಾರಣವಾಗಿದ್ದವು. ಆಚಾರ್ಯರಲ್ಲಿ ದೇಹಿ ಎಂದು ಬಂದವರು ಯಾರೂ ಬರಿಗೈಯಲ್ಲಿ ಹಿಂತಿರುಗಿರಲಿಲ್ಲ. ಊರಿನ ಯಾವದೇ ಸಂಸ್ಥೆ, ಯಾವದೇ ಧರ್ಮಕಾರ್ಯ, ಕಲಾ, ಶಿಕ್ಷಣ ಸಮ್ಮೇಲನಕ್ಕೆ ಧನ ಸಹಾಯ ಬೇಕಾದರೂ ಆಚಾರ್ಯರ ಸಹಕಾರ ಸಿದ್ಧವಾಗಿರುತ್ತಿತ್ತು.

ಕಲಾವಿದರ ಬಗ್ಗೆ ಆಚಾರ್ಯರಿಗಿದ್ದ ಅತುಲ ವಿಶ್ವಾಸ ಅವರ ವಿಶಿಷ್ಟ ಗುಣವಾಗಿತ್ತು. ಉತ್ತರೋತ್ತರ ಖ್ಯಾತಿಗೆ ಬಂದ ಮೈಸೂರಿನ ಅನೇಕ ಸಂಗೀತಗಾರರು, ಚಿತ್ರಗಾರರು, ಶಿಲ್ಪಿಗರು, ನಟರು ಆಚಾರ್ಯರ ಕೃಪಾಪೋಷಣೆಗೆ ಒಳಗಾಗಿದ್ದವರೇ. ಕಲಾವಿದರು, ವಿದ್ವಜ್ಜನರ ಕೈಂಕರ್ಯಕ್ಕೆ ಆಚಾರ್ಯರ ಪರಿವಾರ ಸದಾ ಸಿದ್ಧವಾಗಿದ್ದುದಲ್ಲದೆ ಸ್ವಯಂ ಆಚಾರ್ಯರೇ ಕೈಕಟ್ಟಿ ನಿಲ್ಲುತ್ತಿದ್ದರು.

ನಿಗರ್ವ ಸಿರೋಮಣಿಗಳಾದ ಆಚಾರ್ಯರ ಸೌಜನ್ಯ ಅಸ್ವಾದೃಶವಾಗಿತ್ತು. ಸಣ್ಣ ಪುಟ್ಟ ಮಕ್ಕಳನ್ನು ಕೂಡ ಅವರು ಏಕವಚನದಲ್ಲಿ ಸಂಬೋಧಿಸುತ್ತಿರಲಿಲ್ಲ. ' ಏನು ಚಿಕ್ಕಮ್ಮಣ್ಣಿಯವರೇ - ಚೆನ್ನಾಗಿದ್ದೀರಾ ? ಪುಟ್ಟಪ್ಪಾಜಿಯವರು ಆರೋಗ್ಯವೇ ' ಎನ್ನುವ ನುಡಿ ಸೊಬಗು ಆಚಾರ್ಯರ ಆಸೀಮ ಆತ್ಮ

ಮರಾಜೇಂದ್ರ ಟೆಕ್ನಿಕಲ್ ಇನ್‌ಸ್ಟಿಟ್ಯೂಟ್ ಸೇರಿಸಬೇಕೆಂದು ನಿರ್ಧರಿಸಿ
ಕೊಂಡಿದ್ದರು. ಆದರೆ ಅವನ ಅನ್ನ, ವಸತಿ, ವಸ್ತ್ರ, ಶಾಲೆಯ ಫೀಸು, ಕಲಾ
ಸಾಮಗ್ರಿಗಳನ್ನು ಕೊಳ್ಳಲು ಹಣ ಇವುಗಳಿಗೇನು ಮಾಡುವುದೆನ್ನುವ ಯೋಚನೆ
ಪ್ರಬಲವಾಯಿತು.

ಒಂದು ದಿನ ಯಾಲಕ್ಕಪ್ಪಾಚಾರ್ಯರ ಮನೆಯಲ್ಲಿ ಕುಳಿತಿದ್ದಾಗ ಏನೋ
ಒಂದು ಯೋಚನೆ ಥಟ್ಟನೆ ಹೊಳೆಯಿತು. ಆದರೆ ಆ ದಾರಿ ಹಿಡಿಯಲು ಮನ
ಸ್ಸೇಕೋ ಅಂಜಿ ಅಳುಕುತ್ತಿತ್ತು.

ರಾಮನಾಥಯ್ಯ ಯಾಲಕ್ಕಪ್ಪಾಚಾರ್ಯರ ಮಗನ ಸಹಪಾಠಿಗಳೂ ಸ್ನೇಹಿ
ತರೂ ಆಗಿದ್ದುದರಿಂದ ಯಾಲಕ್ಕಪ್ಪಾಚಾರ್ಯರಿಗೂ ಪ್ರಿಯರಾಗಿದ್ದರು. ಗೆಳೆಯನ
ದಾರಿ ನೋಡುತ್ತಾ ಒಬ್ಬರೇ ಕುಳಿತ ರಾಮನಾಥಯ್ಯನವರ ಬಳಿಗೆ ಆಚಾರ್ಯರು
ಬಂದು

"ಏಕೆ ಸ್ವಾಮಿ ಒಬ್ಬರೇ ಕುಳಿತುಕೊಂಡಿರಿ. ತಮ್ಮ ಸ್ನೇಹಿತರು ಎಲ್ಲಿ
ಹೋದರು ? "

"ಒಳಗೆ ಮುಖ ತೊಳೆದುಕೊಂಡು ಬರಲು ಹೋದ. ಇನ್ನೇನು ಬರ
ಬಹುದು."

ರಾಮನಾಥಯ್ಯನವರೆದುರಿಗಿದ್ದ ಸೋಫಾ ಕುರ್ಚಿಯ ಮೇಲೆ ಕುಳಿತು
ಕೊಂಡು ಆಚಾರ್ಯರು

"ನಾಲ್ಕೈದು ದಿವಸದಿಂದ ನೋಡುತ್ತಿದ್ದೇನೆ. ನೀವು ಏನೋ ಯೋಚನೆ
ಮಾಡುವಂತಿದೆ. ಏನು ಸ್ವಾಮಿ ಯೋಚನೆ ? ಮನೆಯಲ್ಲಿ ಎಲ್ಲರೂ ಆರೋಗ್ಯ
ವಷ್ಟೆ ! "

"ತಮ್ಮ ಆಶೀರ್ವಾದದಿಂದ ಎಲ್ಲರೂ ಆರೋಗ್ಯ. ಒಂದು ಯೋಚನೆ
ಏನೋ ಕಾಡುತ್ತಾ ಇವೆ. ತಮಗೆಷ್ಟು ತೊಂದರೆ ಕೊಡುವುದೆಂದು ನಿಮಗೆ
ಅದನ್ನು ಹೇಳಲು ಧೈರ್ಯವಾಗಿಲ್ಲ."

" ತಾವು ನನ್ನ ಮನಸ್ಸಿಗೆ ನಿಷ್ಕಾರಣವಾಗಿ ವ್ಯಥೆಯನ್ನುಂಟು ಮಾಡುತ್ತಿರುವಿರಿ ! "

" ಏಕೆ ಆಚಾರ್ಯರೇ ? "

" ನೀವು ನಮ್ಮ ಮನೆಯವರು. ನಮ್ಮ ಚಿರಂಜೀವಿ ಬೇರೆಯಲ್ಲ, ನೀವು ಬೇರೆಯಲ್ಲ. ಈ ಬಗೆಯ ಉಪಚಾರದ ಮಾತು ನೀವು ಆಡಲೇ ಬಾರದು. "

" ಹಾಗಾದರೆ ಕೇಳಿ ಸ್ವಾಮಿ. "

ಎಂದು ರಾಮನಾಥಯ್ಯನವರು ಶ್ರೀಕಂಠನ ಕಥೆಯನ್ನುಸುರಿದರು.

" ಏನು ದೊಡ್ಡ ವಿಷಯಾಂತ ಇಷ್ಟು ಯೋಚಿಸಬೇಕು ರಾಮನಾಥಯ್ಯನವರೇ. ಆತನನ್ನು ಕರೆಸಿ - ಎಲ್ಲಾ ವ್ಯವಸ್ಥೆ ನಾನು ನೋಡಿಕೊಳ್ಳುತ್ತೇನೆ. ನಮ್ಮ ಛತ್ರದಲ್ಲಿ ರೂಮು ಕೊಡಿಸುತ್ತೇನೆ - ಊಟಕ್ಕೆ ಏರ್ಪಾಟು ಮಾಡುತ್ತೇನೆ - ಸ್ಕೂಲಿಗೆ ಸೇರಿಸುವುದು, ಸ್ಕೂಲು ಫೀಸು ಜವಾಬ್ದಾರಿ ನನಗಿರಲಿ. "

" ಎಷ್ಟು ದೊಡ್ಡ ಮನಸ್ಸು ತಮ್ಮದು ಆಚಾರ್ಯರೇ ? "

" ಯೋಗ್ಯತೆಯುಳ್ಳವರನ್ನು ಮುಂದಕ್ಕೆ ತರಬೇಕಾದುದು ನಮ್ಮ ಧರ್ಮವಲ್ಲವೇ ? ನಾವು ಮಾತ್ರ ಉಂಡು, ಉಟ್ಟು, ನಲಿದು ಹೋಗಬೇಕೆಂದು ಭಗವಂತ ಸಂಪತ್ತು ಕೊಡುವುದಿಲ್ಲ. ಹತ್ತು ಜನಕ್ಕೆ ಪ್ರಯೋಜನವಾಗದ ಸಂಪತ್ತಿನಿಂದ ಏನು ಪ್ರಯೋಜನ ? "

ರಾಮನಾಥಯ್ಯನವರ ಮನಸ್ಸಿನಿಂದ ದೊಡ್ಡ ಭಾರ ಇಳುಹಿದಂತಾಯಿತು.

ಮಾದಯ್ಯನವರ ಜತೆ ಬಂದಿಳಿದ ಶ್ರೀಕಂಠನನ್ನು ಛತ್ರದಲ್ಲಿ ಎದುರುಗೊಂಡು, ಅವನಿಗೆ ಛತ್ರದಲ್ಲಿ ಎಲ್ಲ ವ್ಯವಸ್ಥೆ ಮಾಡಿಕೊಟ್ಟು, ಮಾರನೆಯ ದಿನವೇ ಸ್ಕೂಲು ಸೇರಿಸಿ ರಾಮನಾಥಯ್ಯನವರು ನಂಜನಗೂಡಿಗೆ ಪ್ರಯಾಣ ಬೆಳಸಿದರು.

ಶಾಲೆಯ ಆರಂಭದ ದಿನವಾದುದರಿಂದ ಪಾಠ ಪ್ರವಚನಗಳಿರಲಿಲ್ಲ. ಶ್ರೀಕಂಠ ಶಾಲೆಯಿಂದ ಛತ್ರಕ್ಕೆ ಬಂದವನೇ ಪಕ್ಕದ ನಾರಣಪ್ಪನ ಹೊಟೇಲಿಗೆ ಹೋಗಿ ಊಟಮಾಡಿಕೊಂಡು ಬಂದು ರೂಮಿನಲ್ಲಿ ಏಕಾಂಗಿಯಾಗಿ ಕುಳಿತ.

ಅವನ ಬಾಳಿನ ತೇರು ಒಂದು ನಿರ್ದಿಷ್ಟ ಮಾರ್ಗದಲ್ಲಿ ಹೊರಟಿತ್ತು. ಆ ತೇರನ್ನೆಳೆಯುವುದಕ್ಕೆ ರಾಮನಾಥಯ್ಯ, ಮಾದಯ್ಯ, ಯಾಲಕ್ಕಪ್ಪಾಚಾರ್ಯರು

ನೆರವಾಗಿದ್ದರು.

ತನ್ನ ಭವಿಷ್ಯ ಭವ್ಯವಾದುದೆಂಬ ತಿಳಿಗನಸು ಶ್ರೀಕಂಠನಿಗೆ ಆಹ್ಲಾದವನ್ನುಂಟು ಮಾಡಿತು. ಆದರೆ ಮನಸ್ಸಿನಲ್ಲೇನೋ ಕೊರಗು - ಏನೋ ದುಃಖ - ಎಂಥದೋ ಮೂಕವೇದನೆ!

'ಸ್ವರ್ಣ ಈಗೇನು ಮಾಡುತ್ತಿರಬಹುದು. ನನ್ನನ್ನೇ ಜ್ಞಾಪಿಸಿಕೊಂಡು ಅಳುತ್ತಿರಬಹುದೇ - ತಾಯಿ ಅವಳಿಗೆ ಸಮಾಧಾನ ಹೇಳುತ್ತಿರಬಹುದೇ?

'ಅಥವಾ ತಾಯಿ ಸಿಟ್ಟಾಗಿರಬಹುದು. ಮದುವೆ ಗೊತ್ತು ಮಾಡಬೇಕೆಂದಿರುವಲ್ಲಿ ಯಾರದೋ ಧ್ಯಾನ ಮಾಡುತ್ತಾಳಲ್ಲಾ ಎಂದವರು ಅಸಮಾಧಾನಗೊಂಡಿರಬಹುದು.

'ಸ್ವರ್ಣನಿಗೆ ಮದುವೆಯೇ? ಅವಳು ನನ್ನ ಕೈಬಿಟ್ಟು ಬೇರೆಯವರ ಸೊತ್ತಾಗುವಳೇ?

'ನಾನೆಂಥ ಅವಿವೇಕ ಮಾಡಿದೆ! ಜತೆಯಲ್ಲಿ ಬರುತ್ತೇನೆಂದವಳನ್ನು ಬಿಟ್ಟು ಬಂದೆನಲ್ಲಾ!

'ಜತೆಯಲ್ಲಿ ಕರೆದುಕೊಂಡು ಬಂದಿದ್ದರೆ ಪೂರೈಸುವುದಕ್ಕಾಗುತ್ತಿತ್ತೇ? ಆಗ ಯಾಲಕ್ಕಪ್ಪಾಚಾರ್ಯರು ನಮ್ಮಿಬ್ಬರನ್ನೂ ಚತ್ರದಲ್ಲಿಟ್ಟುಕೊಂಡು ಪೋಷಿಸುತ್ತಿದ್ದರೇ?

'ರಾಮನಾಥಯ್ಯನವರು ನಮ್ಮ ನಡತೆಯನ್ನು ಒಪ್ಪಿಕೊಳ್ಳುತ್ತಿದ್ದರೇ?

'ಏಕೆ ಒಪ್ಪಿಕೊಳ್ಳಬಾರದು?'

'ನಾನೂ ಸ್ವರ್ಣ ಜತೆಯಲ್ಲಿ ಬೆಳೆದವರು. ಒಬ್ಬರನ್ನೊಬ್ಬರು ಪ್ರೀತಿಸುತ್ತೇವೆ.......ನಾವೂ ಮದುವೆಯಾಗುತ್ತೇವೆ.'

'ಆದರೆ ಅವಳು ಓಡಿಬಂದವಳಾಗುತ್ತಾಳೆ – ನಾನು ಓಡಿಸಿಕೊಂಡು ಬಂದವನಾಗುತ್ತೇನೆ. ನಮ್ಮದು ಬೇರೆ ಬೇರೆ ಜಾತಿ.'

'ಎಲ್ಲರೂ ನನ್ನ ಕೈಬಿಡುತ್ತಾರೆ.'

'ಅವಳ ಮನೆಯವರು ಪುನಃ ಅವಳನ್ನು ಮನೆ ಸೇರಿಸುವುದಿಲ್ಲ.'

ಈ ಚಿಂತನೆ - ಬಿಡದೆ ಬಂದೆರಗಿತು. ತಲೆಯಲ್ಲಿ ಕಟೆಯುತ್ತಿದ್ದ ಭಾವನೆಗಳು ಶ್ರೀಕಂಠನನ್ನು ಅಪಾರ ದುಃಖದಲ್ಲಿ ಮುಳುಗಿಸಿದವು.

ಶ್ರೀಕಂಠ ಶಿಲ್ಪಗ್ರಂಥ ಓದುವ ನೆಪ ಮಾಡಿಕೊಂಡು ಮಲಗಿದ.

ಮೊಂಪರು ಹತ್ತಿತು. ಆ ಸ್ಥಿತಿಯಲ್ಲಿಯೂ ಚಿತ್ತಪಟಲದ ಮೇಲೆ ಸ್ವರ್ಣನ ಸುಸ್ಪಷ್ಟ ಚಿತ್ರ - ಕಂಬನಿದುಂಬಿದ ಅವಳ ಕಮಲ ಕಣ್ಣುಗಳು - ದುಃಖದಿಂದ ಬಾಗಿದ ದೇಹಲತೆ.

ಶ್ರೀಕಂಠನಿಗೆ ಎಚ್ಚರವಿಲ್ಲದಂತೆ ನಿದ್ರೆ ಹತ್ತಿದೆ. ಹೊತ್ತಿನ ಪರಿವೆಯಿಲ್ಲದೆ ಮಲಗಿ ನಿದ್ರಿಸಿದ್ದಾನೆ. ಯಾರೋ ಬಂದು ಕೂಗಿದಾಗಲೇ ಎಚ್ಚರ. ಕಣ್ಣುಜ್ಜಿ ಕೊಂಡು ಹಾಸಿಗೆಯ ಮೇಲೆ ಕುಳಿತ. ಎದುರಿಗೆ ನಿಂತಿದ್ದ ಯಾಲಕ್ಕಪ್ಪಾಚಾರ್ಯ ರನ್ನು ನೋಡಿ, ಹಾಸಿಗೆ ಸುತ್ತಿ

" ಬನ್ನಿ ಸ್ವಾಮಿ ಕುಳಿತುಕೊಳ್ಳಿ "

ಎಂದು ಹೇಳಿ ಹೋಗಿ ಮುಖ ತೊಳೆದುಕೊಂಡು ಬಂದ.

" ತುಂಬ ಆಯಾಸವಾಗಿತ್ತೇನಪ್ಪಾ? " ಎಂದು ಆಚಾರ್ಯರು ಮೃದುವಾಗಿ ಕೇಳಿದರು.

" ಹೂ ! ಆಗಿತ್ತೆಂದು ಕಾಣುತ್ತದೆ. "

" ಊರು, ಮನೆ ಬಿಟ್ಟು ಬಂದು ಬೇಸರವಾಗಿರಬಹುದು. "

" ಹೌದು ! ಎಲ್ಲವೂ ನನಗೆ ಹೊಸದು. ನಾನು ಗುಂಜೂರು ಬಿಟ್ಟು ಹೊರಗೆ ಕಾಲಿಟ್ಟುದು ಇದೇ ಮೊದಲು. ಪಟ್ಟಣಗಳು ಇಷ್ಟು ಸುಂದರವಾಗಿ ದೊಡ್ಡದಾಗಿರುತ್ತವೆಯೆಂದು ನನಗೆ ಗೊತ್ತೇ ಇರಲಿಲ್ಲ. "

" ನೀನು ಮೈಸೂರು ನೋಡಿಯೇ ಇಲ್ಲವೇ ? "

" ಇಲ್ಲ ಸ್ವಾಮಿ. "

ಸಾಯಂಕಾಲ ಕಾರ್ ಕಳಿಸಿಕೊಡುತ್ತೇನೆ. ನಮ್ಮ ಡ್ರೈವರ್ ಜತೆ ಹೋಗಿ, ಚಾಮುಂಡಿ ಬೆಟ್ಟ, ಲಲಿತಾದ್ರಿ, ಅರಮನೆ ಎಲ್ಲಾ ನೋಡಿಕೊಂಡು ಬರುವಿಯಂತೆ ! ಯೋಚನೆ ಮಾಡಬೇಡಪ್ಪಾ – ನಾಲ್ಕು ದಿವಸ ಪಳಗಿದರೆ ಎಲ್ಲವೂ ಸರಿಹೋಗುತ್ತದೆ. — ಹೊಟೇಲಿನಲ್ಲಿ ಊಟ ಚೆನ್ನಾಗಿತ್ತೇ ? "

" ಚೆನ್ನಾಗಿತ್ತು ಸ್ವಾಮಿ. ನಾರಣಪ್ಪನವರು ತುಂಬ ಉಪಚರಿಸಿದರು. "

" ಆತ ನಮ್ಮ ಮನೆಯಲ್ಲಿ ಅಡಿಗೆಗಿದ್ದ. ನಮ್ಮವರು ಯಾರಾದರೂ ಹೋದರೆ ತುಂಬ ಉಪಚಾರ ಮಾಡುತ್ತಾನೆ.... ನಿನ್ನ ತಂದೆ ಉತ್ತಮ ಶಿಲ್ಪಿ ಗಳು ಎಂದು ರಾಮನಾಥಯ್ಯನವರು ಹೇಳಿದರು. ಈಗವರು ಶಿಲ್ಪದ ಕೆಲಸ ಮಾಡುವುದಿಲ್ಲವೇ ? "

" ಇಲ್ಲ ಸ್ವಾಮಿ. ತಮ್ಮ ಸಾಮಗ್ರಿಗಳನ್ನು ಹತ್ತಿರವಿಟ್ಟುಕೊಳ್ಳದೆ ನನಗೆ ಕೊಟ್ಟುಬಿಟ್ಟಿದ್ದಾರೆ. "

" ನೀನು ಏನಾದರೂ ಕಡೆದಿರುವೆಯಾ? "

ಶ್ರೀಕಂಠ ತನ್ನ ಶಿಲ್ಪಕೃತಿಗಳನ್ನು ಪ್ರದರ್ಶಿಸಲು ಅನುಮಾನಿಸಿದ.

" ಹೆದರಬೇಡ. ಯಾವದಾದರೂ ಮಾಡಿದ್ದರೆ ತೋರಿಸು. ನೋಡಿ ಸಂತೋಷಪಡುತ್ತೇನೆ. "

ಶ್ರೀಕಂಠ ಒಂದು ಹರಕಲು ಪಂಚೆಯ ಗಂಟುಬಿಚ್ಚಿ ಅನ್ನಪೂರ್ಣಾದೇವಿ, ಲಲಿತಾಂಬ, ನಟರಾಜ, ರಾಧಾಕೃಷ್ಣರ ಮೂರ್ತಿಗಳನ್ನು ಆಚಾರ್ಯರ ಮುಂದಿಟ್ಟ.

ಆಚಾರ್ಯರು ಅನ್ನಪೂರ್ಣಾ ವಿಗ್ರಹವನ್ನು ಕೈಗೆತ್ತಿಕೊಂಡು ಎವೆಯಿಕ್ಕದೆ ನೋಡಿ, ಅದರ ಅಸಾಮಾನ್ಯ ಸೌಂದರ್ಯವನ್ನು ಮೆಚ್ಚಿಕೊಳ್ಳುತ್ತಾ

" ಇದು ನೀನು ಮಾಡಿದುದೇ ? "

" ಹೌದು ಸ್ವಾಮಿ - ಆದರೆ ನಮ್ಮ ತಂದೆಯವರು ತಿದ್ದಿದರು. "

ಉಳಿದ ವಿಗ್ರಹಗಳನ್ನು ಒಂದೊಂದಾಗಿ ಕೈಗೆತ್ತಿಕೊಂಡು ನೋಡುತ್ತಾ ಕುಳಿತರು. ಒಮ್ಮೊಮ್ಮೆ ಅವರ ದೃಷ್ಟಿ ಶ್ರೀಕಂಠನ ಆಪಾದಮಸ್ತಕ ಹರಿದಾಡುತ್ತಿತ್ತು. ಅವನನ್ನೇ ದಿಟ್ಟಿಸಿ ನೋಡಿ

" ಇವುಗಳನ್ನು ನೀನೇ ಮಾಡಿದೆಯಾ ಶ್ರೀಕಂಠ. "

ಆಚಾರ್ಯರ ' ಅನುಮಾನ ಶ್ರೀಕಂಠನಿಗೆ ತುಸು ಬೇಸರವನ್ನುಂಟು ಮಾಡಿತು. ' ನಾನು ಸುಳ್ಳು ಹೇಳುತ್ತಿರುವೆನೆಂದು ಭಾವಿಸಿರುವರೋ ಹೇಗೆ ' ಎಂದುಕೊಂಡು

" ನಾನು ಸುಳ್ಳು ಹೇಳುತ್ತಿಲ್ಲ ಸ್ವಾಮಿ. "

ಅವನ ಉತ್ತರವನ್ನು ಕಿವಿಯ ಮೇಲೇ ಹಾಕಿಕೊಳ್ಳದೆ ಆಚಾರ್ಯರು

" ನಿನ್ನ ವಯಸ್ಸೆಷ್ಟು ಶ್ರೀಕಂಠ " ಎಂದು ಕೇಳಿದರು.

" ನನಗೆ ಸರಿಯಾಗಿ ಗೊತ್ತಿಲ್ಲ ಸ್ವಾಮಿ. ಹದಿನೆಂಟೋ ಇಪ್ಪತ್ತೋ ಇರಬಹುದು. "

" ಲೋವರ್ ಸೆಕೆಂಡರಿ ಮುಗಿಸುವುದಕ್ಕೆ ಇಷ್ಟು ವರ್ಷ ಬೇಕಾಯಿತೇ?"

" ಹಳ್ಳಿಯ ಜನಕ್ಕೆ ಸ್ಕೂಲು ವಿದ್ಯೆಯಲ್ಲಿ ನಂಬಿಕೆಯಿಲ್ಲ. ನಾನು ಸ್ಕೂಲು ಸೇರಿದುದೇ ತಡ. "

"ಸ್ಕೂಲುವಿದ್ಯೆ ಕಡಿಮೆಯಾಯಿತೆಂದು ದುಃಖಿಸಬೇಕಾಗಿಲ್ಲ ಶ್ರೀಕಂಠೂ. ನಿನ್ನ ಶಿಲ್ಪವಿದ್ಯೆ ವಯೋಧರ್ಮ ಮೀರಿದುದು. ಗತವಾಗುತ್ತಿರುವ ಈ ವಿದ್ಯೆ ನಿನ್ನಲ್ಲಿನ್ನೂ ಜೀವಂತವಾಗಿರುವುದನ್ನು ಕಂಡು ನನಗೆ ತುಂಬ ಸಂತೋಷ ವಾಗಿದೆ. ಕೃಪಣ ಧನ ಕಾಯ್ದುಕೊಳ್ಳುವ ಹಾಗೆ ಇದನ್ನು ಕಾಪಾಡಿಕೊಂಡು ನೀನು ಬೆಳೆಸಿಕೊಳ್ಳಬೇಕು. ನನ್ನಿಂದಾಗುವ ಎಲ್ಲ ಸಹಾಯ ಮಾಡಲು ನಾನು ಸಿದ್ಧನಾಗಿದ್ದೇನೆ."

ಆಚಾರ್ಯರ ಆಶ್ವಾಸನ ಕೇಳಿ ಶ್ರೀಕಂಠನ ಮನಸ್ಸು ಕುಣಿದಾಡಿತು. ಬಡ ವನಿಗೆ ಭಾಗ್ಯನಿಧಿ ದೊರೆತಂತಾಯಿತು.

" ಶಿಲ್ಪವಿದ್ಯೆಯನ್ನು ಚೆನ್ನಾಗಿ ಕಲಿಯಬೇಕೆಂದು ಆಸೆ."

"ಕಲಿಯುವೆಯಂತೆ. ಈ ಶಾಲೆಯ ಶಿಕ್ಷಣ ಮುಗಿಸು– ಮುಂದೆ ಬೊಂಬಾ ಯಿಗೋ ಕಲ್ಕತ್ತೆಗೋ ಹೋಗುವೆಯಂತೆ."

"ಬೊಂಬಾಯಿ - ಕಲ್ಕತ್ತೆ - ಇದೇನು ಕನಸೋ. ಆ ಊರುಗಳಿಗೆ ಹೋಗುವುದು ನಿಜವಾಗಿ ತನ್ನ ಹಣೆಯಲ್ಲಿ ಬರೆದಿದೆಯೇ?"

"ನನಗೊಂದು ಕೆಲಸ ಮಾಡಿಕೊಡುವೆಯಾ ಶ್ರೀಕಂಠ."

"ಹೇಳಿ ಸ್ವಾಮಿ. ತಮ್ಮ ಸೇವೆ ಮಾಡಲು ನಾನು ಯಾವಾಗಲೂ ಸಿದ್ಧ ನಾಗಿದ್ದೇನೆ."

"ನಿಮ್ಮ ಸ್ಕೂಲಿನ ಸಾಲಿನಲ್ಲಿಯೇ ನಮ್ಮದೊಂದು ಸಿನೀಮಾ ಗೃಹ ವಿದೆ. ಚಾಮುಂಡೇಶ್ವರಿ ಟಾಕೀಸ್. ಅಲ್ಲಿ ಚಾಮುಂಡಮ್ಮನವರ ಒಂದು ಮೂರ್ತಿ ಪ್ರತಿಷ್ಠಿಸಬೇಕೆಂದು ಬಹಳ ದಿನಗಳ ಸಂಕಲ್ಪ. ಅಮ್ಮನವರ ಒಂದು ಮೂರ್ತಿ ನೀನು ಮಾಡಬಲ್ಲೆಯಾ?"

"ಪ್ರಯತ್ನಪಡುತ್ತೇನೆ. ಮೊದಲು ಜೇಡಿಮಣ್ಣಿನಲ್ಲಿ ಒಂದು ಸಣ್ಣ ವಿಗ್ರಹ ಕಡೆದು ತೋರಿಸುತ್ತೇನೆ. ತಾವು ಒಪ್ಪಿಕೊಂಡರೆ ಅದನ್ನೇ ದೊಡ್ಡ ಪ್ರಮಾಣದಲ್ಲಿ ಮಾಡಿಕೊಡುತ್ತೇನೆ."

"ಹಾಗೇ ಮಾಡು. ನಾಳೆ ಬೆಟ್ಟಕ್ಕೆ ಹೋಗಿ ಅಲ್ಲಿರುವ ಅಮ್ಮನವರ ವಿಗ್ರಹ ನೋಡಿಕೊಂಡು ಬಾ. ಜಗನ್ಮೋಹನ ಚಿತ್ರಶಾಲೆಯಲ್ಲಿ ಅಮ್ಮನವರ ಹಲವು ತ್ರಿವರ್ಣ ಚಿತ್ರಗಳಿವೆ. ಅವುಗಳನ್ನು ನೋಡಿ ನಿನ್ನ ವಿಗ್ರಹ ಸಿದ್ಧ ಮಾಡು."

" ಆಗಬಹುದು ಸ್ವಾಮಿ – ವಿಗ್ರಹ ಯಾವಾಗ ಬೇಕು. "

" ಅವಸರವೇನೂ ಇಲ್ಲ. ಸಾವಕಾಶವಾಗಿ ಮಾಡು. ಮೂರು ತಿಂಗಳು ತೆಗೆದುಕೋ. ನಿನ್ನ ಸ್ಕೂಲಿನ ಪಾಠಕ್ಕೆ ತೊಂದರೆ ಮಾಡಿಕೊಳ್ಳಬೇಡ. ವಿಗ್ರಹ ಲಾಕ್ಷಣಿಕವಾಗಿ, ಪ್ರಮಾಣಬದ್ಧವಾಗಿರುವುದು ಅತ್ಯಗತ್ಯ. "

" ಹಾಗೇ ಆಗಲಿ. "

" ಇನ್ನೇನಾದರೂ ಬೇಕೊ – ಎಲ್ಲಾ ಅನುಕೂಲವಾಗಿದೆಯೋ. ಚತ್ರದ ಮೇಟಿಗೆ ಹೇಳಿದ್ದೇನೆ. ಬೆಳಿಗ್ಗೆ ಅವನು ಸ್ನಾನಕ್ಕೆ ಬಿಸಿನೀರು ಕೊಡುತ್ತಾನೆ. ಹೊಟೇಲಿನಲ್ಲಿ ನಿನಗೆ ಬೇಕಾದಾಗ ತಿಂಡಿ ತೀರ್ಥ ತೆಗೆದುಕೋ - ಸಂಕೋಚ ಪಟ್ಟುಕೊಂಡು ಹೊಟ್ಟೆ ಒಣಗಿಸಬೇಡ. "

ಎಂದು ಹೇಳಿ ಆಚಾರ್ಯರು ಹೊರಟು ಹೋದರು.

ದಯೆ, ಕರುಣೆ, ಅಂತಃಕರಣವನ್ನೇ ಕಾಣದಿದ್ದ ಶ್ರೀಕಂಠನ ಕಂಠ ತುಂಬಿ ಬಂದಿತು. ಆಚಾರ್ಯರ ನನ್ನಿ ನುಡಿ ಅವನ ಹೃದಯದಲ್ಲಿ ಹೊಸ ಆಸೆ ಹರ್ಷಗಳನ್ನು ಹುಟ್ಟಿಸಿತ್ತು.

## ೨

ಮೈಸೂರಿನ ವಾತಾವರಣಕ್ಕೆ ಹೊಂದಿಕೊಳ್ಳುವುದಕ್ಕೆ ಶ್ರೀಕಂಠನಿಗೆ ಎರಡು ತಿಂಗಳು ಹಿಡಿಯಿತು. ಅವನನ್ನು ನಾಗರಿಕ ಜೀವನಕ್ಕೆ ಹೊಂದಿಸುವ ಜವಾಬ್ದಾರಿಯನ್ನು ರಾಜು ಹೊತ್ತುಕೊಂಡ. ಶ್ರೀಕಂಠನ ವೇಷ ಭೂಷಣಗಳಲ್ಲಿ ವಿಶೇಷ ಮಾರ್ಪಾಟಾಯಿತು. ನೆತ್ತಿಯ ಮೇಲಿದ್ದ ' ಪಿಳ್ಳುಜುಟ್ಟು ' ಮಾಯವಾಗಿ, ಅದರ ಸ್ಥಾನದಲ್ಲಿ ಕ್ರಾಪು ಕಾಣಿಸಿಕೊಂಡಿತು. ಕವುಟುಗಟ್ಟಿದ್ದ ಷರಟು ಪಂಚೆಗಳ ಬದಲು ಜುಬ್ಬ, ಪಾಯಿಜಾಮಾಗಳು ಬಂದವು. ಮುಖದ ಬಣ್ಣ ಕೂಡ ಬದಲಾಯಿಸುತ್ತ ಬಂದಿತು.

ರಾಜು ಇನ್‌ಸ್ಟಿಟ್ಯೂಟಿನ ನಾಲ್ಕನೆಯ ವರ್ಷದಲ್ಲಿ ಚಿತ್ರಕಲೆ ಅಭ್ಯಾಸ ಮಾಡುತ್ತಿದ್ದ. ಜಲ, ತೈಲ ವರ್ಣಗಳಲ್ಲಿ ರಾಜು ತಕ್ಕಷ್ಟು ಪ್ರಾವಿಣ್ಯ ದೊರಕಿಸಿಕೊಂಡು, ಮುಂಬಯಿಯ ಜೆ. ಜೆ. ಸ್ಕೂಲ್ ಆಫ್ ಆರ್ಟ್ಸ ಸೇರುವ ಪ್ರಯತ್ನ ನಡೆಸಿದ್ದ. ಅವನಿಗೆ ಕಾಲಕ್ಷೇಪ (Scholarship) ಕೊಟ್ಟು ಕಳಿಸಬಹುದೆಂದು

ಇನ್‌ಸ್ಟಿಟ್ಯೂಟಿನ ಸೂಪರಿಂಟೆಂಡೆಂಟರು ಸರ್ಕಾರಕ್ಕೆ ಸಿಫಾರಸು ಮಾಡಿದ್ದರು.

ಶ್ರೀಕಂಠನ ಮೂರ್ತಿನಿರ್ಮಾಣ ಕೌಶಲ್ಯ ನೋಡಿದ್ದ ರಾಜು ತಾನಾಗಿಯೇ ಅವನ ಸ್ನೇಹ ಬೆಳಸುವ ಪ್ರಯತ್ನ ಮಾಡಿದ್ದ.

ರಾಜು ಮುಂಬಯಿಗೆ ಅಪರಿಚಿತನಲ್ಲ. ಅದೇ ವರ್ಷ ಶಾಲೆಯ ಅಧ್ಯಾಪಕರು ವಿದ್ಯಾರ್ಥಿಗಳ ಜತೆ ಹೋಗಿ ಬಾದಾಮಿ, ಐಹೊಳೆ, ಪಟ್ಟದಕಲ್ಲು, ಎಲ್ಲೋರಾ, ಅಜಂತಾ, ಎಲಿಫ್ಯಾಂಟಾ, ಕಾರ್ಲಾ, ಜೋಗೇಶ್ವರಿಗಳನ್ನು ನೋಡಿಕೊಂಡು ನೂರಾರು ಪೂರ್ವ ಚಿತ್ರಗಳನ್ನು ಮಾಡಿಕೊಂಡು ಬಂದಿದ್ದ. ರಾಜು ಮಾಡಿದ್ದ ಅಪೂರ್ಣ ಚಿತ್ರಗಳನ್ನು ನೋಡುತ್ತ ನೋಡುತ್ತ ಶ್ರೀಕಂಠ ಪುಳಕಿತನಾಗುತ್ತಿದ್ದ.

" ಎಲ್ಲೋರಾ, ಎಲಿಫ್ಯಾಂಟಾ, ಬಾದಾಮಿಗಳಲ್ಲಿ ಇಡೀ ಬಂಡೆಗಳನ್ನೇ ಕಡೆದಿದ್ದಾರೆಯೇ ? "

" ಹೌದು. ಒಂದೇ ಕಲ್ಲಿನಲ್ಲಿ ದೇವಾಲಯ ಕಡೆದಿದ್ದಾರೆ. "

" ಕಂಬಗಳು. ದೇವಾಲಯದೊಳಗಿನ ಮೂರ್ತಿಗಳು. "

" ಅವುಗಳಿಗೂ ಬೇರೆಯ ಕಲ್ಲು ಉಪಯೋಗಿಸಿಲ್ಲ. ಬಂಡೆಯನ್ನು ಕೊರೆಯುವಾಗಲೇ, ಕಂಬಗಳು, ಮೂರ್ತಿಗಳು, ನವರಂಗ, ಭುವನೇಶ್ವರಿ ಬಿಡಿಸಿಕೊಂಡು ಹೋಗಿದ್ದಾರೆ. "

" ಅದ್ಭುತ ! ಅದ್ಭುತ !! "

" ಅದ್ಭುತವೆಂದು ಹೇಳುವೆಯಾ – ಆ ದೇವಸ್ಥಾನಗಳ ಮುಂದೆ ನಿಂತರೆ ಸ್ಮೃತಿ ತಪ್ಪಿ ಹೋಗುತ್ತದೆ. ಇವುಗಳನ್ನು ದೇವರೇ ನಿರ್ಮಿಸಿರಬೇಕಲ್ಲದೆ ಮನುಷ್ಯನಲ್ಲ ಎಂಬ ಭಾವನೆ ಬರುತ್ತದೆ. ಒಂದು ಚಿತ್ರ ಬರೆಯಬೇಕಾದರೆ ನಮಗೆ ಒಂದು ತಿಂಗಳು ಬೇಕು — ಒಂದು ಶಿಲ್ಪ ಮಾಡಬೇಕಾದರೆ ಮೂರು ತಿಂಗಳು ಬೇಕು. ಹಿಂದಿನ ಶಿಲ್ಪಿಗಳು ಈ ಮೂರ್ತಿಗಳನ್ನು ಎಷ್ಟು ದಿವಸಗಳಲ್ಲಿ ಕಡೆದಿರಬಹುದು — ಆ ಕಾಲದಲ್ಲಿ ಯಾವ ಆಯುಧಗಳನ್ನು ಉಪಯೋಗಿಸಿರಬಹುದು ಎಂದು ಆಶ್ಚರ್ಯವಾಗುತ್ತದೆ. "

" ಜನಪ್ರವೇಶಕ್ಕೆ ಅವಕಾಶವಿಲ್ಲದ ಕಾಡುಗಳಲ್ಲಿ ಅಂಥ ರಮ್ಯ ದೇವಸ್ಥಾನಗಳನ್ನು ಕಟ್ಟುವ ಉದ್ದೇಶವೇನು ರಾಜು. "

" ಅವು ಈಗ ಕಾಡುಗಳಾಗಿವೆ. ಒಂದು ಕಾಲಕ್ಕೆ ಅವು ರಾಜಧಾನಿಗಳಾ

ಗಿದ್ದವು. ಗುರುಕುಲಾಶ್ರಮಗಳಾಗಿದ್ದವು. ವಿಶ್ವವಿದ್ಯಾನಿಲಯಗಳಾಗಿದ್ದವು. ಚಿತ್ರ, ಶಿಲ್ಪವನ್ನು ಆ ಕಾಲದ ಜನ ನಾಲ್ಕು ಮಂದಿ ಶ್ರೀಮಂತರ ಭೋಗದ ಸೊತ್ತು ಎಂದು ಭಾವಿಸಿರಲಿಲ್ಲ. ರಾಷ್ಟ್ರಸಂಸ್ಕೃತಿ ಅಭಿವೃದ್ಧಿಯಾಗಬೇಕಾದರೆ ಜನತೆಯ ಸಂಸ್ಕೃತಿ ಉಚ್ಚವಾಗಿರಬೇಕು. ಜನತೆಯಲ್ಲಿ ಸಂಸ್ಕೃತಿ ಬೆಳಸುವುದಕ್ಕೆ ಈ ಬಗೆಯ ದೇವಾಲಯಗಳನ್ನು ಕಟ್ಟಿದರು. ಇಂದು ಈ ಬಗೆಯ ದೇವಾಲಯಗಳನ್ನು ಕಟ್ಟುವ ಮಾತು ಹಾಗಿರಲಿ — ಹಿಂದಿನವುಗಳನ್ನು ಸರಿಯಾಗಿ ನೋಡಿಕೊಂಡು, ಕಾಪಾಡಿಕೊಳ್ಳುವ ಯೋಗ್ಯತೆಯೂ ನಮ್ಮಲ್ಲಿಲ್ಲವಾಗಿದೆ. ಲಾರ್ಡ್ ಕರ್ಜನ್ ಸಾಹೇಬರು ಭಾರತದ ವೈಸರಾಯರಾಗಿ ಬಂದಾಗ ಭಾರತದ ಪ್ರಾಚೀನ ಶಿಲ್ಪ, ವಾಸ್ತು ಶಿಲ್ಪಗಳನ್ನು ರಕ್ಷಿಸಿಕೊಳ್ಳಬೇಕೆಂದು ನಮ್ಮ ದೇಶೀ ದೊರೆಗಳಿಗೆ ಉಪದೇಶ ಮಾಡಿದರು. ಗ್ರಿಫಿತ್ಸ್, ಲೇಡಿ ಹೆರಿಂಗ್‌ಹಂ ಮೊದಲಾದ ಪಾಶ್ಚಾತ್ಯರು ಅಜಂತೆಯ ಚಿತ್ರಕಲೆಯ ಜೀರ್ಣೋದ್ಧಾರ ಮಾಡಿದರು. ಹ್ಯಾವಲ್, ಪರ್ಸಿ ಬ್ರೌನ್, ಸ್ಟೆಲ್ಲಾ ಕ್ರಾಮರಿಷ್ ಮೊದಲಾದವರು ನಮ್ಮ ಶಿಲ್ಪ, ಚಿತ್ರಕಲೆ, ವಾಸ್ತು ಶಿಲ್ಪಗಳ ಮೇಲೆ ಗ್ರಂಥಗಳನ್ನು ಬರೆದು, ವಿಶ್ವಕ್ಕೆ ಅವುಗಳ ಅದ್ಭುತ ಕಲಾವೈಭವದ ಪರಿಚಯ ಮಾಡಿಕೊಟ್ಟರು. ತಮ್ಮ ಸಂಸ್ಕೃತಿಯ ಬಗ್ಗೆ ನಮ್ಮ ಜನರಷ್ಟು ನಿರಭಿಮಾನಿಗಳೂ, ಉದಾಸೀನರೂ, ವಿದ್ವೇಷಿಗಳೂ ಆಗಿರುವವರು ಜಗತ್ತಿನಲ್ಲಿ ಬೇರೆಲ್ಲಿಯೂ ದೊರೆಯಲಾರರು. ಜನತೆಯ ಉಪೇಕ್ಷೆಯನ್ನು ಸಹಿಸಲಾರದೆ ನಮ್ಮ ಕಲಾವಿದರು ಕಲೆಗೇ ಕೈಮುಗಿದು ಬಿಟ್ಟರು. ಅಳಿದುಳಿದವರು ಲೋಕದಭಿರುಚಿಗೆ ತಕ್ಕಂತೆ ತಮ್ಮ ಕಲೆಯನ್ನು ಮಾರ್ಪಡಿಸಿಕೊಂಡು, ಅದನ್ನು ಕೀಳು ಮಟ್ಟಕ್ಕಿಳಿಸಿದರು. ”

“ ನಿಜ – ನಿಜ ರಾಜೂ. ನಮ್ಮ ತಂದೆ ಬಾಯಲ್ಲಿ ಈ ಮಾತು ಅನೇಕ ಸಲ ಕೇಳಿದ್ದೇನೆ. ತಮ್ಮ ಸ್ಥಿತಿಯನ್ನು ಸ್ಮರಿಸಿಕೊಂಡು ಅವರು ಕಣ್ಣೀರ್ಗರೆಯುತ್ತಿದ್ದರು. ”

“ ನಮ್ಮ ಶಿಲ್ಪಿಗಳ ಪಾಡೇನಾಗಿವೆ ಬಲ್ಲೆಯಾ ಶ್ರೀಕಂಠ – ಒಂದು ಕಾಲಕ್ಕೆ ಬೆಳ್ಳೂರು, ನಾಗಮಂಗಲ ಶಿಲ್ಪವಿದ್ಯೆಗೆ ಪ್ರಸಿದ್ಧವಾಗಿದ್ದ ಊರುಗಳಾಗಿದ್ದವು. ಸಂಪ್ರದಾಯಬದ್ಧವಾದ ಹಲವು ಸ್ಥಪತಿ ಮನೆತನಗಳು ಆ ಊರುಗಳಲ್ಲಿ ಬಾಳುತ್ತಿದ್ದವು. ಇಂದು ಆ ಮನೆತನಗಳು ನಾಶವಾಗಿವೆ. ಶಿಲ್ಪಿಗಳು ಬೆಂಗಳೂರು, ಮೈಸೂರು, ಕೋಲಾರದ ಕಾರ್ಖಾನೆಗಳನ್ನು ಸೇರಿ ಹೊಟ್ಟೆ

ಹೊರೆದುಕೊಳ್ಳುತ್ತಿದ್ದಾರೆ. ”

“ ನಮ್ಮ ಗತಿಯೇನು ರಾಜೂ ? ”

“ ಲಲಿತ ಕಲೆಗಳನ್ನು ನಂಬಿದವರು ಸುಖದ ಆಸೆಯನ್ನು ಬಿಟ್ಟು ಬಿಡಬೇಕು. ಮನೆ ಮಠ, ಮದುವೆ, ಮಕ್ಕಳು, ಸಂಪತ್ತು, ಶಾಂತಿ ಇವುಗಳೊಂದೂ ಅವರ ಹಣೆಯಲ್ಲಿ ಬರೆದಿಲ್ಲ. ನಿಜವಾದ ಕಲಾಪ್ರೇಮವುಳ್ಳ ಕಲಾವಿದ ಅವಧೂತನಾಗಬೇಕು. ಸಿಕ್ಕಿದರೆ ತಿನ್ನಬೇಕು - ಇಲ್ಲದಿದ್ದರೆ ಉಪವಾಸವಿರಬೇಕು. ಸಿಕ್ಕಿದರೆ ಉಡಬೇಕು - ಇಲ್ಲವಾದರೆ ಬೆತ್ತಲೆಯಿರಬೇಕು. ಆದರೆ ಈಯೆಲ್ಲ ಕಷ್ಟಪರಂಪರೆಗಳಿಗೆ ಅಂಜದೆ, ಅಳುಕದೆ ತನ್ನ ಕಲಾಸೇವೆ ಮುಂದುವರಿಸಬೇಕು. ”

“ ಕಲಾವಿದನೂ ಮನುಷ್ಯನಲ್ಲವೇ ? ಅವನಿಗೂ ಹಸಿವಾಗುವುದಿಲ್ಲವೇ? ಅವನಿಗೂ ಮದುವೆಯಾಗಿ, ಮಕ್ಕಳುಮರಿಯೊಡನೆ ಸಂತೋಷವಾಗಿರಬೇಕೆಂಬ ಬಯಕೆಯಾಗುವುದಿಲ್ಲವೇ ? ”

“ ಆಗುತ್ತದೆ – ಆದರೆ ಆಗಕೂಡದು. ಜೀವನ ಸೌಖ್ಯಕ್ಕೂ ತನಗೂ ಯಾವ ಸಂಬಂಧವೂ ಇಲ್ಲವೆಂದು ಅವನು ಮನಸ್ಸು ಕಲ್ಲು ಮಾಡಿಕೊಳ್ಳಬೇಕು.”

“ ಸುಖವೇ ಕಾಣದ ಕಲಾವಿದನ ಕೃತಿ - ಇತರರಿಗೆ ಯಾವ ಸುಖ ಕೊಡಬಲ್ಲುದು. ನೋವಿನಿಂದ ಬೆಳೆದ ಹೂವು ನಗಿಸಬಲ್ಲುದೇ? ”

“ ಕಲಾವಿದ ಸುಖಿಯಲ್ಲವೆಂದು ಯಾರು ಹೇಳುವವರು ? ಪ್ರಾಪಂಚಿಕ ಸುಖ ಅವನ ಪಾಲಿಗಿಲ್ಲವಾಗಬಹುದು. ಆದರೆ ಅವನ ಸುಖವನ್ನು ಪ್ರಪಂಚ ಕನಸಿನಲ್ಲಾದರೂ ಕಾಣಲು ಶಕ್ಯವೇ ? ಒಂದು ಒಳ್ಳೆಯ ರಾಗ ಹಾಡಿದಾಗ ಒಂದು ಕಾವ್ಯ - ಕಾದಂಬರಿ ಬರೆದಾಗ, ಒಂದು ಶಿಲ್ಪ ಮಾಡಿದಾಗ, ಒಂದು ಸುಂದರ ದೇವಮಂದಿರ ನಿರ್ಮಿಸಿದಾಗ ಕಲಾವಿದ ಪಡುವ ಆನಂದಕ್ಕೆ ಸಾಟಿಯಿದೆಯೇ ? ಅಲೌಕಿಕ ಸೌಖ್ಯ ಬೇಕೆನ್ನುವವನು ಲೌಕಿಕ ಸೌಖ್ಯವನ್ನೂ ಕಡೆಗಾಣಿಸಬೇಕು. ”

ರಾಜು ವಾದ ಶ್ರೀಕಂಠನಿಗೆ ನುಂಗಲಾರದ ತುತ್ತಾಗಿತ್ತು. ಅವನ ವಾದಕ್ಕೆ ಪ್ರತಿವಾದ ಹೂಡಲು ಏಕೋ ಅವನ ಅಂತಃಕರಣ ಒಪ್ಪುತ್ತಿರಲಿಲ್ಲ. ಒಳಗೆ ಯಾವದೋ ಅವ್ಯಕ್ತ ಧ್ವನಿ ‘ ಅವನು ಹೇಳುವುದು ಸತ್ಯ - ಸತ್ಯ ಸತ್ಯ ’ ಎಂದು ಸಾರುತ್ತಿತ್ತು. ಆದರೆ ಬುದ್ಧಿ ಅದನ್ನೊಪ್ಪಿಕೊಳ್ಳಲು ಹಿಂಜರಿ

ಯುತ್ತಿತ್ತು.

‘ ಕಲಾವಿದ ಮನುಷ್ಯನಾಗಿರುವುದರಿಂದ ಅವನಿಗೆ ಲೋಕ ಸುಖ ಬೇಕು. ’

‘ ಕಲಾವಿದ ಕಲಾವಿದನಾಗಿರುವುದರಿಂದ ಅವನಿಗೆ ಅಲೌಕಿಕ ಸುಖ ಬೇಕು. ’

ಎಂದು ಬುದ್ಧಿ ವಾದ ಮಾಡುತ್ತಿತ್ತು.

ಕ್ಷಣಕಾಲ ವಿಚಾರಪರವಶನಾದ ಶ್ರೀಕಂಠ ‘ ಇದು ಇಂದಿಗೆ ಇತ್ಯರ್ಥ ವಾಗುವ ವಿಷಯವಲ್ಲ ’ ಎಂದು ನಿರ್ಧರಿಸಿಕೊಂಡು ಮೇಲಕ್ಕೆದ್ದ.

ಕೊನೆಯಲ್ಲಿ ಶತಪಥ ತಿರುಗುತ್ತಿದ್ದ ಶ್ರೀಕಂಠನಿಗೆ ಥಟ್ಟನೆ ನೆನಪಾಗಿ

“ ರಾಜೂ - ನಿನಗೊಂದು ವಿಷಯ ಹೇಳಿದ್ದೆ ಜ್ಞಾಪಕವಿದೆಯೇ ? ”

“ ಎಷ್ಟೋ ವಿಷಯ ಹೇಳಿದ್ದೆಯಪ್ಪಾ. ಯಾವದು ಜ್ಞಾಪಿಸು. ”

“ ನನ್ನ ಮೊದಲನೆಯ ಆರ್ಡರ್ ( Order ) ”

“ ಯಾಲಕ್ಕಪ್ಪಾಚಾರ್ಯರು ಬೇಕೆಂದು ಹೇಳಿದ ಮೂರ್ತಿಯೋ ? ”

“ ಹೌದು. ”

“ ಅದನ್ನೇನಾದರೂ ಕೈಗೆ ತೆಗೆದುಕೊಂಡೆಯಾ ? ”

“ ಮಾಡಲ್ ( model ) ನೋಡುವೆಯೇನು ? ”

“ ನೋಡುತ್ತೀಯಾ ಎಂದು ಕಣಿ ಕೇಳು. ”

ಒಂದು ಮರದ ಹಲಗೆಯ ಮೇಲಿದ್ದ ಮೂರ್ತಿಗೆ ಹಾಕಿದ್ದ ಒದ್ದೆ ವಸ್ತ್ರದ ಅವಕುಂಠನ ತೆಗೆದು ಶ್ರೀಕಂಠ ತೋರಿಸಿದ, ಮೂರ್ತಿಯನ್ನು ನೋಡುತ್ತಿದ್ದ ರಾಜು ಮೆಲ್ಲನೆ

“ ಶ್ರೀಕಂಠ - ಒಂದು ಪ್ರಶ್ನೆ ಕೇಳಲೇ ? ” ಎಂದ.

“ ಕೇಳು. ”

“ ಚಾಮುಂಡಿ ಬೆಟ್ಟದ ಮೇಲಣ ಮೂರ್ತಿಯನ್ನು ಅನುಕರಿಸಿರುವೆಯಾ ? ”

“ ಇಲ್ಲ. ”

“ ಜಗನ್ಮೋಹನ ಚಿತ್ರಶಾಲೆಯಲ್ಲಿ ಹಲವು ‘ ಮಹಿಷಾಸುರ ಮರ್ದಿನಿ ’ ಚಿತ್ರಗಳಿವೆ. ”

" ಅವುಗಳನ್ನು ನಾನು ನೋಡಿದ್ದೇನೆ - ಯಾವದನ್ನೂ ಅನುಕರಿಸಿಲ್ಲ. ಲಕ್ಷಣ, ಲಕ್ಷ್ಯ ಎರಡನ್ನೂ ಗಮನದಲ್ಲಿಟ್ಟುಕೊಂಡು, ನನಗೆ ಪ್ರೇರಣೆಯಾದ ರೀತಿ ಈ ಮೂರ್ತಿ ಕಡೆದಿದ್ದೇನೆ."

" ಲಕ್ಷಣ ಹೇಳು ನೋಡೋಣ."

ರಾಜು ತನ್ನನ್ನು ಪರೀಕ್ಷೆ ಮಾಡುತ್ತಿರುವುದು ಶ್ರೀಕಂಠನಿಗೆ ಸುಸ್ಪಷ್ಟ ವಾಯಿತು. ಅದಕ್ಕಾಗಿ ಅವನು ಮುನಿಯಲಿಲ್ಲ. ತನ್ನಲ್ಲಿ - ತನ್ನ ಕೃತಿಯಲ್ಲಿ ಗೆಳೆಯ ತೋರುತ್ತಿದ್ದ ಆಸಕ್ತಿ ಅವನಿಗೆ ಸಂತೋಷವನ್ನುಂಟು ಮಾಡಿತು.

' ಮಹಿಷಾಸುರ ಮರ್ದಿನಿ ' ದುರ್ಗೆಯ ಪ್ರಭೇದಗಳಲ್ಲಿ ಒಂದು. ದುರ್ಗೆ ಯಲ್ಲಿ ಒಂಭತ್ತು ಮುಖ್ಯ ಪ್ರಭೇದಗಳಿವೆಯೆಂದು ಶಿಲ್ಪಗ್ರಂಥ ಹೇಳುತ್ತದೆ. — ನೀಲಕಂಠಿ, ಕ್ಷೇಮಂಕರಿ, ಹರಸಿದ್ಧಿ, ರುದ್ರಾಂಶ ದುರ್ಗೆ, ವನದುರ್ಗೆ, ಅಗ್ನಿ ದುರ್ಗೆ, ಜಯದುರ್ಗೆ, ವಿಂಧ್ಯಾವಾಸಿ ದುರ್ಗೆ, ರಿಪುಮಾರಿ ದುರ್ಗೆ.

' ಮಹಿಷಾಸುರ ' ಮರ್ದಿನಿಗೆ ಹತ್ತು ಕೈಗಳು, ಮೂರು ಕಣ್ಣುಗಳು. ಅವಳು ತಲೆಯ ಮೇಲೆ ಜಟಾಮುಕುಟ ಧರಿಸಿದ್ದಾಳೆ — ಅದರ ಮೇಲೆ ಚಂದ್ರ ಕಲೆಯಿದೆ. ಅವಳ ಕಣ್ಣುಗಳು ನೀಲೋತ್ಪಲಗಳನ್ನು ಹೋಲುತ್ತಿವೆ. ತುಂಬಿದ ಎದೆಯುಳ್ಳವಳೂ, ಕೃಶಕಟಿಯುಳ್ಳವಳೂ ಆಗಿರುವ ಈ ದೇವಿಯನ್ನು ತ್ರಿಭಂಗಿ ಮುದ್ರೆಯಲ್ಲಿಯೇ ಕಾಣಿಸಬೇಕು. ಆಕೆ ಬಲಕೈಗಳಲ್ಲಿ ತ್ರಿಶೂಲ, ಖಡ್ಗ, ಶಕ್ತ್ಯಾಯುಧ, ಚಕ್ರ ಮತ್ತು ಹೆದೆಯೇರಿದ ಬಿಲ್ಲನ್ನು ಹಿಡಿದಿದ್ದಾಳೆ; ಎಡಕೈ ಗಳಲ್ಲಿ ಪಾಶ, ಅಂಕುಶ, ಖೇತಕ, ಪರಶು, ಘಂಟೆಗಳನ್ನು ಹಿಡಿದಿದ್ದಾಳೆ. ಆಕೆಯ ಪಾದಗಳಲ್ಲಿ ಶಿರಚ್ಛೇದನ ಹೊಂದಿದ ಮಹಿಷ ಬಿದ್ದಿರುತ್ತದೆ; ಅದರ ಕುತ್ತಿಗೆಯಿಂದ ರಕ್ತ ಚೆಲ್ಲುತ್ತಿದೆ. ಆ ಕುತ್ತಿಗೆಯೊಳಗೆ ದೇವಿಯ ನಾಗಪಾಶ ದಿಂದ ಬಂಧಿತನಾದ ಅಸುರ ಕಾಣಿಸಿಕೊಂಡಿರಬೇಕು. ಅಸುರನ ಕೈಯಲ್ಲಿ ಕತ್ತಿ, ಗುರಾಣಿಗಳಿರಬೇಕು. ದೇವಿಯ ತ್ರಿಶೂಲ ಅವನ ಕುತ್ತಿಗೆಯನ್ನು ಹೊಕ್ಕಿ ರುತ್ತದೆ. ಆಕೆ ರುದ್ರಮುಖಿಯಾಗಿ ಹುಬ್ಬುಗಂಟು ಹಾಕಿಕೊಂಡಿರುತ್ತಾಳೆ. ಆಕೆಯ ಬಲಗಾಲು ಸಿಂಹ ವಾಹನದ ಮೇಲೂ, ಎಡಗಾಲು ಅಸುರನ ದೇಹದ ಮೇಲೂ ಇರುತ್ತದೆ. — ನನ್ನ ಶಿಲ್ಪದಲ್ಲಿ ಈ ಲಕ್ಷಣಗಳನ್ನೇ ಅನುಸರಿಸಿ ದ್ದೇನೆ."

" ನಿನ್ನ ಶಿಲ್ಪದ ಮುಖ ರುದ್ರಮುಖವಾಗಿಲ್ಲ. — ದೇವಿ ಸುಹಾಸವದನ

ಳಾಗಿದ್ದಾಳೆ. ”

“ ಹೌದು - ಮಹಿಷಾಸುರ ಮರ್ದಿನಿ ದಿವ್ಯ ಶಕ್ತಿಯ ಸಂಕೇತ. ಆಕೆ ಮಹಿಷಾಸುರನನ್ನು ಸಂಹರಿಸಿದುದು ನಮಗೆ ಪರಮಾಶ್ಚರ್ಯಕರವಾಗಿ ಕಂಡು ಬಂದರೂ, ಮಹಾಶಕ್ತಿಗೆ ಅದೊಂದು ಲೀಲೆ. ಲೀಲಾ ವಿಲಾಸಿನಿಯಾದ ತಾಯಿಯ ಮುಖದಲ್ಲಿ ಮುಗುಳ್ನಗೆ ತಾನೇ ಕಂಡು ಬರಬೇಕು — ಇದಕ್ಕೆ ಇನ್ನೂ ಒಂದು ಸಮರ್ಥನೆ ಕೊಡಬಲ್ಲೆ. ದೇವಿ ಲೋಕಕಲ್ಯಾಣಕ್ಕಾಗಿ ಲೋಕ ಪೀಡಕನಾದ ಮಹಿಷಾಸುರನನ್ನು ಸಂಹರಿಸಿದಳು. ಅವನ ಸಂಹಾರದಿಂದ ಲೋಕಕ್ಕೆ ಶಾಂತಿ ದೊರೆಯಿತು. ಲೋಕಕಲ್ಯಾಣ ಸಾಧಕಳಾದ ದೇವಿ ಸಂತೋಷಪಡುವುದು ಸಹಜವಷ್ಟೆ ! ”

ಶಿಲ್ಪವನ್ನು ಕಂಡು, ಶಿಲ್ಪಿಯ ವಿವರಣೆ ಕೇಳಿದ ರಾಜು ಆನಂದಾಶ್ಚರ್ಯ ಗೊಂಡಿದ್ದ.

“ ಶಾಸ್ತ್ರಭಾಗ ಹೇಗೆ ತಿಳಿದುಕೊಂಡೆ ಶ್ರೀಕಂಠ ? ”

“ ತಂದೆಯವರು ಎಲ್ಲವನ್ನೂ ಕ್ರೋಢೀಕರಿಸಿ ಒಂದು ಗ್ರಂಥ ಸಿದ್ಧ ಮಾಡಿದ್ದಾರೆ. ಅದನ್ನೇ ನನಗೆ ಆಶೀರ್ವದಿಸಿದ್ದಾರೆ. ನನಗೆ ಬೇಕಾದ ಮೂರ್ತಿ ಲಕ್ಷಣಗಳಲ್ಲದೆ, ಅದರಲ್ಲಿ ಮೂರ್ತಿಗಳ ಪ್ರಮಾಣಗಳೂ ಚರ್ಚಿಸಲ್ಪಟ್ಟಿವೆ. ತಂದೆಯವರು ಆ ಗ್ರಂಥವನ್ನು ನನ್ನ ಕೈಯಲ್ಲಿ ಉರುಹೊಡೆಸಿದ್ದಾರೆ. ”

“ ನನಗೂ ಸ್ವಲ್ಪ ಶಿಲ್ಪದ ಪರಿಚಯ ಮಾಡಿಕೊಡು ಶ್ರೀಕಂಠ. ”

“ ಆಗಬಹುದು. ಆದರೆ ನನ್ನದೊಂದು ಕರಾರಿದೆ. ”

“ ಹೇಳು – ಒಪ್ಪಿಕೊಳ್ಳುತ್ತೇನೆ. ನೀನು ನನಗೆ ಚಿತ್ರಕಲೆ ಹೇಳಿ ಕೊಟ್ಟರೆ, ನಾನು ನಿನಗೆ ಶಿಲ್ಪಕಲೆ ಹೇಳಿಕೊಡುತ್ತೇನೆ. ”

“ ಅಗತ್ಯವಾಗಿ ಆಗಬಹುದು. ”

ನಾರಣಪ್ಪನ ಹೋಟಲು ಕಾಫಿ ಇಬ್ಬರ ಕರಾರಿಗೆ ಸಹಿ ಹಾಕಿತು.

೩

ಶ್ರೀಕಂಠ ಹೊರಟು ಹೋದ ಮೇಲೆ ಸ್ವರ್ಣನ ಉತ್ಸಾಹದ ಕಡಲು ಇಳಿಮುಖವಾಗಿತ್ತು. ಕೈಗೆ ಸಿಕ್ಕಿದ ಕಾಡು ಹೂಗಳನ್ನೂ ತಲೆಯ ತುಂಬ

ಮುಡಿದುಕೊಳ್ಳುತ್ತಿದ್ದ ಅವಳ ಸ್ತ್ರೀಸಹಜ ಆಸೆ ನಿರಾಶೆಗೆಡೆ ಕೊಟ್ಟಿತ್ತು. ಒಡವೆ ವಸ್ತ್ರಗಳಲ್ಲಿ ಅವಳು ತೋರುತ್ತಿದ್ದ ಪ್ರೀತಿಯೂ ಮಾಯವಾಗುತ್ತ ಬಂದಿತ್ತು.

ಹಾಸಿಗೆ ಬಿಟ್ಟು ಎದ್ದ ಹೊತ್ತಿನಿಂದ, ರಾತ್ರಿ ಮತ್ತೆ ಹಾಸಿಗೆ ಕಾಣುವ ವರೆಗೆ ಬಾಯಿಗೆ ಬಂದ ' ಕುರುಕು ' ಪದಗಳನ್ನು ಹಾಡುತ್ತಿದ್ದ ಹಕ್ಕಿಯ ಗಂಟಲು ಕಟ್ಟಿ ಹೋಗಿತ್ತು.

ಆಲಸ್ಯ ನಿರಾಸೆ - ಉಮ್ಮಳ.

ಶ್ರೀಕಂಠ ಹೋಗಿ ವರ್ಷವಾಗುತ್ತ ಬಂದಿತ್ತು. ಒಂದು ಕಾಗದವನ್ನೂ ಅವನು ಬರೆದಿರಲಿಲ್ಲ.

' ನನ್ನನ್ನು ಮರೆತು ಬಿಟ್ಟನೇ ? '

' ಪಟ್ಟಣದ ಬಗೆಬಗೆಯ ಆಕರ್ಷಣೆಗೆ ಮನಸೋತು ಬಡ ಗುಂಜೂರನ್ನು - ಬಡ ಸ್ವರ್ಣಳನ್ನು ನೆನಪಿನಿಂದ ಅಳಿಸಿ ಬಿಟ್ಟನೇ ? '

' ಶ್ರೀಕಂಠ ಎಲ್ಲರಂತಲ್ಲ ! ಅವನು ಮರೆತಿರಲಾರ ! '

' ಕಾಗದ ಬರೆದರೆ ಅಮ್ಮ ಅಪ್ಪನ ಕೈಗೆ ಸಿಗಬಹುದೆಂದು ಬರೆಯದಿರಬಹುದು ! '

' ನಾನಾದರೂ ಬರೆಯಲೇ ? '

' ಎಲ್ಲಿಗೆ ಬರೆಯುವುದು ? - ಅವನು ಎಲ್ಲಿದ್ದಾನೆ ? - ಏನು ಮಾಡುತ್ತಿದ್ದಾನೆ ? '

' ಎಲ್ಲಿಯಾದರೂ ಇರಲಿ – ಏನಾದರೂ ಮಾಡುತ್ತಿರಲಿ - ಚೆನ್ನಾಗಿದ್ದರೆ ಸಾಕು. '

ಎಂದು ತಾನೇ ಸಮಾಧಾನ ಹೇಳಿಕೊಳ್ಳುವಳು.

ಸ್ವರ್ಣನಲ್ಲಿ ದಿನದಿನಕ್ಕೆ ಆಗುತ್ತಿದ್ದ ಮಾರ್ಪಾಟನ್ನು ಮೋಹನರಂಗಂ, ಪಂಕಜಮ್ಮ ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ಪಂಕಜಮ್ಮ ಗಂಡನಿಗೆ ತಮ್ಮ ನಿರ್ಣಯವನ್ನು ಖಂಡಿತವಾಗಿ ಹೇಳಿಬಿಟ್ಟರು.

" ವಯಸ್ಸಿಗೆ ಬಂದ ಹುಡುಗಿ. ಮದುವೆ ಮಾಡದೆ ಮನೆಯಲ್ಲಿಟ್ಟುಕೊಂಡರೆ ನವೆಯದೆ ಇರುತ್ತದೆಯೇ ? ಸ್ವಲ್ಪ ಎದ್ದು ಓಡಾಡಿ ಗಂಡು ಗೊತ್ತು ಮಾಡಿ ಬೇಗ ಮಗಳ ಮದುವೆ ಮಾಡಿ. "

" ಮಗಳ ಮದುವೆ ಮಾಡಬೇಕೆಂದು ಬೀದಿಯಲ್ಲಿ ಹೋಗುವವನನ್ನು

ಕರೆದು ಕೊಡುವದಕ್ಕಾಗುತ್ತದೆಯೇ? ”

“ ಆಗುವುದಿಲ್ಲ ಸರಿ. ಹಾಗೆಂದು ಮನೆಯಲ್ಲೇ ಕುಳಿತು ಜಂತೆ ಎಣಿಸುತ್ತಿದ್ದರೆ ವರ ಮನೆಯ ಬಾಗಿಲಿಗೆ ಬರುತ್ತಾನೆಯೇ ? ”

ಮೋಹನರಂಗಂ ತಮ್ಮ ಖಾಸಾ ಆರಾಮಾಸನ ಬಿಟ್ಟು ಮೇಲಕ್ಕೇಳಬೇಕಾಯಿತು. ಬೆಂಗಳೂರು, ಮೈಸೂರು, ಕೋಲಾರ, ತುಮಕೂರು ಸುತ್ತಬೇಕಾಯಿತು.

ತಂದೆ ನಡಸುತ್ತಿದ್ದ ಪ್ರಯತ್ನದ ವಿಷಯ ಸೂಕ್ಷ್ಮವಾಗಿ ಮಗಳ ಕಿವಿಯ ಮೇಲೆ ಹಾಕಿ ಅವಳ ಮನಸ್ಸಿಗೆ ನೆಮ್ಮದಿಯನ್ನುಂಟು ಮಾಡಬೇಕೆಂದು ಪಂಕಜಮ್ಮ ಯೋಚಿಸಿದರು.

ಒಂದು ಸಂಜೆ ಸ್ವರ್ಣ ಓಡಿಯಾಡಿಕೊಂಡು ಕೈತುಂಬ ‘ ಗೋಲ್ಡ್ ಮೋಹರ್ ’ ಹೂಗಳನ್ನು ಹಿಡಿದು ಮನೆಗೆ ಬಂದಳು. ತಾಯಿ ಅವಳನ್ನು ಕೂಗಿ ಕರೆದು

“ ಎಲ್ಲಿಗೆ ಹೋಗಿದ್ದೆ ? ” ಎಂದು ಕೇಳಿದರು.

“ ಹೀಗೇ ತಿರುಗಾಡಿಕೊಂಡು ಬರಲು ಹೋಗಿದ್ದೆ. ”

“ ಹೂ ಕಿತ್ತು ಹಾಕಬಾರದಮ್ಮ. ಮುಡಿದುಕೋ. ”

....................................

“ ಸ್ವರ್ಣ, ನಿನಗೊಂದು ವಿಷಯ ಹೇಳಬೇಕೆಂದು ಕರೆದೆ. ”

“ ಏನು ಹೇಳಮ್ಮಾ. ”

“ ನಿನಗೆ ಸಂತೋಷವನ್ನುಂಟುಮಾಡುವ ವಿಷಯ ಹೇಳಿದರೆ ನನಗೇನು ಕೊಡುತ್ತೀ ? ”

“ ನಿನಗೆ ಕೊಡುವುದಕ್ಕೆ ನನ್ನಲ್ಲೇನಿದೆ ? ”

“ ಇದೆ.... ನಾನು ಹೇಳುವಂತೆ ಮಾಡುವೆಯಾ ? ”

“ ಆಗಲಿ — ಹೇಳು. ”

“ ನೀನು ಮೊದಲಿನಂತೆ ನಗುನಗುತ್ತಾ ಹಾಡಿಕೊಂಡು, ಆಡಿಕೊಂಡು ಇರಬೇಕು. ”

“ ವಿಷಯವೇನು ಹೇಳು. ”

“ ನಿನ್ನ ತಂದೆ ಎಲ್ಲಿಗೆ ಹೋಗಿದ್ದಾರೆ ಗೊತ್ತೋ ? ”

" ಎಲ್ಲಿಗೆ ಹೋಗಿದ್ದಾರೆ. "

" ಮೈಸೂರಿನಿಂದ ಕಾಗದ ಬರೆದಿದ್ದಾರೆ. ನಿನಗೆ ಅನುರೂಪನಾದ ವರನನ್ನು ಗೊತ್ತು ಮಾಡಿರುವರಂತೆ. ಅವರನ್ನೂ ಕರೆದುಕೊಂಡು ನಾಲ್ಕಾರು ದಿವಸಗಳಲ್ಲಿ ಬರುವರಂತೆ. "

ವರ - ಮದುವೆ ಎರಡೇ ಶಬ್ದಗಳು ಸ್ವರ್ಣನ ತಲೆಯಲ್ಲಿ ಉಳಿದವು. ಆ ಎರಡು ಶಬ್ದಗಳು ಮಸೆದಲಗಿನಂತೆ ಅವಳ ನೆತ್ತಿಯನ್ನು ಕೊರೆಯತೊಡಗಿದವು.

ಬೇಟೆಗಾರನ ಬಲೆಗೆ ಬಿದ್ದ ಹರಿಣಿಯ ಸ್ಥಿತಿಯಾಗಿತ್ತು ಸ್ವರ್ಣಳ ಸ್ಥಿತಿ. ಬಲೆಯಲ್ಲಿ ಸಿಕ್ಕು ಬಿಡಿಸಿಕೊಳ್ಳಬೇಕೆಂದು ಪ್ರಯತ್ನಿಸಿದಷ್ಟೂ ಅದು ಬಲಿಷ್ಠವಾಗುತ್ತಿತ್ತು.

ತಾವು ಹೇಳಿದ ವಾರ್ತೆ ಕೇಳಿ ಮಗಳು ಸಂತೋಷಿಸದಿದ್ದುದನ್ನು ಕಂಡು ಪಂಕಜಮ್ಮನವರ ಮನಸ್ಸಿಗೆ ಖೇದವಾಯಿತು. ಮಗಳಿಗೆ ಅಂತರಂಗದಲ್ಲಿ ಸಂತೋಷವಾಗಿದ್ದರೂ ನಾಚಿಕೆಯಿಂದ ಅದನ್ನು ಪ್ರಕಟಪಡಿಸಿಲ್ಲವೆಂದು ತಾಯಿ ತರ್ಕ ಮಾಡಿಕೊಂಡರು.

ಮೊದಲೇ ಕದಡಿ ಹೋಗಿದ್ದ ಮನೋಸಮುದ್ರದ ಮೇಲೆ ಬಿರುಗಾಳಿ ಬೀಸಿದಂತಾಗಿತ್ತು. ಸ್ವರ್ಣನಿಗೆ ಜೀವನವೇ ಬೇಸರವಾಗುತ್ತ ಬಂದಿತು.

' ಆಂಹತಿಯನ್ನು ಯಾರಲ್ಲಿ ಉಸುರಿಕೊಳ್ಳಬೇಕು - ತನ್ನನ್ನು ಸಂತೈಸುವವರು ಯಾರು — ಮಾರ್ಗದರ್ಶನ ಮಾಡಿಸುವವರು ಯಾರು — ನಾಲ್ಕಾರು ದಿವಸಗಳಲ್ಲಿ ತಂದೆ ' ಅವರೊಂದಿಗೆ ' ಬಂದು ಬಿಡುತ್ತಾರೆ. '

' ತಂದೆ ತಾಯಿಯ ಮಾತು ಮೀರಲು ಸಾಧ್ಯವೇ ? "

' ತಂದೆ ತಾಯಿ ಮಾತು ಮೀರಿ ಅವರಿಗೆ ಅಪರಿಮಿತ ದುಃಖ ತಂದೊಡ್ಡಲೇ ? '

' ಆದರೆ – ಅವರು ಆರಿಸಿದ ವರನನ್ನು ವರಿಸುವುದು ಹೇಗೆ ? ಒಲ್ಲದ ಗಂಡನ ಜತೆ ಬಾಳು ದೂಡುವುದು ಹೇಗೆ ? — ಶ್ರೀಕಂಠನನ್ನು ಮರೆಯುವುದು ಹೇಗೆ ? '

ಅವಳ ಚಿತ್ತ, ಮನಸ್ಸು, ಬುದ್ಧಿ, ಆಹಂಕಾರವೆಲ್ಲಾ ಶ್ರೀಕಂಠಮಯವಾಗಿತ್ತು.

ಸ್ವಪ್ನ, ಸುಷುಪ್ತಿ, ಜಾಗೃತಿಯಲ್ಲಿ ಶ್ರೀಕಂಠನದೇ ಧ್ಯಾನ – ಜ್ಞಾನ.

ಶ್ರೀಕಂಠ ಬರಬಾರದೇ ?

ಅವನು ಬರಲೊಲ್ಲ - ಸ್ವರ್ಣ ಅನುಭವಿಸುತ್ತಿದ್ದ ವೇದನೆಯ ಅರಿವು ' ಮಹಿಷಾಸುರ ಮರ್ದಿನಿ ' ಯ ಆರಾಧಕನಿಗೆ ಮರೆತುಹೋಗಿತ್ತು.

ದುಃಖತಪ್ತಳಾಗಿ ಭಯ ವಿಹ್ವಲಳಾಗಿದ್ದ ಸ್ವರ್ಣನ ಜೀವನದ ಕಾರಿರುಳಿನ ಮೇಲೆ ಮಿಂಚು ಮಿಂಚಿತು ನಿರಾಶೆಯಿಂದ ಕಮರಿ ಹೋಗಿದ್ದ ಅವಳ ಜೀವನವೃಕ್ಷ ಮತ್ತೆ ಚಿಗುರಿ ನಿಂತಿತು. ಆಸೆ ಒಮ್ಮೆಲೇ ಬೃಹದಾಕಾರ ತಾಳಿ ನಿಂತಿತು.

ಮಾದಯ್ಯ ಗುಂಜೂರಿಗೆ ಬಂದಿದ್ದರು.

ರೈತರಿಗೆ ಕೊಟ್ಟಿದ್ದ ಹಣ ವಸೂಲ್ಮಾಡಲು ಬಂದಿದ್ದ ಮಾದಯ್ಯನವರು ಸ್ವರ್ಣನನ್ನು ನೋಡಲು ಬಂದರು.

ಪ್ರೇಮದೂತನಂತೆ ಕಂಡು ಬಂದಿದ್ದ ಗುರುವನ್ನು ಸ್ವರ್ಣ ಆದರಿಸಿ ಉಪಚರಿಸಿದಳು.

" ಈಗ ಎಲ್ಲಿದ್ದೀರಿ ಮೇಷ್ಟ್ರೇ ? "

" ಶ್ರೀರಂಗಪಟ್ಟಣಕ್ಕೆ ವರ್ಗ ಮಾಡಿದ್ದಾರಮ್ಮಾ. "

" ಸುಖವಾಗಿದ್ದೀರಾ ಮೇಷ್ಟ್ರೇ ? "

" ಏನು ಸುಖವೋ ಬಿಡಮ್ಮ. ನಾನು ಗುಂಜೂರು ಬಿಡಬಾರದಾಗಿತ್ತು. ವರ್ಗ ಮಾಡಿ ಎಂದು ಕೇಳಿಕೊಂಡು ನಾನೇ ನನ್ನ ಕಾಲಿನ ಮೇಲೆ ಕಲ್ಲು ಹಾಕಿಕೊಂಡೆ. ಶ್ರೀರಂಗಪಟ್ಟಣ ಶುದ್ಧ ಮಲೇರಿಯಾ ಕೊಂಪೆ. ಆ ಊರಿಗೆ ಹೋದ ದಿವಸದಿಂದಲೂ ಮನೆಮಕ್ಕಳಿಗೆ ಜ್ವರ ತಪ್ಪಲಿಲ್ಲ. "

" ಇಲ್ಲಿಗೇ ಬಂದು ಬಿಡಿ ಮೇಷ್ಟ್ರೇ ! "

" ಇಷ್ಟು ಬೇಗ ಮತ್ತೆಲ್ಲಿ ವರ್ಗ ಮಾಡುವರಮ್ಮಾ............ಮನೆಯಲ್ಲಿ ಎಲ್ಲರೂ ಆರೋಗ್ಯವಷ್ಟೆ - ತಂದೆಯವರೆಲ್ಲಿ ? "

" ಅವರು ಊರಿನಲ್ಲಿಲ್ಲ. "

" ಶ್ರೀಕಂಠನ ವಿಷಯ ಕೇಳಿದೆಯಾ ? "

" ಅವನ ವಿಷಯ ನನಗೇನೂ ಗೊತ್ತಿಲ್ಲ ಮೇಷ್ಟ್ರೇ. "

" ನಿನಗೆ ಕಾಗದವೂ ಬರೆದಿಲ್ಲವೇ ? "

" ಇಲ್ಲ. ಊರು ಬಿಟ್ಟ ಮೇಲೆ ಅವನೇನು ಆಗಿದ್ದಾನೆಯೋ ನನಗೆ ತಿಳಿಯದು. "

" ಈಗವನೇನಮ್ಮ ದೊಡ್ಡ ಮನುಷ್ಯನಾಗಿ ಬಿಟ್ಟಿದ್ದಾನೆ. ಅವನ ಕೈಯಿಂದ ಯಾಲಕ್ಕಪ್ಪಾಚಾರ್ಯರು 'ಚಾಮುಂಡೇಶ್ವರಿ' ಮೂರ್ತಿ ಮಾಡಿಸಿ ತಮ್ಮ ಸಿನೀಮಾ ಮಂದಿರದಲ್ಲಿ ಪ್ರತಿಷ್ಠಾಪಿಸಿದರು. ಮುಖ್ಯ ಮಂತ್ರಿಗಳೇ ಅನಾವರಣ ಮಹೋತ್ಸವಕ್ಕೆ ಬಂದಿದ್ದರು. ಊರಿಗೆ ಊರೇ ಶ್ರೀಕಂಠನ ಕಲೆಯನ್ನು ಹೊಗಳುತ್ತಿದೆ. ನಾಗಲಿಂಗಾಚಾರೀಗೆ ಈ ವಿಷಯ ತಿಳಿಸೋಣ ಎಂದಿದ್ದೆ — ಅವನು ಶಿಕ್ಕುವುದೇ ಇಲ್ಲ — ನೀನಾದರೂ ಅವನಿಗೆ ತಿಳಿಸು. "

" ಈಗ ಶ್ರೀಕಂಠ ಇನ್ನಾವುದಾದರೂ ಮೂರ್ತಿ ಮಾಡುತ್ತಿದ್ದಾನೆಯೇ?"

" ಶ್ರೀಕಂಠನ ಕೆಲಸ ನೋಡಿ ಮೆಚ್ಚಿಕೊಂಡವರಲ್ಲಿ ಕೆರಿಗನ್, ಕೆರಿಗನ್ ( Keriqan and Kerigan, Taxidermists ) ಕಂಪೆನಿಯ ಥಾಂಪ್ಸನ್ ಸಾಹೇಬರೂ ಒಬ್ಬರಾಗಿದ್ದಾರೆ. ಅವನನ್ನು ತಮ್ಮ ಕಂಪೆನಿಯ ಶಿಲ್ಪಿ ಮಾಡಿಕೊಂಡಿದ್ದಾರೆ. "

" ಹಾಗಾದರೆ ಸ್ಕೂಲು ಬಿಟ್ಟುಬಿಟ್ಟನೇ ? "

" ಇಲ್ಲ. ಕಂಪೆನಿಯ ಕೆಲಸ ದಿನಕ್ಕೆ ಮೂರು, ನಾಲ್ಕು ಗಂಟೆ ಮಾತ್ರ. ಶಾಲೆಗೂ ಹೋಗುತ್ತಿದ್ದಾನೆ. ಶ್ರೀಕಂಠನಿಗೆ ನೀನು ಕಾಗದ ಬರೆದು ಮೆಚ್ಚುಗೆ ವ್ಯಕ್ತಗೊಳಿಸಿದರೆ ಅವನು ತುಂಬ ಸಂತೋಷಪಡುತ್ತಾನೆ. ನಮ್ಮ ಹಳ್ಳಿಹುಡುಗ — ಇಷ್ಟು ಅಭಿವೃದ್ಧಿಗೆ ಬಂದುದು ನಮಗೆಲ್ಲರಿಗೂ ಹೆಮ್ಮೆಯ ವಿಷಯ. "

" ಅವನು ನಮ್ಮನ್ನೆಲ್ಲಾ ಮರೆತಿರುವಾಗ ನಾನೇಕೆ ಬರೆಯಲಿ ಮೇಷ್ಟ್ರೇ."

" ಮರೆತಿಲ್ಲಮ್ಮ. ಅವನಿಗೂ ಕೈತುಂಬ ಕೆಲಸ. ಅದರ ಅವಾಂತರದಲ್ಲಿ ಪುರಸತ್ತು ಸಿಕ್ಕಿಲ್ಲ. ಮೊನ್ನೆ ನಾನು ಅವನನ್ನು ಕಂಡಿದ್ದಾಗ ಎಲ್ಲರದೂ ಯೋಗ ಕ್ಷೇಮ ವಿಚಾರಿಸಿದ. 'ಗುಂಜೂರಿನಲ್ಲಿ ನಾನಿದ್ದಷ್ಟು ಸುಖವಾಗಿ ಇನ್ನೆಲ್ಲಿಯೂ ಇರಲು ಸಾಧ್ಯವಿಲ್ಲ ಮೇಷ್ಟ್ರೇ' ಎಂದು ಹೇಳಿದ. "

ತನ್ನನ್ನು ಶ್ರೀಕಂಠ 'ಮರೆತಿಲ್ಲ' ವೆನ್ನುವ ಸುದ್ದಿ ಕೇಳಿ, ಸ್ವರ್ಣನ ಹೃದಯಕ್ಕೆ ಹಾಲೆರೆದಂತಾಯಿತು. 'ಅವನಿಗೂ ಕೈತುಂಬ ಕೆಲಸ' — ಇರಬಹುದು. ಒಂದು ಕಾರ್ಡು ಬರೆಯುವಷ್ಟು ಪುರಸತ್ತಿಲ್ಲವೇ ?

ಕೂಡಲೆ ಕುಳಿತು ಶ್ರೀಕಂಠನಿಗೆ ಪತ್ರ ಬರೆಯಬೇಕೆಂದು ಸ್ವರ್ಣನ

ಮನಸ್ಸು ಬಯಸಿತು. ಆದರೆ ಯಾವದೋ ಅಳುಕು ಅವಳನ್ನು ತಡೆಗಟ್ಟಿತು. ' ನಾಳೆ ಬರೆಯೋಣ ' ಎಂದುಕೊಂಡು ಕಾಲ ತಳ್ಳುತ್ತ ಬಂದಳು.

ಎರಡು ದಿನಗಳ ತರುವಾಯ ಊರು ಸೇರಿದ ಮೋಹನರಂಗಂ, ಪಂಕಜಮ್ಮನವರು ನಿರೀಕ್ಷಿಸುತ್ತಿದ್ದ ಸಂತೋಷದ ಸುದ್ದಿ ತಂದರು.

" ಗಂಡು ಒಪ್ಪಿಕೊಂಡಿದ್ದಾನೆ. ಮುಹೂರ್ತ ನಿಶ್ಚಯಿಸುವುದೇ ಬಾಕಿ " ಎಂದು ಹೇಳಿದರು.

" ಯಾರು ಗಂಡು - ಏನು ಸಮಾಚಾರ - ಹೇಗಿದ್ದಾನೆ. "

" ಮೈಸೂರಿನಲ್ಲಿ ಫರ್ನೀಚರ್ ಅಂಗಡಿ ಇಟ್ಟುಕೊಂಡಿದ್ದಾನೆ. ಹೆಸರು ಶ್ರೀನಿವಾಸಲು. ಹುಡುಗ ತುಂಬ ಸಂಭಾವಿತ. ನೋಡುವುದಕ್ಕೂ ಚೆನ್ನಾಗಿದ್ದಾನೆ. ತಿಂಗಳಿಗೆ ೨೦೦ - ೩೦೦ ರೂಪಾಯಿ ಸಂಪಾದಿಸುತ್ತಾನೆ. ಮುಂದಿನ ವಾರ ನಿಶ್ಚಿತಾರ್ಥಕ್ಕೆ ಅವನೇ ಬರುತ್ತಾನೆ. ಆಗ ನೀನೇ ನೋಡುವೆಯಂತೆ. "

ಸ್ವರ್ಣನ ಹೃದಯದಾವೇಗ ಹೆಚ್ಚಿತು. ಅನಿರೀಕ್ಷಿತ ಅಪಘಾತ ಸಂಭವಿಸಿದಂತಾಯಿತು.

ಶ್ರೀಕಂಠನಿಗೆ ಈಗಲೇ ಪತ್ರ ಬರೆಯುವುದೋ ವಾರ ಕಳೆದ ಮೇಲೆ ಬರೆಯುವುದೋ ಎನ್ನುವ ಚಿಂತೆ ಅವಳನ್ನು ಕಾಡತೊಡಗಿತು.

೬

ಮಾದಯ್ಯನವರು ಶ್ರೀಕಂಠನ ಬಗ್ಗೆ ಸ್ವರ್ಣನಿಗೆ ಹೇಳಿದುದರಲ್ಲಿ ಏನೂ ಉತ್ಪ್ರೇಕ್ಷೆಯಿರಲಿಲ್ಲ. ತಮ್ಮ ಶಿಷ್ಯನೆಂಬ ಸಹಜ ಅಭಿಮಾನವಿದ್ದರೂ, ಮಾದಯ್ಯ ಅದಕ್ಕೆ ಅಸತ್ಯದ ಹೊಳವು ಕೊಡಲೆತ್ನಿಸಿರಲಿಲ್ಲ.

ಶ್ರೀಕಂಠ ನಿರ್ಮಿಸಿದ ' ಚಾಮುಂಡೇಶ್ವರಿ ' ಮೂರ್ತಿ ಯಾಲಕ್ಕಪ್ಪಾಚಾರ್ಯರ ಮೆಚ್ಚುಗೆಗೆ ಪಾತ್ರವಾಯಿತು. ಅವರು ಅದನ್ನು ಮುಂಬಯಿಗೆ ಕಳಿಸಿಕೊಟ್ಟು ನಾಲ್ಕು ಅಡಿಯ ಅಮೃತಶಿಲಾ ಪ್ರತಿಮೆ ಮಾಡಿಸಿ ತರಿಸಿ ತಮ್ಮ ಸಿನೀಮಾ ಮಂದಿರದಲ್ಲಿ ಪ್ರತಿಷ್ಠಾಪಿಸಿದರು. ವಿಶೇಷ ವೈಭವದಿಂದ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದಿದ್ದ ಆರಂಭೋತ್ಸವಕ್ಕೆ ನಗರದ ಗಣ್ಯ ಮಹನೀಯರು, ವರ್ತಕರು, ಕೈಗಾರಿಕಾ ಧುರೀಣರು, ಸರಕಾರಿ ಅಧಿಕಾರಿಗಳು,

ಪತ್ರಿಕಾ ಪ್ರತಿನಿಧಿಗಳು, ಕಲಾವಿದರು ಆಗಮಿಸಿದ್ದರು. ಅಂದಿನ ಆಮಂತ್ರಿತರಲ್ಲಿ ಕೆರಿಗನ್ ಮತ್ತು ಕೆರಿಗನ್ ಕಂಪೆನಿಯ ಥಾಂಪ್ಸನ್ ದೊರೆಯೂ ಒಬ್ಬನಾಗಿದ್ದ.

ಉತ್ಸವ ಮುಗಿದ ಮೇಲೆ ಥಾಂಪ್ಸನ್ ದೊರೆ ಯಾಲಕ್ಕಪ್ಪಾಚಾರ್ಯರಿಗೆ ಅಭಿನಂದನೆಯರ್ಪಿಸುತ್ತಾ

" ನಿಮ್ಮ ಶಿಲ್ಪಿಯನ್ನು ನಾವು ಉಪಯೋಗಿಸಿಕೊಳ್ಳಬಹುದೇ ? "

ಎಂದು ಕೇಳಿದರು,

" ಅವಶ್ಯವಾಗಿ ಆಗಬಹುದು. "

" ನಮ್ಮ ಕಾರ್ಖಾನೆಗೆ ಒಬ್ಬ ಶಿಲ್ಪಿ ಬೇಕು. "

" ನಿಮ್ಮಲ್ಲಿ ಒಬ್ಬನಿದ್ದನಲ್ಲ ! "

" ಕಾರ್ಖಾನೆಗೆ ಬರುತ್ತಿದ್ದ ಆರ್ಡರುಗಳನ್ನು ತಾನೇ ನಿರ್ವಹಿಸಲಾರಂಭಿಸಿದ. ಅವನ ವರ್ತನೆಯಿಂದ ಕಾರ್ಖಾನೆಯ ಕೀರ್ತಿಗೇ ಕಳಂಕ ಬರುವಂತಾಗಲು ನಾವು ಅವನನ್ನು ಕೆಲಸದಿಂದ ತೆಗೆದು ಹಾಕಬೇಕಾಯಿತು. "

" ನಿಮ್ಮ ಕಾರ್ಖಾನೆಯಲ್ಲಿ ಶಿಲ್ಪಿಗೆ ತುಂಬಾ ಕೆಲಸವಿರುತ್ತದೆಯೇ ಮಿ. ಥಾಂಪ್ಸನ್. "

" ಇರುತ್ತದೆ. ಗಿರಾಕಿಗಳು ಹುಲಿ, ಜಿಂಕೆ, ಚಿರತೆ ಚರ್ಮ ತಂದು ಕೊಟ್ಟು ಅವುಗಳಿಗೆ ಪ್ರಾಣಿಗಳ ಮುಖವಿಟ್ಟುಕೊಡಬೇಕೆಂದು ಕೇಳುತ್ತಾರೆ. ನಿಮ್ಮ ಶಿಲ್ಪಿ ತುಂಬ ದಕ್ಷನ ಹಾಗೆ ಕಾಣುತ್ತಾನೆ "

" ಅಸಾಧ್ಯ ಹುಡುಗ ಸರ್. ಬೆರಳು ತೋರಿಸಿದರೆ ಹಸ್ತ ನುಂಗಬಲ್ಲ. ಆದರೆ ಅವನಿಗೆ ಪುರಸತ್ತಿದೆಯೋ ಇಲ್ಲವೋ ಕೇಳಬೇಕು. "

ಶ್ರೀಕಂಠನನ್ನು ಆಚಾರ್ಯರು ಹತ್ತಿರ ಕರೆದು ಥಾಂಪ್ಸನ್ನ ದೊರೆಗಳ ಪರಿಚಯ ಮಾಡಿಕೊಟ್ಟರು. ಮಾರನೆಯ ದಿನ ನಾಲ್ಕು ಗಂಟೆಗೆ ದೊರೆಗಳನ್ನು ಕಾರ್ಖಾನೆಯಲ್ಲಿ ನೋಡಬೇಕೆಂಬ ನಿರ್ಧಾರವಾಯಿತು.

ಮಾರನೆಯ ದಿನದ ಭೆಟ್ಟಿಯೂ ಸುಮುಖವಾಗಿ ಆಗಿತ್ತು. ಶ್ರೀಕಂಠನ ಮರದ ಕೆತ್ತನೆಯ ಕೆಲಸ, ಮಣ್ಣಿನ ಕೊರೆಕೆಲಸ ( Relief work ), ಮೂರ್ತಶಿಲ್ಪ ಕಂಡ ಥಾಂಪ್ಸನ್ ದೊರೆಗಳ ಗೌರವ ಇಮ್ಮಡಿಸಿತು. ತಮ್ಮ ಅವಶ್ಯಕತೆಯನ್ನು ನಿರೂಪಿಸಿದ ಮೇಲೆ

" ನೀವು ನಿತ್ಯವೂ ಕಾರ್ಖಾನೆಗೆ ಬರಬೇಕಾದದ್ದಿಲ್ಲ. ಎರಡು ಮೂರು ದಿನಕ್ಕೊಮ್ಮೆ ಬಂದರೆ ಸಾಕು. ನಿಮ್ಮ ಮನೆಯಲ್ಲಿ ಕೆಲಸ ಮುಗಿಸಿ ತಂದು ಕೊಟ್ಟರೂ ಆಗಬಹುದು. ನಮಗೆ ತುರತು ಕೆಲಸವಿದ್ದರೆ ಹೇಳಿಕಳಿಸುತ್ತೇವೆ. ನಿಮ್ಮ ಅಡ್ರೆಸ್ ಕೊಟ್ಟು ಹೋಗಿ. "

" ಸದ್ಯಕ್ಕೆ ಯಾಲಕ್ಕಪ್ಪಾಚಾರ್ಯರ ಚತ್ರದಲ್ಲಿ ಒಂದು ರೂಮಿನಲ್ಲಿದ್ದೇನೆ ಸರ್. "

" ನಿಮಗೆ ಸಂಬಳ ಗೊತ್ತು ಮಾಡುವುದಿಲ್ಲ. ನೀವು ಮಾಡಿಕೊಡುವ ಪ್ರತಿಯೊಂದು ಕೆಲಸಕ್ಕೂ ಪ್ರತ್ಯೇಕ ಸಂಭಾವನೆ ಕೊಟ್ಟು ಬಿಡುತ್ತೇವೆ. "

" ಹಾಗೇ ಆಗಬಹುದು. ತಮಗೆ ಹೇಗೆ ಸೂಕ್ತವೋ ಹಾಗೆ ಮಾಡ ಬಹುದು. "

" ನನ್ನ ಬಂಗಲೆಗೆ ಒಂದು ನಟರಾಜಮೂರ್ತಿ - ಅದಕ್ಕೆ ಜೋಡಿಯಾಗಿ ಕಾಳಿಯ ಮರ್ದನ ಮೂರ್ತಿ ಬೇಕು. "

" ಉದ್ದಗಲ ಎಷ್ಟಿರಬೇಕು. "

" ಒಂದೂವರೆ ಅಡಿ ಉದ್ದ ಇಟ್ಟುಕೊಳ್ಳಿ. ಅವುಗಳಿಗೆ ನೀವೇ ಸೂಕ್ತ ವಾದ ಪೀಠಗಳನ್ನು ಕರಿಯ ಮರದಲ್ಲಿ ಮಾಡಿಸಿಕೊಡಿ. "

" ಹಾಗೇ ಆಗಲಿ. "

ಥಾಂಪ್ಸನ್ ಸಾಹೇಬರು ಒಳಗೆ ಹೋಗಿ ನೂರು ರೂಪಾಯಿ ತಂದು ಶ್ರೀಕಂಠನ ಕೈಗಿತ್ತರು.

" ಇದೇಕೆ ಸರ್. "

" ಇರಲಿ. ಸಾಮಾನು ಕೊಳ್ಳುವುದಕ್ಕೆ ಬೇಕಾಗುತ್ತದೆ. "

ಎಂದು ಹೇಳಿದರು.

ಶ್ರೀಕಂಠನಿಗೆ ಸ್ವಲ್ಪವೂ ಬಿಡುವಿಲ್ಲದಾಯಿತು. ಸ್ಕೂಲಿನ ಕೆಲಸದ ಜತೆಗೆ, ಕೆರಿಗನ್ ಫ್ಯಾಕ್ಟರಿಯ ಕೆಲಸ - ಅವುಗಳ ಜತೆಯಲ್ಲಿ ನಟರಾಜ, ಕಾಳೀಯ ಮರ್ದನ ಮೂರ್ತಿಗಳ ನಿರ್ಮಾಣ. ಅವನ ಕೋಣೆ ಜೇಡಿಯ ಮಣ್ಣು, ಪ್ಲಾಸ್ಟರ್ ಆಫ್ ಪ್ಯಾರಿಸ್, ಶಿಲ್ಪಪೀಠಗಳು, ಮರದ ಚೌಕಟ್ಟುಗಳಿಂದ ತುಂಬಿ ಹೋಯಿತು. ಕೂಡಲು ನಿಲ್ಲಲು ಸ್ಥಳವಿಲ್ಲ — ಶ್ರೀಕಂಠ ಅವುಗಳ ಮಧ್ಯವೇ ಸ್ಥಳ ಮಾಡಿಕೊಂಡು ಮಲಗುತ್ತಿದ್ದ.

ಶ್ರೀಕಂಠನ ಅವಸ್ಥೆ ನೋಡಿ ರಾಜೂಗೆ ತಲೆ ಬೇಸರವಾಯಿತು.

" ಇದೇನಯ್ಯಾ ನಿನ್ನ ಫಜೀತಿ " ಎಂದು ಹುಬ್ಬುಗಂಟು ಹಾಕಿಕೊಂಡು ಕೇಳಿದ.

" ಫಜೀತಿಯೆಂದರಾಗುತ್ತದೇನಪ್ಪಾ ! ಮಣ್ಣು, ಮರವೇ ನನ್ನ ಆಸ್ತಿ."

" ಅವಕ್ಕೆ ನನ್ನ ಅಭ್ಯಂತರವಿಲ್ಲ. ಎಲ್ಲಾ ಸಂಸಾರವನ್ನು ಒಂದೇ ರೂಮಿನಲ್ಲಿ ನಿರ್ವಹಿಸುತ್ತಿರುವೆಯಲ್ಲಾ ! ಆಚಾರ್ಯರನ್ನು ಕೇಳಿ ಏಕೆ ದೊಡ್ಡ ರೂಮು ಸಂಪಾದಿಸಿಕೊಳ್ಳಬಾರದು. "

" ಅವರನ್ನು ಹೇಗೋ ಕೇಳುವುದು ರಾಜು. ನಿರ್ಗತಿಕನಾಗಿ ಬಂದ ನನಗೆ ಆಚಾರ್ಯರು ಆಶ್ರಯ ಕೊಟ್ಟರು. ಅವರನ್ನು ಎಷ್ಟೆಂದು ಪೀಡಿಸುವುದು?"

" ಈಗೇನು ಲಕ್ಷ್ಮೀಪುತ್ರನಾಗಿ ಹೋಗಿರುವೆಯೇನೋ ? "

" ಕ್ರಮೇಣ ಆಗುತ್ತಿದ್ದೇನೆ ರಾಜು. ' ಚಾಮುಂಡೇಶ್ವರಿ ' ವಿಗ್ರಹಕ್ಕೆ ಆಚಾರ್ಯರು ಒಂದು ಸಾವಿರ ರೂಪಾಯಿ ಕೊಡಬಂದರು. ಅದನ್ನು ಅವರಲ್ಲಿಯೇ ಬಿಟ್ಟಿದ್ದೇನೆ. "

" ಏಕೆ ? "

" ನಾಳೆ ನಾನು ಮುಂಬಯಿಗೆ ಹೋಗಬೇಕಾದರೆ ಹಣ ಬೇಕಾಗುತ್ತದಲ್ಲ. "

" ಪರವಾಗಿಲ್ಲ - ಲೆಕ್ಕಾಚಾರಸ್ಥ ಕಣಯ್ಯ ನೀನು. "

" ಥಾಂಪ್ಸನ್ ಸಾಹೇಬರೂ ಸಂಭಾವನೆ ಕೊಡುತ್ತಿದ್ದಾರೆ. ಒಂದು ಕೆಲಸ ಮಾಡಿಕೊಟ್ಟರೆ ನೂರು ರೂಪಾಯಿಗೆ ಕಡಿಮೆಯಿಲ್ಲದೆ ಕೊಡುತ್ತಾರೆ. ಈ ಎರಡು ಮೂರ್ತಿಗಳನ್ನು ಸಮರ್ಪಕವಾಗಿ ಮಾಡಿ ಅವರ ಕೈಗಿತ್ತರೆ ಸಾಕಷ್ಟು ಹಣ ಗಿಟ್ಟಬಹುದು. "

" ಈ ಕಿಷ್ಕಿಂದಾ ಪಟ್ಟಣದಲ್ಲಿ ಸಮರ್ಪಕವಾಗಿ ಹೇಗೆ ಕೆಲಸ ಮಾಡಬಲ್ಲೆಯೋ ಶ್ರೀಕಂಠ. ಮೊದಲು ಒಂದು ದೊಡ್ಡ ರೂಮು ಮಾಡಿಕೊಂಡು ನಾಲ್ಕು ಕುರ್ಚಿ, ಮೇಜು ತರಿಸಿ ಹಾಕಿಸಿಕೋ. ಥಾಂಪ್ಸನ್ನೋ, ಅವರ ಕಡೆಯವರೋ ಬಂದರೆ, ಅವರನ್ನು ಮಣ್ಣಿನ ಮುದ್ದೆಯ ಮೇಲೆ ಕೂಡಿಸುವೆಯೇನು ? "

" ಒಳ್ಳೆಯ ಸ್ಥಳದಲ್ಲಿ ರೂಮು ಸಿಕ್ಕುತ್ತದೆಯೇ ? "

"ನಿನಗಾಗಿಯೇ ಹೇಳಿ ಮಾಡಿಸಿದಂತಿರುವ ರೂಮು ಪತ್ತೆ ಮಾಡಿದ್ದೇನೆ."

"ಎಲ್ಲಪ್ಪಾ?"

"ಇಲ್ಲೇ ಹತ್ತಿರ - ನಜರಾಬಾದಿನಲ್ಲಿ ಸಾಹುಕಾರ ಮರಿಸ್ವಾಮಪ್ಪನವರು ತಮ್ಮ ಮಹಡಿಯನ್ನು ಒಬ್ಬ ಫೋಟೋಗ್ರಾಫ್‌ರಿಗೆ ಬಾಡಿಗೆಗೆ ಕೊಟ್ಟಿದ್ದರು. ಅವನೋ ಅಸಲು ಗಿರಾಕಿ. ಎಂಟು ತಿಂಗಳ ಬಾಡಿಗೆ ಕೊಡದೆ ಪರಾರಿಯಾದ. ಸಾಹುಕಾರರು ಅವನಿದ್ದ ಮಹಡಿಯ ಬೀಗ ಒಡಸಿ, ಮನೆ ವಶಕ್ಕೆ ತೆಗೆದುಕೊಳ್ಳಬೇಕಾದರೆ ಸಾಕು ಸಾಕಾಗಿ ಹೋಯಿತು. ಫೋಟೋಗ್ರಾಫರ್ ಅನುಕೂಲಕ್ಕಾಗಿ ಸಾಹುಕಾರರು ಮಹಡಿಯನ್ನೇ 'ಸ್ಟೂಡಿಯೋ' ಮಾಡಿಸಿದ್ದರು. ದೊಡ್ಡ ಹಜಾರವಿದೆ. ಅದರ ಪಕ್ಕದಲ್ಲಿ ೧೪' × ೧೦' ಒಂದು ರೂಮಿದೆ. ಈ ರೂಮನ್ನೇ ಫೋಟೋಗ್ರಾಫರ್ ತನ್ನ 'ಡಾರ್ಕ್ ರೂಮ್' ( Dark Room ) ಮಾಡಿಕೊಂಡಿದ್ದ. ಹಿಂದುಗಡೆ ಸ್ನಾನಗೃಹ, ಶೌಚಗೃಹಗಳಿವೆ. ಮಹಡಿಯ ಮೇಲೇ ನಲ್ಲಿ ( ನಳ ) ಇದೆ."

"ಬಾಡಿಗೆಯೆಷ್ಟು?"

"ನಲವತ್ತು ಹೇಳುತ್ತಾರೆ. ಮೂವತ್ತೈದಕ್ಕೆ ಒಪ್ಪಿಸಬಹುದು."

ರಾಜೂ ಸಲಹೆ ಶ್ರೀಕಂಠನಿಗೆ ಸೂಕ್ತವಾಗಿ ಕಂಡುಬಂದಿತು. ಫೋಟೋ ಸ್ಟೂಡಿಯೋಗಾಗಿಯೇ ನಿರ್ಮಿತವಾಗಿದ್ದ ಹಜಾರ ಸಿಕ್ಕುವುದು ವಿಶಿಷ್ಟ ಲಾಭವೆಂದೆನಿಸಿತು.

ಅಂದೇ ರಾಜೂ ಸಹಾಯದಿಂದ ಮನೆ ಗೊತ್ತು ಮಾಡಿಕೊಂಡು ಶ್ರೀಕಂಠ ಮುಂಗಡ ಹಣ ಪಾವತಿ ಮಾಡಿದ. ಎರಡು ದಿವಸಗಳಲ್ಲಿ ಹೊಸ ಗೃಹಕ್ಕೆ ಹೋಗಿ ನೆಲಸಿದುದೂ ಆಯಿತು.

ರಾಮನಾಥಯ್ಯನವರು ಯಾಲಕ್ಕಪ್ಪಾಚಾರ್ಯರ ಚತ್ರಕ್ಕೆ ಹೋಗಿ, ಅಲ್ಲಿ ವಿಚಾರ ಮಾಡಿಕೊಂಡು ಶ್ರೀಕಂಠನ ಹೊಸಗೃಹ ಪತ್ತೆ ಮಾಡಿಕೊಂಡು ಬಂದಿದ್ದರು. ಶ್ರೀಕಂಠ ಇಷ್ಟು ಬೇಗ ಚತ್ರ ಬಿಟ್ಟುದು ರಾಮನಾಥಯ್ಯನವರಿಗೆ ಸಮಂಜಸವಾಗಿ ಕಂಡುಬಂದಿರಲಿಲ್ಲ. ಅವರ ಆಕ್ಷೇಪಣೆಯನ್ನೆದುರಿಸಿ ಶ್ರೀಕಂಠ ತನ್ನ ಕಷ್ಟ ಸುಖಗಳನ್ನು ಬಿನ್ನವಿಸಿಕೊಂಡು, ಹೊಸ ಗೃಹದ ಅನುಕೂಲ್ಯಗಳನ್ನು ವಿವರಿಸಿದ ಮೇಲೆ ರಾಮನಾಥಯ್ಯನವರಿಗೆ ಸಮಾಧಾನವಾಯಿತು.

" ಒಳ್ಳೆ ಮುಹೂರ್ತದಲ್ಲಿ ದೇವಿ ವಿಗ್ರಹ ಮಾಡಿದೆ ಶ್ರೀಕಂಠ. ದೇವಿಯ ಕಟಾಕ್ಷ ನಿನ್ನ ಮೇಲೆ ಬಿದ್ದಿದೆ. ಯಶಸ್ಸು ದೊರಕಿತೆಂದು ಬೀಗಬಾರದು. ಜೀವನದಲ್ಲಿ ಅಭ್ಯುದಯದ ಮೆಟ್ಟಿಲೇರಿದಷ್ಟೂ ಮನುಷ್ಯ ನಯ, ವಿನಯ ಸಂಪನ್ನನಾಗಬೇಕು. ಇಂದು ಮುಗುಳ್ನಗೆ ಬೀರುತ್ತಿರುವ ಭಾಗ್ಯಲಕ್ಷ್ಮಿ ನಾಳೆ ಮುನಿದುಕೊಂಡು ಕೆಂಗಣ್ಣು ತೆರೆದಾಳು ಎನ್ನುವ ಚಿಂತೆ ಸದಾ ನಿನ್ನ ಮನಸ್ಸಿನಲ್ಲಿರಬೇಕು. "

" ನಾನು ಅಹಂಕಾರ ಪಡುತ್ತಿಲ್ಲ ಸರ್. ಯಾಲಕ್ಕಪ್ಪಾಚಾರ್ಯರ ಅಪ್ಪಣೆ ಪಡೆದೇ ಈ ಮನೆಗೆ ಬಂದೆ. ಅವರೂ, ತಾವೂ ನನಗೆ ಮಾಡಿರುವ ಉಪಕಾರವನ್ನು ನಾನು ಏಳೇಳು ಜನ್ಮಗಳಲ್ಲಿಯೂ ತೀರಿಸಲು ಸಾಧ್ಯವಿಲ್ಲ. "

" ಉಪಕಾರ ಸ್ಮರಣೆಯಿಂದ ಶ್ರೇಯಸ್ಸಿದೆ ಶ್ರೀಕಂಠ. ಉಪಕಾರ ಮಾಡಿದವರು ನಮಗೆ ಭಗವದ್ಸ್ವರೂಪರು. ಅದು ಕೃತಿಯ ಮೂಲಕ ಆಗಿರಬಹುದು; ಒಳ್ಳೆಯ ಮಾತಿನ ಮೂಲಕ ಆಗಿರಬಹುದು. ಅನುಕಂಪ, ಸಹೃದಯತೆ, ಕೃತಜ್ಞತೆ ಇವೇ ಮೊದಲಾದ ಕೆಲವು ಗುಣಗಳು ಮಾನವನನ್ನು ದೇವರನ್ನಾಗಿ ಮಾಡುತ್ತವೆ. "

ರಾಮನಾಥಯ್ಯನವರ ನಲ್ನುಡಿ, ಶ್ರೀಕಂಠನ ಹೃದಯದಲ್ಲಿ ಸುಪ್ತವಾಗಿದ್ದ ಕೆಲವು ಭಾವನೆಗಳನ್ನು ಹೊಡೆದೆಬ್ಬಿಸಿದವು.

' ಒಳ್ಳೆಯ ಮಾತೂ ಉಪಕಾರದ ಲಕ್ಷಣವೆಂದು ರಾಮನಾಥಯ್ಯನವರೆಂದರು. '

' ಒಳ್ಳೆಯ ಮಾತು — ಸ್ವರ್ಣನಿಗಿಂತಲೂ ಒಳ್ಳೆಯ ಮಾತು ಆಡಿದವರು ಯಾರು ?

' ನಾನಿಂದು ಅವಳನ್ನು ಮರೆತುಬಿಟ್ಟಿದ್ದೇನೆ. '

' ಸ್ವರ್ಣನಿಗೆಂಥ ಅಪಚಾರ ಮಾಡಿರುವೆ. '

ಎಂದು ಮಮ್ಮಲ ಮರುಗಿದ.

ಅಂದೇ ಸ್ವರ್ಣನಿಂದ ಪತ್ರ ಬಂದಿತು. ಚತ್ರದ ಆಳು ತಂದುಕೊಟ್ಟು ಹೋಗಿದ್ದ. ಕಾಗದವನ್ನೊಡೆದು ನೋಡಲು ಶ್ರೀಕಂಠನಿಗೆ ಧೈರ್ಯವಿಲ್ಲ. ನೋಡಬೇಕೆಂಬ ಕುತೂಹಲ ಉತ್ಕಟವಾಗಿ ಬಾಧಿಸುತ್ತಿತ್ತು; ಆದರೆ ಕಾಗದವನ್ನೊಡೆದು ನೋಡಲು ಮನಸ್ಸು ಹಿಂದೆಗೆಯುತ್ತಿತ್ತು.

ಮನಸ್ಸನ್ನು ಹತೋಟಿಗೆ ತಂದುಕೊಂಡು ಕಾಗದವನ್ನು ಒಡೆದು ನೋಡಲು ಅವನು ಮಹಾ ಸಾಹಸ ಮಾಡಬೇಕಾಯಿತು.

ಸ್ವರ್ಣ ತನ್ನ ಹೃದಯದ ಸಮಸ್ತ ನೋವು ನಲವನ್ನೂ ಕಾಗದದಲ್ಲಿ ತುಂಬಿದ್ದಳು.

' ಅಂದಿನ ಆ ರಮ್ಯ ದಿನಗಳ ಚಿತ್ರ – ಅವಲಕ್ಕಿಯ ಭಕ್ಷಣೆ – ಪ್ರಕೃತಿಯೊಂದಿಗೆ ಬೆರೆತು ವಿಹರಿಸಿದ ದೃಶ್ಯ.

ಪಾಳು ದೇವಾಲಯದಲ್ಲಿ ಶಿಲ್ಪಿಯ ಅವತಾರ.

ಮೈಸೂರಿಗೆ ಹೊರಡುವ ಮುನ್ನ ಇಬ್ಬರೂ ಮಾಡಿದ ನಿರ್ಧಾರ.

ಇಂದು - ಇಂದೊದಗಿರುವ ಧರ್ಮ ಸಂಕಟ!

ಸ್ವರ್ಣನ ಮದುವೆ ನಿಶ್ಚಯವಾಗಿತ್ತು.

ಎರಡು ವಾರಗಳಲ್ಲಿ ಮುಹೂರ್ತ.

' ಸ್ವರ್ಣ ಮದುವೆಯಾಗುವಳೇ – ಬೇರೊಬ್ಬನ ಸೊತ್ತಾಗುವಳೇ ? ತನ್ನ, ಸ್ವರ್ಣನ ಋಣಾನುಬಂಧ ಹರಿದು ಹೋಗುವ ಕಾಲ ಸಮೀಪಿಸುತ್ತಿದೆಯೇ ? '

' ಸ್ವರ್ಣ ಬೇರೆಯೊಬ್ಬರ ಸೊತ್ತಾಗಲು ಸಾಧ್ಯವಿಲ್ಲ! ಸಾಧ್ಯವಿಲ್ಲ! ಅವಳು ನನ್ನವಳು – ಎಂದಿಗೂ ನನ್ನವಳೇ ! '

' ಸ್ವರ್ಣನ ಮದುವೆ ನಿಶ್ಚಯವಾಗಿದೆ – ಅದನ್ನು ತಪ್ಪಿಸುವುದು ಹೇಗೆ? – ಈಗಲೂ ಬಂದು ಕರೆದುಕೊಂಡು ಹೋದರೆ ಬರಲು ಸಿದ್ಧಳಾಗಿರುವೆ ಎಂದು ಬರೆದಿದ್ದಾಳೆ – ಏನು ಮಾಡಲಿ ? '

ಏನು ಮಾಡಲಿ – ಏನು ಮಾಡಲಿ ? ಒಂದೇ ಪ್ರಶ್ನೆ – ಒಂದೇ ಚಿಂತೆ ಅವನನ್ನು ಸತತ ಕಾಡತೊಡಗಿತು.

ಸಂಜೆಗೆ ಬಂದ ರಾಜುವನ್ನೂ ಶ್ರೀಕಂಠ ಸರಿಯಾಗಿ ಮಾತನಾಡಿಸಲಿಲ್ಲ.

" ಇವತ್ತು ಪಾಠ ಬೇಡವೇ ಶ್ರೀಕಂಠ ? " ಎಂದು ರಾಜು ಕೇಳಿದ.

" ಇವತ್ತು ಏನೂ ಬೇಕಾಗಿಲ್ಲ ರಾಜೂ – ಪ್ರಪಂಚವೇ ಬೇಸರವಾಗಿದೆ."

" ಏಕೆ ? – ಏನಾಯಿತು ? "

" ಏಳು – ಇಲ್ಲಿಂದ ಮೊದಲು ಹೊರಡೋಣ. "

" ಎಲ್ಲಿಗೆ ? "

" ಎಲ್ಲಿಗಾದರೂ ಸರಿ – ಇಲ್ಲಿ ಕೂಡುವುದು ಬೇಡ. "

ಗೆಳೆಯರು ಹೊರಟರು. ಶ್ರೀಕಂಠನ ಮೌನಮುದ್ರೆ ಒಡೆಯುವ ಪ್ರಯತ್ನ ಮಾಡಲಿಲ್ಲ. ಇಬ್ಬರೂ ನಡೆಯುತ್ತ ಕುಕ್ಕನಹಳ್ಳಿಯ ಕೆರೆಯ ಬಳಿ ಬಂದು ಅಲ್ಲಿದ್ದ ಹಸಿರು ಹುಲ್ಲಿನ ಹಾಸಿನ ಮೇಲೆ ಕುಳಿತರು.

" ಏನಾಯಿತು ಶ್ರೀಕಂಠ. " ಎಂದು ರಾಜು ಕೇಳಿದ.

ಶ್ರೀಕಂಠ ಸಾವಕಾಶವಾಗಿ ತನ್ನ ಕಥೆ ನಿರೂಪಿಸಿದ. ಸ್ವರ್ಣನ ನಿರ್ವ್ಯಾಜ ಅಂತಃಕರಣ – ಅವಳ ಅಸೀಮ ಪ್ರೇಮ – ಅವಳ ಅಚ್ಚಳಿಯದ ನಂಬಿಕೆ ಯನ್ನು ನುಡುನುಡಿಯಲ್ಲಿ ಶ್ರೀಕಂಠ ಚಿತ್ರಿಸಿದ.

" ಕಾಗದ ಬಂದಿದೆ. ಎರಡು ವಾರಗಳಲ್ಲಿ ಸ್ವರ್ಣನಿಗೆ ಮದುವೆಯಾಗು ತ್ತದೆ. "

" ಅದು ನಿನ್ನ ಮನಸ್ಸಿಗೆ ವ್ಯಸನವನ್ನುಂಟು ಮಾಡಿರಬೇಕು. "

" ವಸ್ತುಸ್ಥಿತಿ ನೀನೇ ಬಲ್ಲೆ. "

" ವಯಸ್ಸಾದ ಹುಡುಗಿ ಲಗ್ನವಾಗದೆ ಮನೆಯಲ್ಲಿ ಕುಳಿತಿರುವುದಕ್ಕಾಗು ತ್ತದೆಯೇ ? "

" ವಯಸ್ಸಾಗಿದೆಯೆಂದು ಅವಳ ಮನಸ್ಸಿಗೆ ವಿರೋಧವಾಗಿ ಲಗ್ನಮಾಡು ವುದು ಯಾವ ನ್ಯಾಯ ? "

" ನೀನು ಅವಳನ್ನು ಪ್ರೀತಿಸುವ ವಿಷಯ ಅವಳ ತಂದೆ ತಾಯಿಗಳಿಗೆ ಗೊತ್ತಿದೆಯೇ ? "

" ಇಲ್ಲ – ಅದು ನಮ್ಮಿಬ್ಬರ ಗುಟ್ಟು. "

" ಹೋಗಲಿ – ಈಗಲೇ ಊರಿಗೆ ಹೋಗಿ ಸ್ವರ್ಣಳ ತಂದೆ ತಾಯಿ ಗಳನ್ನು ಒಪ್ಪಿಸದೆಯೇ ಅವಳನ್ನು ಮದುವೆಯಾಗಲು ಸಿದ್ಧವಾಗಿರುವೆಯಾ ? "

" ಈಗಲೇ ಹೇಗೆ ಸಾಧ್ಯ ? "

" ನಿನ್ನ ವಾದದಲ್ಲಿ ಸ್ವಲ್ಪವೂ ನ್ಯಾಯವಿಲ್ಲ ಶ್ರೀಕಂಠ. ಅವಳನ್ನು ನೀನೂ ಮದುವೆಯಾಗಲೊಲ್ಲೆ – ಇನ್ನೊಬ್ಬರು ಕೈಹಿಡಿಯುವುದನ್ನೂ ನೋಡಿ ಸಹಿಸಲಾರೆ. "

" ಹಾಗಲ್ಲ – ಅವಳು ಎರಡು ಮೂರು ವರ್ಷ ಮದುವೆಯಾಗದೆ ಇದ್ದರೆ ನಾನು ಮುಂಬಯಿ ಶಿಕ್ಷಣ ಮುಗಿಸಿಕೊಂಡು ಬಂದು ಮದುವೆಯಾಗು

ತ್ತೀನೆ. ”

“ ನಿನ್ನ ಮೂಗಿನ ನೇರಕ್ಕೇ ನೀನು ವಿಚಾರ ಮಾಡುತ್ತಿರುವೆ. ಅವಳೂ, ಅವಳ ತಂದೆ ತಾಯಿಗಳೂ ಏನು ವಿಚಾರ ಮಾಡಬಹುದೆನ್ನುವುದನ್ನೂ ಲಕ್ಷಕ್ಕೆ ತೆಗೆದುಕೊಳ್ಳಬೇಕು ನಿನ್ನ ಮಾತು ಕೇಳಿಕೊಂಡು ಅವರು ಕೂಡಿಬಂದಿರುವ ಸಂಬಂಧ ಕೆಡಿಸಲು ಸಿದ್ಧವಾಗುತ್ತಾರೆಯೇ ? ಮುಂಬಯಿಗೆ ಹೋಗಿ ನೀನು ಹಿಂದಿರುಗಿ ಬರುವುದು ಯಾವ ಲೆಕ್ಕ. ಅಲ್ಲಿಯೇ ಯಾರಲ್ಲಿಯಾದರೂ ನೀನು ಅನುರಕ್ತನಾಗಬಹುದು. ”

“ ಏನು ಹೇಳುತ್ತಿರುವೆ ರಾಜು ? ”

“ ಪ್ರತಿಪಕ್ಷದಲ್ಲಿ ನಿಂತು ವಾದ ಮಾಡುತ್ತಿದ್ದೇನೆ. ನನ್ನ ಪ್ರಶ್ನೆಗೆ ಉತ್ತರ ಹೇಳು. ”

“ ಹಾಗಾದರೆ........ ”

“ ಸ್ವರ್ಣನನ್ನು ಮರೆತು ಬಿಡುವುದೊಂದೇ ಮಾರ್ಗ. ವಿವಾಹವಾಗಲಿರುವ ಹುಡುಗಿಯ ಮನಸ್ಸನ್ನೇಕೆ ಅನವಶ್ಯಕವಾಗಿ ಕದಡುತ್ತೀ. ಇದೊಂದು ಶೈಶವ್ಯದ ಮಕ್ಕಳಾಟ ಎಂದು ಭಾವಿಸಿಕೋ – ಹಿಂದೆ ನಾನೊಂದು ಮಾತು ಹೇಳಿದ್ದೆ ನೆನಪಿರಬಹುದು – ಕಲಾವಿದನಿಗೆ ಅವನ ಕಲೆಯೇ ಮಡದಿ, ಮಕ್ಕಳು, ಸಂಸಾರ. ಕಲೆಯನ್ನುಳಿದು ಅವನು ಬೇರೆ ಯಾವದನ್ನೂ ವಿಚಾರ ಮಾಡಬಾರದು. ಲೋಕ ಬಯಸುವ ಹಾಗೂ ಅನುಸರಿಸುವ ಸುವ್ಯವಸ್ಥಿತ ಗೃಹಸ್ಥ ಜೀವನ ಕಲಾವಿದನಿಗಲ್ಲ. ಅವನು ಒಂದು ದೃಷ್ಟಿಯಲ್ಲಿ ಸಮಾಜ ಬಾಹಿರ. ಆದರೆ ಅವನ ಸತತ ಧ್ಯಾನ, ತಪಸ್ಸು, ಕಲಾಸೇವೆಯಿಲ್ಲದೆ ಜಗತ್ತು ಸಾಂಸ್ಕೃತ ಜೀವನ ನಡೆಸಲಾರದು. ಲೋಕವನ್ನು ತಿರ‍್ಯಗಾವಸ್ಥೆಯಿಂದ, ಮಾನವ ಸ್ಥಿತಿಗೆ ತರುವವನು ಕಲಾವಿದ. ಲೋಕಜೀವಿಗಳನ್ನು ಮಾನವರನ್ನಾಗಿ ಮಾಡುವುದಕ್ಕೆ ಕಲಾವಿದ ಮಾನವ ವರ್ಗದಿಂದ ದೂರವಿರಬೇಕಾಗುತ್ತದೆ. ”

ಕಟು ಕಷಾಯದಂತಿದ್ದ ರಾಜುವಿನ ಸತ್ಯ ನುಡಿಗಳನ್ನು ಜೀರ್ಣಿಸಿಕೊಳ್ಳುವುದು ಶ್ರೀಕಂಠನಿಗೆ ಸುಲಭಸಾಧ್ಯವಾಗಲಿಲ್ಲ. ಆದರೆ ಅವನು ಸೂಚಿಸಿದ ಪರಿಹಾರವಲ್ಲದೆ ಬೇರೆ ಪರಿಹಾರವೇ ಇರಲಿಲ್ಲ.

“ ಅವಳ ಕಾಗದಕ್ಕೆ ಉತ್ತರ ಬರೆಯಬೇಡವೆನ್ನುವೆಯಾ ? ”

“ ಏನೆಂದು ಬರೆಯುವೆಯಾ ? ಅವಳ ಕೈಹಿಡಿಯುವುದನ್ನು ನೀನು ನಿರ್ಧರಿಸುವುದಾದರೆ ಕಾಗದ ಬರೆಯುವ ಅವಶ್ಯವಿಲ್ಲ; ಅವಳ ಕೈ ಹಿಡಿಯದಿದ್ದರೆ ಕಾಗದ ಬರೆದೂ ಪ್ರಯೋಜನವಿಲ್ಲ. ”

ಶ್ರೀಕಂಠನಿಗೆ ದಿಕ್ಕು ತೋರದಂತಾಯಿತು. ಮನಸ್ಸು ಅತ್ತಿತ್ತ ತುಯ್ಯಲಾಡುತ್ತಿತ್ತು. ಎಲ್ಲವನ್ನೂ ತ್ಯಜಿಸಿ ಸ್ವರ್ಣನ ಬಳಿಗೆ ಹೋಗಲೊಮ್ಮೆ ನಿರ್ಧರಿಸುವನು – ಮತ್ತೊಮ್ಮೆ ತನ್ನ ಭವಿಷ್ಯ ಎದುರು ನಿಂತು ಆ ನಿರ್ಧಾರವನ್ನು ಸಡಲಿಸುತ್ತಿತ್ತು.

ಸ್ವರ್ಣ – ಭವಿಷ್ಯ !

ಸ್ವರ್ಣ ಬೇಕಾದಲ್ಲಿ ಭವಿಷ್ಯದ ಬಾಗಿಲು ಮುಚ್ಚಬೇಕು !

ಭವಿಷ್ಯ ಬೇಕಾದಲ್ಲಿ ಸ್ವರ್ಣನನ್ನು ಮರೆಯಬೇಕು !

ಗೆಳೆಯರು ಬಹಳ ಹೊತ್ತು ಅಲ್ಲಿಯೇ ಕುಳಿತರು. ರಾತ್ರಿ ಬೆಳೆಯುತ್ತಿತ್ತು. ಸಾಲು ಸಾಲಾಗಿ ಬೆಳಗುತ್ತಿದ್ದ ದೀಪಗಳು ಕೂಡ ಶ್ರೀಕಂಠನ ಮನಸ್ಸಿನ ಕತ್ತಲೆಯನ್ನು ನಿವಾರಿಸಲಾಗಲಿಲ್ಲ. ಅಸ್ಥಿರ ಮನಸ್ಸು ಗಾಢಾಂಧಕಾರದಲ್ಲಿ ಮುಖ ಮರೆಸಿಕೊಂಡಿತ್ತು.

೫

ನಿರ್ವಿಣ್ಣತೆಯ ಕರಾಳ ಮಡುವಿನಲ್ಲಿ ಧುಮ್ಮಿಕ್ಕಿದ ಶ್ರೀಕಂಠನಿಗೆ ಜೀವನವೇ ಬೇಸರವಾಯಿತು. ಕಲೆಯೂ ಬೇಡವಾಯಿತು. ಅಪೂರ್ಣವಾಗಿದ್ದ ಮೂರ್ತಿಗಳನ್ನು ಒದ್ದೆ ವಸ್ತ್ರಗಳು ಅಲಂಕರಿಸಿದ್ದವು. ಕೆರಿಗನ್ ಕಂಪೆನಿಯ ಹುಲಿಯ ತಲೆ, ನೀರುಗಾಣದೆ ಬಿರುಕು ಬಿಟ್ಟಿತ್ತು.

ಸ್ವರ್ಣ ತಿಳಿಸಿದ್ದ ತಾರೀಖು ಕಳೆದು ಹೋಗಿತ್ತು. ಅವಳ ಲಗ್ನಸಮಾರಂಭ ಅವನ ಕಣ್ಣುಮುಂದೆಯೇ ನಡೆದಂತಾಗಿತ್ತು.

ಮೂರ್ತಿಗಳಿಗೆ ಬೋದಿಗೆ ರಚಿಸಲು, ನಕ್ಷೆ ಕೇಳಲು ಬಂದಿದ್ದ ಶ್ರೀನಿವಾಸಲು ನಿರಾಶನಾಗಿ ಹಿಂದಿರುಗಬೇಕಾಯಿತು. ‘ ಕೆಲಸ ತಡವಾಗುತ್ತಿದೆ ’ ಎಂದು ಥಾಂಪ್ಸನ್ ಸಾಹೇಬರು ಎಚ್ಚರಿಸಿದ್ದರು. ಯಾಲಕ್ಕಪ್ಪಾಚಾರ್ಯರೂ ಶ್ರೀಕಂಠನನ್ನು ಹುರಿದುಂಬಿಸಲು ಯತ್ನಿಸಿ ವಿಫಲಮನೋರಥರಾಗಿದ್ದರು.

ದುಃಖದ ಕೀಟ ಶ್ರೀಕಂಠನ ದೇಹವನ್ನು ಒಳಗೇ ಕೊರೆಯುತ್ತಿತ್ತು. ಮುಖ ಬಾಡಿ, ಕಣ್ಣುಗಳು ಗುಳಿಬಿದ್ದಿದ್ದವು. ದೇಹ ಸವೆಯುತ್ತಿತ್ತು. ನಾಲ್ಕಾರು ದಿನದಿಂದವನು ನಾರಣಪ್ಪನ ಹೊಟೇಲು ಬಳಿ ಸುಳಿದಿರಲಿಲ್ಲ. ನಾರಣಪ್ಪನೇ ಹುಡುಕಿಕೊಂಡು ಬಂದು ತಿಂಡಿ ತಂದಿಟ್ಟು ಹೋಗಿದ್ದ. ಅಗ್ರಾಹ್ಯವಾಗಿದ್ದ ತಿಂಡಿ ಪದಾರ್ಥಗಳನ್ನು ಇರುವೆ, ನೊಣಗಳು ಮುತ್ತಿದ್ದವು.

ರಾಜು ಸಮಾಧಾನ ಹೇಳಿ ಹೇಳಿ ಬೇಸತ್ತಿದ್ದ. ಶ್ರೀಕಂಠನಿಗೆ ಯಾರೂ ಬೇಕಾಗಿರಲಿಲ್ಲ. ತನ್ನ ಕೋಣೆಯತ್ತ ಯಾರೂ ಸುಳಿಯದಿದ್ದರೆ ಸಾಕೆಂದು ಬಯಸುವನು. ಆದರೆ ರಾಜು ' ಬೆನ್ನಿನ ಭೇತಾಳ ' ವಾಗಿದ್ದ.

ರಾಜುವನ್ನು ದೂರವಿಡಬೇಕೆಂದು ಶ್ರೀಕಂಠ ಮುಖಗೊಟ್ಟು ಮಾತಾಡುತ್ತಿರಲಿಲ್ಲ. ರಾಜು ಅದನ್ನು ಗಮನಿಸುತ್ತಲೇ ಇರಲಿಲ್ಲ.

ಒಂದು ದಿನ ರಾಜು ನಾಲ್ಕಾರು ದಪ್ಪ ದಪ್ಪ ಪುಸ್ತಕಗಳನ್ನು ತಂದು ಶ್ರೀಕಂಠನ ರೂಮಿನಲ್ಲಿ ಹಾಕಿ, ಬೆವರು ಒರಸಿಕೊಳ್ಳುತ್ತ ಕುಳಿತುಕೊಂಡ.

ಅವು ಏನೆಂದು ತಿಳಿಯುವ ಕುತೂಹಲ ಕೂಡ ಶ್ರೀಕಂಠನಿಗಿರಲಿಲ್ಲ. ರಾಜು ಮೆಲ್ಲನೆ ಶ್ರೀಕಂಠನ ಸಮೀಪಕ್ಕೆ ಬಂದು ಕುಳಿತು ಗೋಪೀನಾಥರಾಯರ ಗ್ರಂಥ ತೆಗೆದು, ಅದರಲ್ಲಿದ್ದ ಶಿವಶಿಲ್ಪಗಳನ್ನು ತೋರಿಸಲಾರಂಭಿಸಿದ. ಒಮ್ಮೆ ಅತ್ತ ಹರಿದ ಶ್ರೀಕಂಠನ ಕಣ್ಣು ಅಲ್ಲಿಯೇ ನೆಟ್ಟುಬಿಟ್ಟಿತು. ಕೈಗೆ ಪುಸ್ತಕವನ್ನೆತ್ತಿಕೊಂಡು ನೋಡಿದ. ಗ್ರಂಥದಲ್ಲಿದ್ದ ದಿವ್ಯ ಶಿಲ್ಪ ಚಿತ್ರಗಳು ಅವನ ಚಿತ್ತವನ್ನು ಮುತ್ತಿದವು. ಚಿತ್ರಪರೀಕ್ಷೆಯಲ್ಲಿ ವಿಲೀನನಾಗಿದ್ದ ಗೆಳೆಯನನ್ನು ಮೆಲ್ಲನೆ

" ನಿನ್ನ ನಟರಾಜ ಏನಾಯಿತು ಶ್ರೀಕಂಠ " ಎಂದು ರಾಜು ಕೇಳಿದ.

" ಮಾಡಬೇಕು. ಥಾಂಪ್ಸನ್ ಸಾಹೇಬರು ಅವಸರ ಮಾಡುತ್ತಿದ್ದಾರೆ."

" ಮಾಡಬೇಕು ಎಂದು ಹೀಗೆ ಕಾಲಹರಣ ಮಾಡುತ್ತ ಕುಳಿತರೆ.... "

" ನಟರಾಜನ ಕಲ್ಪನೆಯೇ ಸ್ಪಷ್ಟವಾಗಿ ಮನಸ್ಸಿನಲ್ಲಿ ಮೂಡಿಲ್ಲ. "

" ನೀನು ಮನಸ್ಸನ್ನು ಅತ್ತ ತಿರುಗಿಸಿಲ್ಲ. " '

" ಹೌದು - ನನಗೆ ಚಿತ್ತ ವಿಕಲ್ಪವಾಗಿದೆ. "

" ಮೊದಲು ಏಳು – ಹೊರಗೆ ಹೋಗಿ ಹೊಟ್ಟೆಗೇನಾದರೂ ಹಾಕಿಕೊಂಡು ಬಂದು ಕೂಡೋಣ. "

ವಿನಮ್ರ ಶಿಶುವಿನಂತೆ ಶ್ರೀಕಂಠ ಎದ್ದು ರಾಜು ಜತೆಯಲ್ಲಿ ಹೊರಟ.

ಇಬ್ಬರೂ ' ಇಂದ್ರಭವನ ' ಸೇರಿ ಕಂಠಪೂರ್ತಿ ದೋಸೆ, ಜಾಮೂನ್ ಹೊಡೆದು ಮೇಲೆ ಎರಡೆರಡು ಕಪ್ಪು ಕಾಫಿ ಸುರಿದರು.

ಮನೆಗೆ ಹಿಂದಿರುಗುವಾಗ ರಾಜು ಬ್ರೆಡ್ಡು, ಬಿಸ್ಕತ್ತು, ಜೆಲ್ಲಿ, ಹಣ್ಣು ಗಳನ್ನು ಕೊಂಡ. ಗೆಳೆಯರು ಶ್ರೀಕಂಠನ ರೂಮಿಗೆ ಹಿಂದಿರುಗಿ ಬಂದು ಕುಳಿತರು.

ಹಸಿವು ಹಿಂಗಲು ಶ್ರೀಕಂಠನ ಮೈಗೆ ಸ್ವಲ್ಪ ಬಲ ಬಂದಿತ್ತು. ಮನಸ್ಸಿನ ಮೇಲೆ ಮುಸುಕಿದ್ದ ಮೋಡ ಸ್ವಲ್ಪ ಸರಿದಂತಾಗಿತ್ತು.

ಶ್ರೀಕಂಠ ಆನಂದಕುಮಾರ ಸ್ವಾಮಿಯವರ ' ಶಿವನೃತ್ಯ ' ( Dance of Shiva ) ಗ್ರಂಥವನ್ನು ಕೈಗೆತ್ತಿಕೊಂಡು ಅದರಲ್ಲಿ ಪ್ರಕಟವಾಗಿದ್ದ ಶಿವನೃತ್ಯ ಶಿಲ್ಪ ಚಿತ್ರವನ್ನು ಎವೆಯಿಕ್ಕದೆ ನೋಡುತ್ತ ಕುಳಿತ. ಚಿತ್ರ ಜೀವ ತಳೆದು ಕುಣಿಯಲು ಮೊದಲು ಮಾಡಿತು. ಗೆಜ್ಜೆಗಳ ಘುಲುಘುಲು - ಗತಿ ಪ್ರಭೇದ - ಮುದ್ರಾ ಪ್ರದರ್ಶನ - ಎಲ್ಲಕ್ಕೂ ಹೆಚ್ಚಾಗಿ ಭಗವಂತನ ದಿವ್ಯ ಮಂದಹಾಸ.

ಲೋಕಕಲ್ಯಾಣ ಮೂರ್ತಿ ಶಿವ, ಇಂದು ಕಲಾವಿದನೊಬ್ಬನ ಆತ್ಮೋ ದ್ಧಾರಕ್ಕಾಗಿ ಕುಣಿಯುತ್ತಿದ್ದ.

ಅಂದು ಲೋಕವನ್ನು ಕಬಳಿಸುತ್ತಿದ್ದ ಅಪಸ್ಮಾರ ಪುರುಷನ ನಾಶಕ್ಕಾಗಿ ಕುಣಿದ ಶಿವ, ಇಂದು ಕಲಾವಿದನ ಮಾನಸಿಕ ಅಪಸ್ಮಾರವನ್ನು ತೊಡೆದು ಹಾಕಲು ಕುಣಿಯುತ್ತಿದ್ದ.

ಚಿತ್ರವನ್ನು ನೋಡಿದಷ್ಟೂ ನೋಡಬೇಕೆನಿಸುತ್ತಿತ್ತು.

ಶ್ರೀಕಂಠ ಒಮ್ಮೆ ಕತ್ತೆತ್ತಿ

" ಶಿವನೃತ್ಯದ ಮೇಲೆ ಗ್ರಂಥಗಳಲ್ಲಿ ಏನು ಬಂದಿದೆ ಓದು ರಾಜು " ಎಂದ.

ರಾಜುವಿನ ಮುಖದಲ್ಲಿ ಗೆಲುವಿನ ಸುಮ್ಮಾನ ಚಿಮ್ಮಿತು. ದುಃಖಕ್ಕೆ ಈಡಾಗಿ ನಾಶದದಾರಿ ಹಿಡಿದಿದ್ದ ಗೆಳೆಯನ ಮನಸ್ಸು ಕಲಾಪ್ರಭಾವದಿಂದ ಚೇತೋಹಾರಿಯಾಗಿತ್ತು. ಭಗವಂತನಿಂದ ವಿಮುಖವಾಗಿದ್ದ ಮನಸ್ಸು ಭಗವಂತನತ್ತ ತಿರುಗಿತ್ತು. ಪತನವನ್ನರಸುತ್ತಿದ್ದ ಮನಸ್ಸು ಅಭ್ಯುದಯದ ಹೆಬ್ಬಾಗಿಲಿಗೆ ನಡೆದಿತ್ತು.

ರಾಜು ಗೋಪೀನಾಥರಾಯರ " ಹಿಂದೂ ಪ್ರತಿಮಾ ಲಕ್ಷಣ"

(Elements of Hindu Iconography) ಗ್ರಂಥವನ್ನು ತೆರೆದಿಟ್ಟುಕೊಂಡು, ಶಿವನೃತ್ಯವನ್ನು ವರ್ಣಿಸಲಾರಂಭಿಸಿದ.

" ನೃತ್ಯಕಲಾಪ್ರವೀಣನಾದ 'ಶಿವ, ಮೈಮರೆತು, ಆನಂದ ತುಂದಿಲನಾಗಿ ರುದ್ರಭೂಮಿಯಲ್ಲಿ ನರ್ತಿಸುತ್ತಾನೆ. ಅವನು ನೂರೆಂಟು ಬಗೆಯ ನೃತ್ಯಗಳಲ್ಲಿ ಪ್ರವೀಣನೆಂದು ಶೈವಾಗಮಗಳು ಸಾರುತ್ತಿವೆ. ನಾಟ್ಯಶಾಸ್ತ್ರ ಕರ್ತೃವಾದ ಭರತಮುನಿಯೂ ನೂರೆಂಟು ಬಗೆಯ ನೃತ್ಯಗಳನ್ನು ಸೂಚಿಸುತ್ತಾನೆ. ಈ ನೂರೆಂಟು ಮಾದರಿಗಳೂ ಚಿದಂಬರದ ನಟರಾಜ ದೇವಾಲಯದ ಗೋಪುರದ ಮೇಲೆ ಚಿತ್ರಿಸಲ್ಪಟ್ಟಿವೆ.

ಶೈವರು **ಚಿದಂಬರ**ವನ್ನು ಬಹುವಾಗಿ ಮಾನಿಸುತ್ತಾರೆ. ಸಾಮಾನ್ಯವಾಗಿ ದಕ್ಷಿಣಭಾರತದ ಎಲ್ಲ ಶೈವ ದೇವಾಲಯಗಳಲ್ಲಿಯೂ '**ನಟನ ಸಭಾ ಅಥವಾ ಸಭಾ**' ಎಂಬ ಹೆಸರಿನಲ್ಲಿ ಪ್ರತ್ಯೇಕಸ್ಥಳ ನಟರಾಜನಿಗೆ ಮೀಸಲಾಗಿರುತ್ತದೆ. ಚಿದಂಬರದ ದೇವಾಲಯದಲ್ಲಿರುವ 'ಸಭೆ'ಗೆ ವಿಶೇಷ ಮಹತ್ವವುಂಟು. ತಮಿಳುಸಂತ ತಿರುಜ್ಞಾನ ಸಂಬಧನ ಕಾಲಕ್ಕೆ-ಅಂದರೆ ಕ್ರಿ. ಶ. ಏಳನೂರರ ಮಧ್ಯಭಾಗ - ಚಿದಂಬರ ಸುವಿಖ್ಯಾತವಾಗಿತ್ತು. ಪ್ರಾಚೀನಕಾಲದಿಂದಲೂ ಚಿದಂಬರದ ನಟರಾಜಸ್ವಾಮಿ ಚೋಳರಾಜರ ಮನೆದೇವರು. ಪರಮಭಕ್ತರಾದ ಚೋಳರಸರು ಚಿದಂಬರದ ಸಭಾಮಂದಿರಕ್ಕೆ ಕನಕಲೇಪ ಮಾಡಿಸಿದ್ದರು. ಆದುದರಿಂದಲೇ ಅದಕ್ಕೆ **ಕನಕಸಭೆ**ಯೆಂದೂ, ನಟರಾಜನಿಗೆ **ಕನಕಸಭಾಪತಿ**ಯೆಂದೂ ಹೆಸರು ಬಂದಿತು. ಪಾಂಡ್ಯರು ತಮ್ಮ ರಾಜಧಾನಿಯಾದ ಮಧುರೆಯಲ್ಲಿನ ಸಭೆಗೆ ರಜತಲೇಪನ ಮಾಡಿಸಿದ್ದುದರಿಂದ ಅದಕ್ಕೆ **ರಜತಸಭೆ**ಯೆಂಬ ಹೆಸರು ಬಂದಿತು.

ಚಿದಂಬರ ಪ್ರಾಚೀನಕಾಲದಿಂದ ತಮಿಳು ವಿದ್ವಾಂಸರ ಆಶ್ರಯ ಸ್ಥಾನವಾಗಿದೆ. ಅರವತ್ತುಮೂರು ಪುರಾತನ ಶೈವಸಂತರ ಚರಿತ್ರೆಗಳನ್ನು ಬರೆದ **ಶೆಕ್ಕಿಲಾರ್** ತನ್ನ ದಿವ್ಯಗ್ರಂಥವನ್ನು ಈ ದೇವಾಲಯದಲ್ಲಿಯೇ ಬರೆದು ಪ್ರಸಿದ್ಧಿಪಡಿಸಿದುದಾಗಿ ಪ್ರತೀತಿಯಿದೆ. ಅನೇಕ ಶೈವಸಿದ್ಧಾಂತ ಗ್ರಂಥಗಳೂ ಈ ದೇವಾಲಯದಲ್ಲಿ ಬರೆಯಲ್ಪಟ್ಟವು. ತಮಿಳು ಸಂತ ಮಾಣಿಕ್ಯವಾಚಕರ್ ತನ್ನ ಜೀವನ ಸಂಧ್ಯೆಯನ್ನು ಚಿದಂಬರದ ನಟರಾಜ ದೇವಾಲಯದಲ್ಲಿ ಕಳೆದ ಜ್ಞಾನಸಂಬಂಧರ್, ನಂದ ಮೊದಲಾದ ಸಂತರು ಚಿದಂಬರದ ನಟರಾಜನಲ್ಲಿ

ಐಕ್ಯರಾದರೆಂದು ಕಾವ್ಯ, ಪುರಾಣಗಳು ಹೇಳುತ್ತಿವೆ.

ನಟರಾಜ ಶಿಲ್ಪದ ಲಕ್ಷಣಗಳನ್ನು ಆಗಮಗಳು ಹೀಗೆ ವರ್ಣಿಸುತ್ತವೆ. ಮುಂದುಗಡೆಯ ಶಿವನ ವಾಮಹಸ್ತ ದಂಡಹಸ್ತ ಅಥವಾ ಗಜಹಸ್ತ ಮುದ್ರೆಯಲ್ಲಿ ದೇಹದ ಮುಂದಿರಬೇಕು. ಹಿಂದುಗಡೆಯ ವಾಮಹಸ್ತ ಎಲೆಯ ಮೇಲಾಗಲಿ, ಅಂಗೈಮೇಲಾಗಲಿ ಅಗ್ನಿಯನ್ನು ಧರಿಸಿರಬೇಕು. ಮುಂದುಗಡೆಯ ಬಲಗೈ ಅಭಯಮುದ್ರೆ ತೋರಿಸುತ್ತಿರಬೇಕು. ಮುಂಗೈಮೇಲೆ ಸರ್ಪವಲಯವಿರಬೇಕು. ಹಿಂದುಗಡೆಯ ಬಲಗೈಯಲ್ಲಿ ಡಮರುವಿರಬೇಕು. ಬಲಗಾಲು ಸ್ವಲ್ಪಬಾಗಿದ್ದು, ಬಲಪಾದ ಅಪಸ್ಮಾರ ಪುರುಷನನ್ನು ಮೆಟ್ಟಿರಬೇಕು. ಬಲ ಮೊಣಗಾಲು ನಾಭೀಸೂತ್ರದ ಸಮೀಪಕ್ಕೆ ಹೋಗಬೇಕು. ಎಡಗಾಲು ಸ್ವಲ್ಪ ಎತ್ತಲ್ಪಟ್ಟು ಬಲಗಾಲಿನಕಡೆ ತಿರುಗಿರಬೇಕು. ಶಿವನ ತಲೆಯಮೇಲೆ ಹೂಮಾಲೆಗಳಿಂದಲಂಕೃತವಾದ ಜಟಾಮಕುಟ, ಹಲ್ಲುಗಿಂಜುತ್ತಿರುವ ತಲೆಬುರುಡೆ, ಅರ್ಧಚಂದ್ರಗಳಿರಬೇಕು. ಜಟಾಮಕುಟದಿಂದ ಇರ್ಕೆಡೆಗಳಲ್ಲಿಯೂ ೫, ೬, ೭, ೧೧ ಜಟೆಗಳು ಉದ್ದವಾಗಿಯಾಗಲಿ, ವರ್ತುಲಾಕಾರವಾಗಿಯಾಗಲಿ ಇಳಿಬಿದ್ದಿರಬೇಕು. ಶಿವನ ದೇಹದಮೇಲೆ ಯಜ್ಞೋಪವೀತ, ಉರಾಸೂತ್ರಗಳೂ, ಮಧ್ಯದ ಬೆರಳನ್ನುಳಿದು ಇತರ ಬೆರಳುಗಳಲ್ಲಿ ಉಂಗುರಗಳೂ, ಹೆಬ್ಬೆರಳನ್ನುಳಿದು ಇತರ ಕಾಲ್ಬೆರಳುಗಳಲ್ಲಿ ಉಂಗುರಗಳೂ ಪಾದದ ಕೀಲುಗಳಮೇಲೆ ನೂಪುರಗಳೂ ಇರಬೇಕು. ಶಿವನ ಎದೆಯಮೇಲೆ ಕುಂಕುಮ ಕೇಶರಿಯನ್ನೂ ಮೈಗೆಲ್ಲಾ ಭಸ್ಮವನ್ನೂ ಲೇಪಿಸಬೇಕು.

ಶಿವನ ತುಳಿತಕ್ಕೆ ಸಿಕ್ಕಿರುವ ಅಪಸ್ಮಾರ ಪುರುಷನ ತಲೆ ಬಲಮಗ್ಗುಲಿಗೂ, ಅವನ ಕಾಲುಗಳು ಶಿವನ ವಾಮಭಾಗದಲ್ಲಿಯೂ ಇರಬೇಕು. ಅವನ ಬಣ್ಣ ಕಪ್ಪು. ಅವನು ಒಂದು ಸರ್ಪದ ಜತೆ ಆಡುತ್ತಿದ್ದಾನೆ. ಅವನ ಬೆರಳುಗಳು ಕೂಡಿಕೊಂಡು ನಾಗಮುದ್ರೆ ತೋರಿಸುತ್ತಿವೆ.

ಶಿವನೃತ್ಯದ ಮೂಲೋದ್ದೇಶಕ್ಕೆ ಸಂಬಂಧಿಸದಿದ್ದರೂ ಸ್ವಾರಸ್ಯವಾಗಿರುವ ಒಂದು ಕಥೆ ಪ್ರಚಾರದಲ್ಲಿದೆ. ತಾರಕವನದಲ್ಲಿ ಕೆಲವು ಋಷಿಗಳು ಮಿಮಾಂಸಕಾರರಾಗಿ, ನಾಸ್ತಿಕರಾಗಿದ್ದರು. ಅವರನ್ನು ವಾದದಲ್ಲಿ ಗೆಲ್ಲಲು ಶಿವ ಹೊರಡುತ್ತಾನೆ. ಸುಂದರ ಸ್ತ್ರೀಯಂತೆ ವೇಷಧರಿಸಿ ವಿಷ್ಣುವೂ ಅವನ ಜತೆ ಹೊರಡುತ್ತಾನೆ. ಋಷಿಗಳಲ್ಲಿಯೇ ವಾದ, ಪ್ರತಿವಾದ ಆರಂಭವಾಗಿ, ಕೊನೆಗೆ ಎಲ್ಲರ

ಆಗ್ರಹವೂ ಶಿವನಕಡೆ ತಿರುಗುತ್ತದೆ. ಶಿವ ವಾದದಲ್ಲಿ ಸೋಲದಿರಲು, ಕುಪಿತ ರಾದ ಋಷಿಗಳು ಮಾಯಾಮಂತ್ರಗಳಿಂದ ಅವನನ್ನು ಮಣಿಸಲೆತ್ನಿಸುತ್ತಾರೆ. ಒಂದು ಭಯಂಕರ ವ್ಯಾಘ್ರವನ್ನು ಸೃಷ್ಟಿಸಿ ಶಿವನ ಮೇಲೆ ಬಿಡುತ್ತಾರೆ. ಶಿವ ಅದನ್ನು ಹಿಡಿದು, ತನ್ನ ಕಿರುಬೆರಳಿನ ಉಗುರಿನಿಂದ ಅದರ ಚರ್ಮವನ್ನು ಬಿಡಿಸಿ, ವಸ್ತ್ರವಾಗಿ ಧರಿಸುತ್ತಾನೆ. ತಮಗಾದ ಪರಾಜಯವನ್ನು ಲಕ್ಷಿಸದೆ ಋಷಿಗಳು ಒಂದು ಉಗ್ರೋರಗವನ್ನು ಸೃಷ್ಟಿಸಿ ಶಿವನಮೇಲೆ ಬಿಡುತ್ತಾರೆ. ಶಿವ ಲೀಲಾಜಾಲವಾಗಿ ಅದನ್ನು ಹೂಮಾಲೆಯಂತೆ ಕೊರಳಲ್ಲಿ ಧರಿಸಿ ಕುಣಿಯು ಲಾರಂಭಿಸುತ್ತಾನೆ. ಕೊನೆಯದಾಗಿ ಋಷಿಗಳು ಅಪಸ್ಮಾರಪುರುಷನೆಂಬ ಮಹಾ ರಾಕ್ಷಸನನ್ನು ಸೃಷ್ಟಿಸಿ ಶಿವನ ವಿರುದ್ಧ ಸೆಣಸಲು ಅಟ್ಟುತ್ತಾರೆ. ಶಿವ ಅವನ ಮೇಲೆ ತನ್ನ ಹೆಬ್ಬೆರಳಿನ ಕೊನೆ ಊರಲು, ರಾಕ್ಷಸನ, ಸೊಂಟಮುರಿದು ಅವನು ನೆಲದಮೇಲೆ ಬಿದ್ದು ಒದ್ದಾಡುತ್ತಾನೆ. ಕೊನೆಯ ಶತ್ರುವೂ ಪರಿಹಾರ ವಾಗಲು ದೇವತೆಗಳು, ಋಷಿಗಳು ಆನಂದಿಸುವಂತೆ ಶಿವ ಹಸನ್ಮುಖಿಯಾಗಿ ಕುಣಿಯುತ್ತಾನೆ.

'ಶಿವನೃತ್ಯ' ಸಾಂಕೇತಿಕವೂ ತಾತ್ತ್ವಿಕವೂ ಆದ ಅರ್ಥ ಪಡೆದಿದೆ. ಲಯಕಾರಕನಾದ ಶಿವ ಸ್ಮಶಾನಪ್ರಿಯನಾಗಿದ್ದಾನೆ. ಅವನು ನಾಶ ಮಾಡುವು ದೇನನ್ನು? ಕಲ್ಪಾಂತರದ ಸ್ವರ್ಗ ಮರ್ತ್ಯ ಪಾತಾಳಗಳನ್ನು ಮಾತ್ರವೇ ಅಲ್ಲ. ಜೀವನನ್ನು ಸುತ್ತುಗಟ್ಟಿರುವ ಭಾವಬಂಧನಗಳನ್ನೂ ನಾಶಮಾಡುತ್ತಾನೆ. ಇಲ್ಲಿ ಸ್ಮಶಾನವೆಂದರೆ, ಹೆಣಗಳನ್ನು ಸುಡುವ ಭೂಮಿಯಲ್ಲ - ಭಕ್ತನ ಹೃದಯ ಸದ್ಭಕ್ತಿ ಸತ್ಕ್ರಿಯೆ, ಸದಾಚರಣೆಯಿಲ್ಲದ ಭಕ್ತನ ಹೃದಯ ಸ್ಮಶಾನಸದೃಶವಾ ದುದು. ಭಕ್ತನ ಉಪಾಧಿಗಳನ್ನು, ಅಜ್ಞಾನವನ್ನು, ತಮಸ್ಸನ್ನು ಶಿವ ಸುಡು ತ್ತಾನೆ.

ಶೈವಸಿದ್ಧಾಂತದಲ್ಲಿ ವಿಶೇಷಾರ್ಥಪಡೆದಿರುವ ಶಿವಪಂಚಾಕ್ಷರಿ ಮಂತ್ರಕ್ಕೂ ಶಿವನೃತ್ಯಕ್ಕೂ ನಿಕಟಸಂಬಂಧವಿದೆ. ಸಿದ್ಧಾಂತ ಗ್ರಂಥಗಳು **ಶಿ—ವಾ—ಯ ನ—ಮಃ** ಪಂಚಾಕ್ಷರಿಯ ಸ್ಥಾನನಿರ್ದೇಶವನ್ನಿಂತು ಮಾಡಿವೆ: ಅವನ ಪಾದ ಗಳಲ್ಲಿ **ನ,** ನಾಭಿಯಲ್ಲಿ **ಮ,** ಬುಜಗಳಲ್ಲಿ **ಶಿ,** ಮುಖದಲ್ಲಿ **ವಾ,** ಶಿರದಲ್ಲಿ **ಯ,** ಬೀಜಾಕ್ಷರಗಳು ನೆಲಸಿವೆ

ಪಂಚಾಕ್ಷರಿಯ ಧ್ಯಾನವನ್ನು ಬೋಧಿಸುವ ಶೈವಸಿದ್ಧಾಂತ ಇಂತು

ಅದರ ಸ್ಥಾನ ನಿರ್ದೇಶ ಮಾಡುತ್ತದೆ. ಡಮರು ಹಿಡಿದಿರುವ ಕೈ **ಶಿ**, ಊರ್ಧ್ವಕ್ಕೆ ಚಾಚಿರುವ ಕೈ **ವಾ**, ಅಭಯಮುದ್ರೆ ತೋರಿಸುತ್ತಿರುವ ಕೈ **ಯ,** ಅಗ್ನಿಹಿಡಿದಿರುವ ಕೈ **ನ,** ರಾಕ್ಷಸನನ್ನು ಒತ್ತಿಹಿಡಿದಿರುವ ಪಾದ **ಮ.**

ಈ ಪಂಚಾಕ್ಷರಗಳು ಭಗವಂತ, ಶಕ್ತಿ, ಆತ್ಮ, ತಿರೋಭಾವ ಮಾಲಾಗಳಾಗಿವೆ. ಈ ಪಂಚಾಕ್ಷರಗಳನ್ನು ಕುರಿತು ಧ್ಯಾನಿಸುವವರು ಕತ್ತಲೆ ಬೆಳಕಿಲ್ಲದ, ಶಿವಶಕ್ತಿ ಸಮರಸವಾದ ದಿವ್ಯಲೋಕಕ್ಕೆ ಹೋಗುತ್ತಾರೆ.

ಶಿವನೃತ್ಯ ಶಿವನ ಪಂಚಕ್ರಿಯೆಗಳ ಸಂಕೇತವಾಗಿದೆ :

**ಸೃಷ್ಟಿ** : ಹುಟ್ಟು, ಉತ್ಕ್ರಾಂತಿ. : ( ಬ್ರಹ್ಮ )
**ಸ್ಥಿತಿ** : ರಕ್ಷಣೆ, ಉಳಿವು. : ( ವಿಷ್ಣು )
**ಸಂಹಾರ** : ವಿನಾಶ. : ( ರುದ್ರ )
**ತಿರೋಭಾವ** : ಆವರಣ, ಮಾಯೆ. : ( ಮಹೇಶ್ವರ )
**ಅನುಗ್ರಹ** : ಬಿಡುಗಡೆ, ಮುಕ್ತಿ, ಕೃಪೆ. : ( ಸದಾಶಿವ )

ಡಮರುವಿನಿಂದ ಸೃಷ್ಟಿ, ಅಭಯಮುದ್ರೆಯಿಂದ ಸ್ಥಿತಿ, ಅಗ್ನಿಯಿಂದ ಸಂಹಾರ, ಊರ್ಧ್ವಪಾದದಿಂದ ಮುಕ್ತಿ ಉತ್ಪನ್ನವಾಗುತ್ತವೆ. ' ಶಿವನೃತ್ಯ 'ದ ಸಂಕೇತವನ್ನು ಸರ್ ಜಾನ್ ವುಡರಾಫ್ ಅವರು ತಮ್ಮ ' ತಂತ್ರ ತತ್ತ್ವ ' ಗ್ರಂಥದಲ್ಲಿ ಸೊಗಸಾಗಿ ವರ್ಣಿಸಿದ್ದಾರೆ :

" ಈ ವಿಶ್ವನಾಟಕದಲ್ಲಿ ಅವನೇ ಮುಖ್ಯನಾಯಕ, ಮುಖ್ಯ ನಾಯಿಕೆ. ಈ ನಾಟಕ ನಾಯಕ, ನಾಯಿಕೆಯರ ಸಮಾಗಮದಿಂದ ಆರಂಭವಾಯಿತು. ಕಾಲಾಂತ್ಯದ ರಾತ್ರಿ ಅವನ ಅಮೋಘ ಸಂಕಲ್ಪದಂತೆ ಕೊನೆಗಾಣುತ್ತದೆ. ಪ್ರಾಚೀನ ಶೈವ ಶಿಲ್ಪಗಳಲ್ಲಿ ಈ ನೃತ್ಯಮೂರ್ತಿಯನ್ನು ನಾಲ್ಕು ಕೈಗಳ, ನಾನಾಭರಣಾಲಂಕೃತ ಮೂರ್ತಿಯನ್ನಾಗಿ ಚಿತ್ರಿಸುವ ಪರಿಪಾಠವಿದೆ. ಅವನ ನೀಳಜಡೆಗಳು ನೃತ್ಯಗತಿಗನುಸಾರವಾಗಿ ನರ್ತಿಸುತ್ತವೆ. ಈ ಪುರಾತನ ಯೋಗಿಯ ಜಟಾಮಕುಟದಲ್ಲಿ ಪವಿತ್ರ ಜಾಹ್ನವಿ, ಹೆಡೆಯೆತ್ತಿದ್ದ ಸರ್ಪ, ನರಕಪಾಲ ಕಂಡು ಬರುತ್ತವೆ. ಶಿರದಮೇಲೆ ಅರ್ಧಚಂದ್ರ ವಿರಾಜಿಸುತ್ತಿದ್ದಾನೆ. ಬಲಗಿವಿಯಲ್ಲಿ ಪುರುಷನ ಕರ್ಣಾಭರಣವೂ ; ಎಡಗಿವಿಯಲ್ಲಿ ಸ್ತ್ರೀಯ ಕರ್ಣಾಭರಣವೂ ತೂಗಾಡುತ್ತಿವೆ. ಹಾರಗಳು, ತೋಳಬಂದಿ, ಉಂಗುರಗಳು, ನೂಪುರ, ಒಡ್ಯಾಣಗಳನ್ನು ಯೋಗಿರಾಜ ಧರಿಸಿದ್ದಾನೆ. ವ್ಯಾಘ್ರಚರ್ಮವನ್ನು ಸೊಂಟಕ್ಕೆ ಸುತ್ತಿಕೊಂಡಿರುವ

ಹಾಗಿರುವ ಚಲ್ಲಣ ಧರಿಸಿ, ಅವನು ಉತ್ತರೀಯ ಹೊದೆದುಕೊಂಡಿದ್ದಾನೆ. ಯಜ್ಞೋಪವೀತ ಧರಿಸಿದ್ದಾನೆ. ಒಂದು ಬಲಗೈಯಲ್ಲಿ ಡಮರು ಹಿಡಿದು, ಇನ್ನೊಂದು ಬಲಗೈಯಲ್ಲಿ ಅಭಯ ಪ್ರಧಾನಮಾಡುತ್ತಿದ್ದಾನೆ. ಒಂದು ಎಡಗೈಯಲ್ಲಿ ಪವಿತ್ರಾಗ್ನಿ ಉಗಿಯುತ್ತಿದೆ; ಇನ್ನೊಂದು ಎಡಗೈ ಭೂಗತನಾಗಿರುವ ಅಪಸ್ಮಾರ ಪುರುಷನಕಡೆ ತಿರುಗಿದೆ. ಎಡಗಾಲು ದೈತ್ಯನ ಮೇಲಿದೆ, ಬಲಗಾಲು ಪಕ್ಕಕ್ಕೆ ತಿರುಗಿದೆ. ಈ ಮೂರ್ತಿಗೆ ಪದ್ಮಪೀಠವನ್ನೂ, ಜ್ವಲಂತ ಪ್ರಭಾವಳಿಯನ್ನೂ ಕೊಡುವ ಪಾಡಿಕೆಯಿದೆ. ಡಮರು, ಅಗ್ನಿಯನ್ನು ಹಿಡಿದಿರುವ ಕೈಗಳು ಪ್ರಭಾವಳಿಯನ್ನು ಸ್ಪರ್ಶಿಸುತ್ತಿರುತ್ತವೆ."

'ಶಿವನೃತ್ಯ' ದ ಸಂಕೇತವನ್ನು ಆನಂದಕುಮಾರ ಸ್ವಾಮಿಯವರು ಮನೋಹರವಾಗಿ ಕ್ರೋಢೀಕರಿಸಿದ್ದಾರೆ!

"ಶಿವನೃತ್ಯದ ಮಹತ್ವ ಮೂರು ಮುಖವಾಗಿದೆ. ಒಂದು, ಅದು ಬ್ರಹ್ಮಾಂಡದ ಸಮಸ್ತ ಚಲನವಲನ ಆಧಾರವಾದ ಅವನ ಗತಿಯುತ ಪ್ರವೃತ್ತಿಯ ಚಿತ್ರವಾಗಿದೆ. ಬ್ರಹ್ಮಾಂಡದ ಚಲನವಲನಕ್ಕೆ ಪ್ರಭಾವಳಿ ಸಂಕೇತ. ಎರಡು, ಅನಂತ ಕೋಟಿ ಮಾನವರನ್ನು ಮಾಯೆಯ ಸೆಳತದಿಂದ ಮುಕ್ತಿಗೊಳಿಸುವುದೇ ಅವನ ನೃತ್ಯದ ಉದ್ದೇಶ. ಮೂರು, ನೃತ್ಯ ಮಾಡುವ ಸ್ಥಾನ— ವಿಶ್ವದ ಕೇಂದ್ರವಾದ ಚಿದಂಬರ, ಮಾನವ ಹೃದಯದಲ್ಲಿದೆ." *

ರಾಜೂ ಪ್ರವಚನ ಮುಗಿಯುವ ವೇಳೆಗೆ ಇರುಳುಗತ್ತಲೆ ದಟ್ಟವಾಗಿ ವ್ಯಾಪಿಸಿತ್ತು. ಗೆಳೆಯನ ಒಳಹೊಯ್ದಾಟ ರಾಜು ಹೃದಯದಲ್ಲಿ ಅನುಕಂಪ ಹುಟ್ಟಿಸಿತ್ತು. ಕರುಣೆ ತುಂಬಿದ ಕಣ್ಣುಗಳಿಂದ ಶ್ರೀಕಂಠನನ್ನು ನೋಡಿ

---

* The Essential Significance of Siva's Dance is threefold: First, it is the image of his Rhythmic Activity as the Source of all Movement within the Cosmos, which is represented by the Arch: Secondly, the Purpose of his Dance is to Release the Countless souls of men from the Snare of Illusion: Thirdly, the Place of the Dance, Chidambaram- the Centre of the Universe, is within the Heart."

—Dr. Ananda Coomarswamy in "DANCE OF SHIVA"

" ಆಯಾಸವಾಯಿತೇ ? " ಎಂದು ಕೇಳಿದ.

" ಏಕೆ ? "

" ಸ್ವಲ್ಪ ಫಲಾಹಾರ ಸ್ವೀಕರಿಸಿ ಮಲಗು – ಚೆನ್ನಾಗಿ ನಿದ್ರೆ ಮಾಡಿದರೆ ಮನಸ್ಸಿನ ಜಂಜಡ ಹರಿಯುತ್ತದೆ. ಬೆಳಿಗ್ಗೆ ನಾನು ಬರುತ್ತೇನೆ.

ಎಂದು ಹೇಳಿ ಅಲ್ಲಿಂದ ಹೊರಟ.

' ನಿದ್ರೆಯಿಂದ ಮನಸ್ಸಿನ ಜಂಜಡ ಹರಿಯುತ್ತದೆಯೇ ? ' ಎಂದು ವಿಚಾರಮಾಡುತ್ತ ಶ್ರೀಕಂಠ ಕುಳಿತ. ಮನಸ್ಸಿನಲ್ಲಿ ಮತ್ತೆ ಅಶಾಂತಿ - ತುಮುಲ ವಿಪ್ಲವ. ಹೃದಯದಲ್ಲಿ ಸಮುದ್ರಮಂಥನ.

ಆದರೆ ಈ ಮಂಥನ ಅವನ ವೈಯಕ್ತಿಕ ಸಮಸ್ಯೆಗಳಿಂದ ಹುಟ್ಟಿರಲಿಲ್ಲ. ಇದರಲ್ಲಿ ಹೆಚ್ಚಿನ ತೀಕ್ಷ್ಣತೆ ಮೂಡಿದ್ದಂತೆ ಹೆಚ್ಚಿನ ಉದ್ದೇಶವೂ ಅಡಕವಾಗಿತ್ತು.

ಶಿಲ್ಪಿ ಮೈಕೊಡವಿಕೊಂಡೆದ್ದ. ಮುದ್ದೆ ಮಣ್ಣಿಗೆ ನೀರುಗಲಸಿ ಹದ ಮಾಡಿಕೊಂಡ. ಅವನ ಕೈಬೆರಳುಗಳು ಮಣ್ಣಿನ ಮೇಲೆ ಮಿಂಚಿನ ಬಳ್ಳಿಗಳಂತೆ ಸುಳಿದಾಡತೊಡಗಿದವು.

ರಾತ್ರಿ ಬೆಳೆಯಿತು - ತನ್ನ ಕಾಲಾವಧಿ ಮುಗಿದ ಮೇಲೆ ನಿಶಾರಾಣಿ ಲೋಕರಕ್ಷೆಯನ್ನು ಭಾಸ್ಕರ ಭಗವಾನನ ಕೈಯಲ್ಲಿಟ್ಟು ನೇಪಥ್ಯಕ್ಕೆ ಸರಿದಳು. ಭಗವಂತನಾಗಮನವನ್ನು ಅರುಣ ಹೊಂಗಿರಣಗಳನ್ನು ಚೆಲ್ಲಿ ಸೂಚಿಸಿದ.

ಕತ್ತಲು ಹರಿದಿತ್ತು - ಬೆಳಗು ಮೂಡಿತ್ತು.

ಲೋಕಾನುಭವದೊಂದಿಗೆ ಶಿಲ್ಪಿಯ ಅನುಭವ ಬೆರೆತಿತ್ತು.

ಭಾಸ್ಕರನ ಉಜ್ವಲ ಕಿರಣಗಳು ಶಿಲ್ಪಿಯ ಕೆನ್ನೆಗೆ ಮುದ್ದಾಡುತ್ತಿದ್ದವು.

ಶಿಲ್ಪಿ ತನ್ನ ಕ್ರಿಯಾವಿಲಾಸದಲ್ಲಿ ಮಗ್ನನಾಗಿದ್ದ.

ಇರುಳಳಿದು ಹಗಲು ಹುಟ್ಟಿದುದೂ ಅವನ ಪರಿವೆಗೆ ಬಂದಿರಲಿಲ್ಲ.

ರಾಜು ಎಚ್ಚರಿಸಿದಾಗಲೇ ಅವರಿಗೆ ಎಚ್ಚರ.

ಕಲಾತಪಸ್ವಿ ಬಹಿರ್ಮುಖನಾಗಬೇಕಾಯಿತು.

" ಗಂಟೆ ಎಷ್ಟು ಗೊತ್ತೇ ? "

" ಎಷ್ಟಾಗಿರಬಹುದು. "

" ಎಂಟು. "

" ಅಷ್ಟು ಹೊತ್ತಾಯಿತೇ ? "

" ರಾತ್ರಿ ನೀನು ಮಲಗಿದಂತೆ ಕಾಣಲಿಲ್ಲ. "

" ರಾತ್ರಿ ಏನಾಯಿತೋ ನನಗೆ ನೆನಪಿಲ್ಲ. "

ರಾಜು ಮರುಮಾತಾಡದೆ ಕೆಳಗಿಳಿದು ಹೋಗಿ ಗೆಳೆಯನಿಗೆ ಬಿಸಿಬಿಸಿ ಕಾಫಿ ತಂದುಕೊಟ್ಟ.

" ಇದು ಒಂದು ರಾತ್ರಿಯ ಕೆಲಸವೆಂದು ನಂಬುವುದು ಸಾಧ್ಯವಿಲ್ಲವಾಗಿದೆ. "

" ಏಕೆ ? "

" ಮನುಷ್ಯನ ಕೆಲಸ ಪ್ರಯತ್ನಪೂರ್ವಕವಾದುದು – ಇಲ್ಲಿ ಪ್ರಯತ್ನ ಕಂಡುಬರುವುದಿಲ್ಲ. "

" ಇನ್ನೇನು ಕಂಡುಬರುತ್ತದೆ. "

" ಪ್ರತಿಭೆ. ತನ್ನ ಅಮರ ನೃತ್ಯವಿಲಾಸವನ್ನು ನಿನ್ನ ಕೈಯಲ್ಲಿ ಚಿತ್ರಿಸಬೇಕೆಂದು ಭಗವದ್ಸಂಕಲ್ಪವಿದ್ದಿತೆಂದು ಕಾಣುತ್ತದೆ. "

" ಕೃತಿ ಸಮರ್ಪಕವಾಗಿದೆಯೇ ? "

" ಅದನ್ನಳೆಯಲು ನಾನು ಸಮರ್ಥನಲ್ಲ. ನಿನ್ನ ಹೃದಯ ಚಿದಂಬರದಲ್ಲಿ ಕುಣಿಯುತ್ತಿರುವ ನಟರಾಜ ಅದಕ್ಕೆ ಉತ್ತರ ಹೇಳಬೇಕು. "

" ನಿಜ ಮಿತ್ರಾ - ದಿವ್ಯ ನರ್ತಕನ ಗೆಜ್ಜೆಯ ಉಲಿ ನನ್ನ ದೇಹವನ್ನು ವ್ಯಾಪಿಸಿದೆ ನನ್ನ ನಾಡಿಸ್ಪಂದನ ಕೂಡ ಅವನ ನೃತ್ಯಗತಿಯನ್ನೇ ಅವಲಂಬಿಸಿದೆ. "

" ನೀನು ಅಪೂರ್ವ ಭಾಗ್ಯಶಾಲಿ ಶ್ರೀಕಂಠ. "

" ರಾಜೂ - ನನಗೆ ನಿದ್ರೆ ಬರುತ್ತಿದೆ. ನಾನು ಮಲಗಲೇ ? "

ರಾಜು ಅವನ ಹಾಸಿಗೆಯುರಳಿಸಿ, ಮೇಲ್ಹಾಸನ್ನು ಅಣಿ ಮಾಡಿದ. ಶ್ರೀಕಂಠ ಮಲಗಿದ.

ಅವನು ಮಲಗಿದ ಕೆಲವು ನಿಮಿಷಗಳಲ್ಲಿ ಗಾಢ ನಿದ್ರೆ ಆವರಿಸಿತು.

ರಾಜು ಶ್ರೀಕಂಠನನ್ನೊಮ್ಮೆ ಅವನು ಕಡೆದಿದ್ದ ಮೂರ್ತಿಯನ್ನೊಮ್ಮೆ ನೋಡಿದ. ಅವನ ಹೃದಯ ಅಭಿಮಾನ, ಭಕ್ತಿ, ಗೌರವಗಳಿಂದ ತೂಗಿ ತೊನೆಯಿತು.

೬

ಶ್ರೀಕಂಠ ನಿರ್ಮಿಸಿದ್ದ ನಟರಾಜ ಶಿಲ್ಪವನ್ನು ಶಾಲೆಯ ಸೂಪರಿಂಟೆಂಡೆಂಟರ ಗಮನಕ್ಕೆ ತರಬೇಕೆಂದು ರಾಜು ಯೋಚನೆ ಮಾಡಿದ. ಆದರೆ ಆ ಬಗ್ಗೆ ಶ್ರೀಕಂಠ ಉತ್ಸಾಹ ತೋರಿಸದಿರಲು ರಾಜು ತೆಪ್ಪಗಾಗಬೇಕಾಯಿತು.

ಅವನ ಜೀವ ಸುಮ್ಮನಿರಲಿಲ್ಲ. ಒಂದು ದಿನ ಸೂಪರಿಂಟೆಂಡೆಂಟರ ಹತ್ತಿರ ಮಾತನಾಡುತ್ತ ಶ್ರೀಕಂಠನ ಕಲಾಕೃತಿಯನ್ನು ಕೂಲಂಕುಷವಾಗಿ ವರ್ಣಿಸಿ, ಅವರ ಕುತೂಹಲ ಕೆರಳಿಸಿದ. ಸೂಪರಿಂಟೆಂಡೆಂಟರು ಕೂಡಲೇ ಶ್ರೀಕಂಠನನ್ನು ಕರೆದು ವಿಷಯ ಪ್ರಸ್ತಾಪಿಸಿ

" ಶಾಲೆ ಮುಗಿಸಿಕೊಂಡು ನೀನು ಮನೆಗೆ ಹೋಗುವಾಗ ನನ್ನನ್ನೂ ಕರೆ ಶ್ರೀಕಂಠ. ಜತೆಯಲ್ಲಿ ಬರುತ್ತೇನೆ " ಎಂದು ಹೇಳಿದರು.

ಇದು ರಾಜು ಮಾಡಿದ ಕಿತಾಪತಿ ಎಂದು ಊಹಿಸಲು ಶ್ರೀಕಂಠನಿಗೆ ಬಹಳ ಹೊತ್ತು ಬೇಕಾಗಲಿಲ್ಲ.

ಸೂಪರಿಂಟೆಂಡೆಂಟರು ಶಿಲ್ಪ ನೋಡಿ ಅವಾಕ್ಕಾದರು. ತಮ್ಮ ಶಾಲೆಯಲ್ಲಿ - ತಮ್ಮ ಶಿಷ್ಯವರ್ಗದಲ್ಲಿ ಇಂಥ ಶಿಲ್ಪಿ ಇದ್ದಾನೆಂಬುದು ಅವರ ಕನಸು ಮನಸ್ಸಿನಲ್ಲಿಯೂ ಬರುವುದು ಸಾಧ್ಯವಿರಲಿಲ್ಲ.

" ಇದನ್ನು ನೀನೇ ಮಾಡಿದೆಯಾ ಶ್ರೀಕಂಠ " ಎಂದು ಆಶ್ಚರ್ಯದಿಂದ ಕೇಳಿದರು.

ಶ್ರೀಕಂಠ ಉತ್ತರ ಕೊಡಲಿಲ್ಲ. ಅವನ ಪರವಾಗಿ ರಾಜು,

" ಹೌದು ಸರ್. ಒಂದೇ ರಾತ್ರಿಯಲ್ಲಿ ಮಾಡಿ ಮುಗಿಸಿದ. "

" ನನ್ನ ಕಣ್ಣು ನಾನೇ ನಂಬದಂತಾಗಿದೆ. ಈ ಮೂರ್ತಿಯನ್ನು ಶಾಲೆಗೆ ಕೊಟ್ಟುಬಿಡು. "

ಶ್ರೀಕಂಠ ಅನುಮಾನಿಸುತ್ತಾ

" ಸಂತೋಷವಾಗಿ ಕೊಡುತ್ತಿದ್ದೆ ಸರ್. ಆದರೆ ಕೆರಿಗನ್ ಕಂಪೆನಿಯ ಥಾಂಪ್ಸನ್ ಅವರಿಗಾಗಿ ಇದನ್ನು ಮಾಡಿದ್ದೇನೆ. ಅವರು ಅಸಮಾಧಾನಗೊಂಡಾರು ಎಂಬ ಭಯ ಕಾಡುತ್ತಿದೆ. "

" ಹಾಗಾದರೆ ಇದರ ಅಚ್ಚು ಮಾಡಿಕೊಡು. ನಾನು ಕಂಚಿನಲ್ಲಿ ಮೂರ್ತಿ

ಮಾಡಿಸುತ್ತೇನೆ. "

" ತಾವು ಕಂಚು ಕೊಡಿಸಿದರೆ ಮೂರ್ತಿ ನಾನೇ ಮಾಡಿಕೊಡುತ್ತೇನೆ. "

" ಕಂಚಿನ ಮೂರ್ತಿ ಮಾಡುವುದಕ್ಕೂ ಬರುತ್ತದೆಯೇ ? "

" ಶ್ರೀಕಂಠ ಪ್ರಸಿದ್ಧ ಸ್ಥಪತಿಗಳ ಮನೆಗೆ ಸೇರಿದವನು ಸರ್. ಶಿಲ್ಪದ ಎಲ್ಲ ಪ್ರಕಾರಗಳಲ್ಲಿಯೂ ಅವನಿಗೆ ಪ್ರಾವಿಣ್ಯವಿದೆ. "

" ನನಗೇಕಯ್ಯಾ ಇಷ್ಟು ದಿನ ಈ ವಿಷಯ ಹೇಳಲಿಲ್ಲ. "

" ಸ್ವಂತ ಡಂಗುರ ಬಾರಿಸುವುದಕ್ಕೆ ಅವನು ಇಷ್ಟಪಡಲಿಲ್ಲ - ಯಾಲಕ್ಕ ಪ್ಪಾಚಾರ್ಯರಿಗೆ ಶ್ರೀಕಂಠ ಮಾಡಿಕೊಟ್ಟಿರುವ ಚಾಮುಂಡೇಶ್ವರಿ ವಿಗ್ರಹ ತಾವು ನೋಡಿರಬಹುದು. "

" ನೋಡಿದ್ದೆ. ಆದರೆ ಅತ್ತ ಲಕ್ಷ್ಯ ಕೊಡಲಿಲ್ಲ. — ಇನಸ್ಟಿಟ್ಯೂಟಿಗೆ ನಿನ್ನಿಂದ ಹೆಚ್ಚಿನ ಸೇವೆಯಾಗಬೇಕು ಶ್ರೀಕಂಠ. ನೀನು ಒಪ್ಪುವುದಾದರೆ ಶಿಲ್ಪ ತರಗತಿಗೆ ನಿನ್ನನ್ನು ಉಪಾಧ್ಯಾಯನಾಗಿ ತೆಗೆದುಕೊಳ್ಳಲು ಸರ್ಕಾರಕ್ಕೆ ಬರೆಯುತ್ತೇನೆ. "

" ನಾನಿನ್ನೂ ವಿದ್ಯಾರ್ಥಿ. ನಾನು ಕಲಿಯಬೇಕಾದದ್ದು ಅಪಾರವಾಗಿರು ವಾಗ ಈಗಲೇ ಕಲಿಸುವ ಉದ್ಯಮ ಕೈಗೊಳ್ಳಲೇ ? "

" ಇನ್‌ಸ್ಟಿಟ್ಯೂಟಿನ ಕೋರ್ಸ್ ಮುಗಿಸಿಕೊಂಡು ಅವನು ಮುಂಬಯಿಗೆ ಹೋಗಬೇಕೆಂದಿದ್ದಾನೆ ಸರ್. ಅದಕ್ಕೆ ತಾವು ಸಹಾಯ ಮಾಡಬೇಕು. "

" ಅವಶ್ಯಕವಾಗಿ ಆಗಲಿ. ನಾನು ಆಫೀಸ್ ಮ್ಯಾನೇಜರರಿಗೆ ಹೇಳಿರು ತ್ತೇನೆ. ನಿನಗೆಷ್ಟು ಕಂಚು ಬೇಕೋ ತೆಗೆದುಕೊಂಡು ಹೋಗು. ಮರಗೆಲಸದ ಸಾಮಾನು ಬೇಕಾದರೆ ಶ್ರೀನಿವಾಸಲೂಗೆ ಹೇಳಿ ಮಾಡಿಸಿಕೋ. ನೀನು ಕೇಳಿದ್ದು ಮಾಡಿಕೊಡುವಂತೆ ಆವನಿಗೂ ನಾನು ತಿಳಿಸಿರುತ್ತೇನೆ " ಎಂದರು.

ತನ್ನ ಸಂಧಾನ ಸಫಲದಾದುದಕ್ಕೆ ರಾಜು ಸಂತೋಷಗೊಂಡ. ವಿನಾ ಕಾರಣ ರಾಜುವನ್ನು ಆಕ್ಷೇಪಿಸಿದುದಕ್ಕೆ ಶ್ರೀಕಂಠ ಅವನ ಕ್ಷಮೆ ಕೇಳಿಕೊಂಡು ಕಾಫಿ ಕೊಡಿಸಬೇಕಾಯಿತು.

ಥಾಂಪ್ಸನ್ ಸಾಹೇಬರು ತಮ್ಮ ವಿಗ್ರಹಗಳಿಗೆ ಆತುರ ಪಡಲಾರಂಭಿಸಿ ದರು. ವಿಗ್ರಹದ ಕೆಲಸವೆಲ್ಲಾ ಮುಗಿದಿದ್ದರೂ ಬೋದಿಗೆಯ ಕೆಲಸ ಮುಗಿದಿರ ಲಿಲ್ಲ. ಶ್ರೀನಿವಾಸಲು ಫರ್ನೀಚರ್ ಅಂಗಡಿಯ ಬಾಗಿಲಿಗೆ ಬೀಗಮುದ್ರೆ

ಬಿದ್ದಿತ್ತು. ರಾಜು ಪ್ರತಿನಿತ್ಯ ಹೋಗಿ ಶ್ರೀನಿವಾಸಲು ಅಂಗಡಿಯ ಬೀಗ ನೋಡಿಕೊಂಡು ಬರುತ್ತಿದ್ದ.

ಶ್ರೀನಿವಾಸಲು ಊರಿಗೆ ಬಂದೊಡನೆಯೇ ಶ್ರೀಕಂಠನ ಭೆಟ್ಟಿ ಮಾಡಿದ.

" ಎಲ್ಲಿಗೆ ಹೋಗಿಬಿಟ್ಟಿದ್ದಿರಿ ಶ್ರೀನಿವಾಸಲು ? ಥಾಂಪ್ಸನ್ ಸಾಹೇಬರ ಒತ್ತಾಯ ತಡೆಯಲಸಾಧ್ಯವಾಗಿದೆ. ಬೋದಿಗೆ ಯಾವಾಗ ಮಾಡಿಕೊಡುವಿರಿ."

" ಮಾಡಿಟ್ಟಿದ್ದೇನೆ. ಸ್ವಲ್ಪ ಫಿನಿಷ್ (Finish) ಮಾಡಿ ಪಾಲಿಷ್ ಹಾಕಿಕೊಡುವುದಷ್ಟೇ ಬಾಕಿ. ನಾಡಿದ್ದು ತಪ್ಪದೆ ತಂದುಕೊಡುತ್ತೇನೆ. "

" ಹೇಳದೆ ಕೇಳದೆ ಎಲ್ಲಿಗೆ ಹೋಗಿಬಿಟ್ಟಿದ್ದಿರಿ.- ಇಷ್ಟು ದಿವಸ? "

ಶ್ರೀನಿವಾಸಲು ನಸುನಾಚುತ್ತಾ

" ನನ್ನ ಮದುವೆ ನಿಶ್ಚಯವಾಗಿತ್ತು. ಅದನ್ನು ಮುಗಿಸಿಕೊಂಡು ಕುಟುಂಬ ಜತೆಯಲ್ಲಿ ಕರೆದುಕೊಂಡು ಬರಲು ವಿಳಂಬವಾಯಿತು. "

" ನಮಗೆಲ್ಲಾ ಊಟ ಹಾಕಬೇಕು. "

" ಆಗಬಹುದು ಸಾರ್. "

ಈ ಬಾರಿ ಶ್ರೀನಿವಾಸಲು ಮಾತಿಗೆ ತಪ್ಪಲಿಲ್ಲ. ಎರಡು ದಿವಸಗಳಲ್ಲಿ ಬೋದಿಗೆ ತಂದೊಪ್ಪಿಸಿದ. ಬೋದಿಗೆ, ವಿಗ್ರಹ ಎರಡೂ ಮಾರನೆಯ ದಿನ ಥಾಂಪ್ಸನ್ ಸಾಹೇಬರ ' ದಿವಾನಖಾನೆ ' ಯನ್ನಲಂಕರಿಸಿದವು.

ಶ್ರೀಕಂಠನ ಸಮಸ್ತ ವೇಳೆಯೂ ಕಂಚಿನ ಪುತ್ಥಳಿಯ ನಿರ್ಮಾಣಕ್ಕೆ ವಿನಿಯೋಗವಾಗಿತ್ತು. ಹಗಲಿರುಳೂ ಅವನಿಗೆ ಅದೇ ಕೆಲಸವಾಯಿತು. ಶಾಲೆಗೂ ಕ್ರಮವಾಗಿ ಹೋಗುತ್ತಿರಲಿಲ್ಲ. ಅವನ ಹಾಜರಿಯ ಬಗ್ಗೆ ಗಮನ ಕೊಡಬಾರದೆಂದು ಸೂಪರಿಂಟೆಂಡೆಂಟರು ಶಿಕ್ಷಕರಿಗೆ ನಿರೂಪಿಸುತ್ತಿದ್ದರು.

ಕಂಚಿನ ಪುತ್ಥಳಿ ಕ್ರಮೇಣ ರೂಪ ತಾಳುತ್ತಿತ್ತು. ಮೂರು ತಿಂಗಳ ವೇಳೆಗೆ ಅದು ಸ್ಪಷ್ಟ ಆಕಾರ ತಳೆದು ನಿಂತಿತು. ವಿಗ್ರಹದ ಪ್ರಮಾಣಕ್ಕನು ಗುಣವಾದ ಬೋದಿಗೆಯನ್ನು ಶ್ರೀನಿವಾಸಲು ಮಾಡುತ್ತಿದ್ದ. ಭಾವಪೂರ್ಣ ವಾಗಿದ್ದ ಮೂರ್ತಿಯನ್ನು ನೋಡಿದ ರಾಜುವಿಗೆ ದೊಡ್ಡ ಸಮಸ್ಯೆ ತಲೆ ದೋರಿತು.

" ಇದಕ್ಕೆ ಮೆರುಗು ಹೇಗೆ ಕೊಡುತ್ತೀ ಶ್ರೀಕಂಠ. "

" ಅದು ಶಿಲ್ಪಿಯ ರಹಸ್ಯ. "

" ಇರಲಿ - ಹೇಳೋ ? "

" ಬ್ರ್ಯಾಸೋ ( Brasso ) ಉಪಯೋಗಿಸುತ್ತೇನೆ. "

" ತಮಾಷೆ ಮಾಡಬೇಡ ಹೇಳಯ್ಯಾ. "

" ನಯವಾದ ಉಳಿಯನ್ನು ತೆಗೆದುಕೊಂಡು ವಿಗ್ರಹವನ್ನು ಚೆನ್ನಾಗಿ ಉಜ್ಜಿದರೆ ನೈಜವಾದ ಲೋಹಕಾಂತಿ ಪ್ರಕಾಶಕ್ಕೆ ಬರುತ್ತದೆ. ದ್ರಾವಕ ಬಿರಿತ ಯಾವ ಮೆರಗನ್ನೂ ಲೋಹಕ್ಕೆ ಮುಟ್ಟಿಸಕೂಡದು. ಲೋಹ ಪರಿಶುದ್ಧವಾಗಿದ್ದರೆ ಸಾವಿರಾರು ವರ್ಷಗಳಾದರೂ ಕೆಡುವುದಿಲ್ಲ. "

" ಸಾವಿರ, ಎರಡು ಸಾವಿರ ವರ್ಷಗಳ ನಮ್ಮ ಪ್ರಾಚೀನ ಲೋಹ ವಿಗ್ರಹಗಳು ಕೆಡದಿರುವದಕ್ಕೆ ಇದೇ ಕಾರಣವೆಂದು ಕಾಣುತ್ತದೆ. "

" ಒಂದು ವಿಗ್ರಹ ಮಾಡಬೇಕಾದರೆ ನಿನಗೆ ಮೂರು ತಿಂಗಳು ಹಿಡಿಯಿತು - ಇದರ ಪೂರ್ವ ಸಿದ್ಧತೆ ಮಾಡಿಗೊಳ್ಳಲು ಮೂರು ತಿಂಗಳು. ಇಂದಿನ ದಿನದ ಆವಶ್ಯಕತೆಯನ್ನು ಇದು ಹೇಗೆ ಪೂರೈಸುತ್ತದೆ. ಯಂತ್ರ ಸಹಾಯ ತೆಗೆದುಕೊಂಡೇಕೆ ವಿಗ್ರಹಗಳನ್ನು ಮಾಡಬಾರದು. ಪ್ರತಿಯೊಂದು ಭಾಗವನ್ನೂ ಶಿಲ್ಪಿಯೇ ಕೈಯಲ್ಲಿ ಕಡೆಯುವುದರಿಂದ ಎಷ್ಟು ಕಾಲ ನಿರರ್ಥಕವಾಗಿ ಕಳೆದು ಹೋಗುತ್ತದೆ. "

" ನೀನು ಬಹು ಜನರ ಆವಶ್ಯಕತೆಯನ್ನು ಕುರಿತಲ್ಲವೇ ವಿಚಾರಮಾಡುತ್ತಿರುವುದು. "

" ಹೌದು. "

ಬಹು ಜನರು ಇಂಥ ಶಿಲ್ಪಗಳಿಗೆ ತಗಲುವ ಮೌಲ್ಯವಿತ್ತು ಕೊಂಡು ಮನೆಯಲ್ಲಿಟ್ಟುಕೊಳ್ಳಲು ಸಾಧ್ಯವಿಲ್ಲವೆನ್ನುವ ಮಾತನ್ನು ಒಪ್ಪುತ್ತೇನೆ. ಆದರೆ ಆ ಮನೋಧರ್ಮವೇ ತಪ್ಪೆಂದು ನಮ್ಮ ಪ್ರಾಚೀನರ ಅಭಿಪ್ರಾಯ. ಭಗವಂತನ ಮೂರ್ತಿ ಸಮಸ್ತರ ಸೊತ್ತು - ಅದರ ಮೇಲೆ ಯಾವ ವ್ಯಕ್ತಿಯೂ ತನ್ನ ಹಕ್ಕುದಾರಿಯನ್ನು ಸ್ಥಾಪಿಸಕೂಡದೆಂಬುದೇ ಅವರ ಉದ್ದೇಶ. ಅದಕ್ಕೇ ಈ ಮೂರ್ತಿಗಳು ಮನೆಗಳನ್ನಲಂಕರಿಸಬಾರದು — ದೇವಾಲಯ, ಮಠಗಳಲ್ಲಿರಬೇಕೆಂದು ಪ್ರಾಚೀನರ ಮತ.

ಯಂತ್ರಸಹಾಯದಿಂದ ಈ ವಿಗ್ರಹದ ನೂರಾರು ಪ್ರತಿಗಳನ್ನು ಮಾಡಿ ಅಗ್ಗವಾಗಿ ಮಾರಬಹುದು. ಆದರವು ಮೂಲ ಕಲ್ಪನೆಯನ್ನಾಗಲಿ ಭಾವನೆಗಳ

ನ್ನಾಗಲಿ ಪ್ರತಿಬಿಂಬಿಸಬಲ್ಲವೇ? ಉಪಯೋಗವೇ ಯಂತ್ರದ ಗುರಿ. ನಮಗೆ ಸಾವಿರಾರು ಗುಂಡಿಗಳೂ, ಬಕಲ್‌ಗಳೂ, ನಟ್ಟು ಬೊಲ್ಟುಗಳೂ ಬೇಕು–ಅವುಗಳನ್ನು ಯಂತ್ರ ಒದಗಿಸಬಲ್ಲುದು. ಒಂದು ಗುಂಡಿಯಂತೆ ಇನ್ನೊಂದು ಗುಂಡಿ, ಒಂದು ನಟ್ಟಿನಂತೆ ಇನ್ನೊಂದು ನಟ್ಟು ಇರಬೇಕೆಂಬುದು ಅವಶ್ಯಕ. ಅನುಕೂಲ ಸಾಮಗ್ರಿಗಳಿಗಿರುವ ಇತಿಮಿತಿಯಲ್ಲಿ ಕಲೆ ಓಡಿಯಾಡುವುದಿಲ್ಲ - ಅದರ ವ್ಯಾಪ್ತಿ ಬಹು ವಿಸ್ತಾರವಾದುದು. ಮೂಲ ವಸ್ತುವಿನ ತತ್ವದೊಂದಿಗೆ ತನ್ನ ಮನೋಧರ್ಮವನ್ನು ಕೂಡಿಸಿ ಶಿಲ್ಪಿ ಮೂರ್ತಿ ರಚಿಸುತ್ತಾನೆ. ಒಂದೇ ವಸ್ತುವನ್ನೇ ತೆಗೆದುಕೊಂಡು ನಾಲ್ಕು ಮೂರ್ತಿಗಳನ್ನು ಅವನು ನಿರ್ಮಿಸಿದಲ್ಲಿ ಅವು ನಾಲ್ಕು ಬಗೆಯಾಗಿರುತ್ತವೆ. ನಾಲ್ಕು ಬೇರೆಬೇರೆ ಭಾವಗಳನ್ನು ವ್ಯಕ್ತಗೊಳಿಸುತ್ತವೆ.

" ಹಾಗೆಂದರೇನು ? "

" ದೃಷ್ಟಾಂತಕ್ಕೆ ನಟರಾಜ ವಿಗ್ರಹವನ್ನೇ ತೆಗೆದುಕೋ. ನಟರಾಜ ಸೃಷ್ಟಿ, ಸ್ಥಿತಿ, ಲಯ, ತಿರೋಭಾವ, ಅನುಗ್ರಹವೆಂಬ ಪಂಚಕ್ರಿಯೆಗಳ ಸಂಕೇತವಾಗಿದ್ದಾನೆ. ಬೇರೆ ಬೇರೆ ಶಿಲ್ಪಿಗಳು ಕಲ್ಲು, ಲೋಹಗಳಲ್ಲಿ ಮಾಡಿರುವ ನಟರಾಜ ವಿಗ್ರಹವನ್ನು ಸೂಕ್ಷ್ಮವಾಗಿ ಪರಿಶೀಲಿಸಿಕೊಂಡು ಒಂದೊಂದರಲ್ಲಿ ಒಂದೊಂದು ಕ್ರಿಯೆ ಪ್ರಧಾನವಾಗಿ ಕಂಡುಬರುತ್ತದೆ. ಈ ಕ್ರಿಯೆಗಳು ಶಿಲ್ಪಿಯ ಮನಸ್ಸಿನಮೇಲೆ ಮಾಡಿದ ಪರಿಣಾಮದ ಚಿತ್ರಣ ಕೆಲವು ವೇಳೆ ಕಂಡುಬರುತ್ತವೆ. ನಟರಾಜ ಒಬ್ಬನೇ - ಆದರೆ ಅವನ ನೂರು ಶಿಲ್ಪಗಳಲ್ಲಿ ನೂರುಭಾಗಗಳು ಎದ್ದು ಕಾಣುತ್ತವೆ. ಯಂತ್ರಕ್ರಿಯೆ ಈ ವೈವಿಧ್ಯವನ್ನು ನಾಶಮಾಡುತ್ತದೆ. "

" ಕಲಾಕೃತಿಗಳು ಎಲ್ಲರ ಕೈ ಸೇರಬೇಡವೇ ? "

" ಎಲ್ಲರ ಕೈ ಸೇರುವುದಕ್ಕಿಂತ ಹೆಚ್ಚಾಗಿ ಕಣ್ಣು ಸೇರಬೇಕು. ವಿಗ್ರಹಗಳನ್ನು ಕೊಂಡು ಮನೆಯಲ್ಲಿಟ್ಟುಕೊಳ್ಳುವವರೆಲ್ಲಾ ಅದನ್ನು ನೋಡುತ್ತಾರೆಂದು ಭಾವಿಸಿರುವೆಯಾ ? ಕೆಲವರಿಗಂತೂ ಅದು ಅಲಂಕಾರ ಸಾಮಗ್ರಿ – ತಮ್ಮ ಶ್ರೀಮಂತಿಕೆಯನ್ನು ಪ್ರದರ್ಶಿಸುವದಕ್ಕೊಂದು ಸಾಧನ. ನಿಜವಾದ ಕಲಾಭಿಮಾನಿ ಅವುಗಳನ್ನರಸಿಕೊಂಡು ಹೋಗುತ್ತಾನೆ. ದೇವಾಲಯದಲ್ಲಿ ಪ್ರತಿಷ್ಠಿತವಾಗಿರುವ ಭವ್ಯ ಮೂರ್ತಿಯ ಪ್ರತಿಮೆಯನ್ನು ತನ್ನ ಹೃದಯದಲ್ಲಿ ಅಚ್ಚೊತ್ತಿಕೊಳ್ಳುತ್ತಾನೆ. ಆ ಅಚ್ಚು ಅವನ ಹೃದಯದ ಮೇಲೆ ಅಲಂಕಾರ

ಸಾಮಗ್ರಿಯಾಗಿ ಕುಳಿತಿರುವದಿಲ್ಲ — ಅದು ಅವನ ಸಮಸ್ತ ಚೇತನವನ್ನು ಕೆರಳಿಸಿ, ಅವನ ಜೀವನವನ್ನೇ ವ್ಯಾಪಿಸಿಬಿಡುತ್ತದೆ. ”

“ ನೀನು ಹೇಳುವ ಮಾತಿನಲ್ಲಿ ತುಂಬ ಸತ್ಯವಿದೆ ಮಿತ್ರಾ. ಪರ್ಶಿಯಾದ ಮಹಾಕವಿ ನಿಜಾಮಿ ತನ್ನ ಅಮರ ‘ ಲೈಲಾ – ಮಜನೂ ’ ಕಾವ್ಯದಲ್ಲಿ ಇದೇ ಅನುಭವ ಸೂಚಿಸಿದ್ದಾನೆ. ಲೋಕಬಾಹಿರನೂ ಮತಿಭ್ರಾಂತನೂ ಆದ ಮಜನೂ ಸದಾ ನಿರ್ವಿಣ್ಣನಾಗಿರುತ್ತಾನೆ. ಒಂದು ದಿನ ಅವನ ಮುಖದ ಮೇಲೆ ದಿವ್ಯ ಕಳೆ ಮೂಡಿರುತ್ತದೆ. ಯಾರೋ ಕೇಳುತ್ತಾರಂತೆ — ‘ ಇದೇನು ಇಂದು ಮಜನೂ ಹೊಸ ಮನುಷ್ಯನ ಹಾಗೆ ಕಾಣುತ್ತಾನೆ’ ಎಂದು. ಅದಕ್ಕೆ ಮಜನೂ ಯೋಗಕ್ಷೇಮ ನೋಡಿಕೊಳ್ಳುತ್ತಿದ್ದ ಕಾಪಿನವನು ಹೇಳುತ್ತಾನಂತೆ. ಅಷ್ಟು ತಿಳಿಯಲಾರೆಯಾ. ಮಜನೂ ಲೈಲಿಯನ್ನು ನೋಡಿದ್ದಾನೆ ” ಎಂದು — ಕಲಾನುಭವ, ಭಗವದನುಭವಗಳೆರಡೂ ಒಂದೇ ರೀತಿಯಾದುವೆಂದು ನೀನು ಭಾವಿಸಿರುವ ಹಾಗಿದೆ. ”

“ ಅದರಲ್ಲಿ ಸಂದೇಹವೇನು ? ಭಗವದನುಗ್ರಹದಿಂದ ಕಲಾವಿದ ತನ್ನ ಕೃತಿ ರಚಿಸುವುದಿಲ್ಲ. ಆಗ ನಾನು ಬೇರೆ — ಭಗವಂತ ಬೇರೆ. ನಾನು ಎನ್ನುವ ಈ ಅಲ್ಪ ಪ್ರಾಣಿ ಭಗವಂತನೆಂಬ ಮಹಾಪುರುಷನ ಕಟಾಕ್ಷ ದೊರಕಿಸಿಕೊಳ್ಳಬೇಕು ಎನ್ನುವ ದ್ವೈತ ಭಾವ ಮೂಡಿರುತ್ತದೆ. ಕಲಾವಿದ ತಾನೇ ಭಗವಂತನಾದಾಗಲೇ ಅವನ ಕೃತಿ ಪರಿಪೂರ್ಣವಾಗುವುದು. ಯಾವಾಗ ಚೇತನ ತುಂಬುತ್ತದೆಯೋ ಹೃದಯದಲ್ಲಿ ಸತ್ಯ, ಸೌಂದರ್ಯ, ಶಾಂತಿ ಮೂಡುವವೋ ಆಗ ಮಾನವ ತನ್ನ ಕ್ಷುದ್ರಕಾಯ ತ್ಯಜಿಸಿ ಅಮರ ಕಾಯ ಧರಿಸುತ್ತಾನೆ. ನಾನು ಎನ್ನುವ ವಸ್ತು ಸತ್ಯ, ಸೌಂದರ್ಯ, ಶಾಂತಿಗಳಲ್ಲಿ ಬೆರೆತು ಹೋಗುತ್ತದೆ. ”

“ ಇದನ್ನೇ ಉಪನಿಷತ್ತಿನ ಋಷಿ ‘ ರಸೋ ವೈ ಸಹಃ ’ ಎಂದು ಹೇಳುತ್ತಾನೆ ಶ್ರೀಕಂಠ. ”

## ೭

ಶ್ರೀಕಂಠನ ದಿವ್ಯ ‘ ನಟರಾಜ ಮೂರ್ತಿ ’ ಅದಕ್ಕೆ ಶ್ರೀನಿವಾಸಲು ರಚಿಸಿದ ಭವ್ಯಪೀಠ ಎರಡೂ ಇನ್‌ಸ್ಟಿಟ್ಯೂಟಿನ ಪ್ರದರ್ಶನ ಮಂದಿರವನ್ನಲಂಕರಿಸಿ

ದವು. ಇನ್‌ಸ್ಟಿಟ್ಯೂಟಿನ ಹೆಬ್ಬಾಗಿಲಿಗೆ ಎದುರಾಗಿ ಮೂರ್ತಿ ಎಲ್ಲರ ಕಣ್ಮನ ಸೆಳೆಯುವಂತೆ ನಿಂತಿತು.

ಊರಿನ ಜನ ಈ ಕೌತುಕ ನೋಡಲು ತಂಡತಂಡವಾಗಿ ಬಂದರು. ರಾಮನಾಥಯ್ಯ, ಮಾದಯ್ಯ ಧಾವಿಸಿ ಬಂದು ತಮ್ಮ ಚಿರಂಜೀವಿಯ ಕೃತಿ ಚಮತ್ಕೃತಿಯನ್ನು ಕಣ್ತುಂಬ ನೋಡಿ ಆನಂದಿಸಿದರು. ಯಾಲಕ್ಕಪ್ಪಾ ಚಾರ್ಯರು ಶ್ರೀಕಂಠನನ್ನಪ್ಪಿಕೊಂಡು ತಮ್ಮ ಸಂತೋಷ ವ್ಯಕ್ತಪಡಿಸಿದರು.

ಎರಡುವಾರ ಒಂದೇ ಸಮನಾಗಿ ಜಾತ್ರೆ ಸಾಗಿತು. ಒಂದು ದಿನ ಶಾಲೆಗೆ ಬಂದ ಶ್ರೀಕಂಠ ನಟರಾಜ ಮೂರ್ತಿಯ ಪಾದದ ಬಳಿ ಸುಳಿದಾಡುತ್ತಿದ್ದ ಒಂದು ಚೀಟಿಯನ್ನು ಓದಿ ನೋಡಿದ.

" ಶ್ರೀ ಕೆ. ಎಂ. ಮುನಿಷಿಯವರಿಗೆ ಮಾರಿದ್ದಾಗಿದೆ. "

' ಮಾರಿದ್ದಾಗಿದೆ ' ಎಂದುಕೊಂಡೇ ಸೂಪರಿಂಟೆಂಡೆಂಟರ ರೂಮು ಪ್ರವೇಶಿಸಿದ. ಸೂಪರಿಂಟೆಂಡೆಂಟರು ಶಿಷ್ಯನಿಗೆ ಆದರದ ಸ್ವಾಗತ ಬಯಸಿದರು.

" ನನ್ನ ಮೂರ್ತಿ ಯಾರಿಗೋ ಮಾರಿರುವ ಹಾಗೆ ಕಾಣುತ್ತದಲ್ಲಾ ಸಾರ್. "

" ಹೌದು ಶ್ರೀಕಂಠ. ನಿನ್ನೆ ಒಂದು ವಿಶೇಷ ಸಂಗತಿ ನಡೆಯಿತು. ಸುಮಾರು ನಾಲ್ಕು ಗಂಟೆಯ ವೇಳೆಗೆ ಮುಂಬಯಿಯ ಮಂತ್ರಿಗಳಾದ ಶ್ರೀ ಕೆ. ಎಂ. ಮುನಷಿಯವರು ನಮ್ಮ ಗೃಹಮಂತ್ರಿಗಳ ಜತೆಯಲ್ಲಿ ಬಂದರು. ಶಾಲೆಯ ವಿವಿಧ ಕಾರ್ಯ ಕಲಾಪಗಳನ್ನು ಪರಾಮರ್ಶಿಸಿ ಸಂತೋಷ ವ್ಯಕ್ತ ಮಾಡಿದರು. ಹಾಗೇ ನೋಡಿಕೊಂಡು ಬರುತ್ತಿರುವಲ್ಲಿ ನಿನ್ನ ಶಿಲ್ಪ ಅವರ ಗಮನ ಸೆಳೆಯಿತು. ಎವೆಯಿಕ್ಕದೆ ನಿನ್ನ ಶಿಲ್ಪ ನೋಡುತ್ತ ನಿಂತರು. ಶಿಲ್ಪ ನೋಡುತ್ತ ನೋಡುತ್ತ ವೈಮರಿತರೆಂದು ಕಾಣುತ್ತದೆ. ಅವರು ಕಾಲು ಗಂಟೆಯ ತರುವಾಯ ' ವಂಡರ್‌ಫುಲ್ ' ( wonderful ) ಎಂದಷ್ಟೇ ಹೇಳಿ ನನ್ನ ಕಡೆ ತಿರುಗಿ

' ಇದನ್ನು ಮಾಡಿದವರು ಯಾರು ' ಎಂದು ಕೇಳಿದರು.

' ನಮ್ಮ ಶಾಲೆಯ ಮಾಡೆಲಿಂಗ್ ಸೆಕ್ಷನ್ ( Modelling Section ) ವಿದ್ಯಾರ್ಥಿ. '

' ವಿದ್ಯಾರ್ಥಿಯೇ ! '

' ಹೌದು ಸರ್. "

' ಅವನು ಶಾಲೆಗೆ ಬಂದು ಎಷ್ಟು ವರ್ಷಗಳಾದವು ? '

' ಎರಡು ವರ್ಷಗಳಾದವು. '

' ಅವನು ಪ್ರಾಚೀನ ಸ್ಥಪತಿಗಳ ಮನೆತನದವನು. ಶಿಲ್ಪವಿದ್ಯೆ ಅವನಿಗೆ ರಕ್ತಗತವಾಗಿದೆ. '

ಮಾನ್ಯ ಮುನಿಷಿಯವರು ನಿನ್ನನ್ನು ನೋಡಬಯಸಿದರು. ನೀನು ಶಾಲೆಗೇ ಬಂದಿರಲಿಲ್ಲ.

' ಈ ಶಿಲ್ಪ ನನಗೆ ಕೊಟ್ಟುಬಿಡಿ ' ಎಂದರು.

ನಾನು ಅನುಮಾನಿಸಿದೆ.

' ಯೋಚನೆಯೇಕೆ ? ನೀವು ನಿರ್ಧರಿಸುವ ಬೆಲೆ ಕೊಡಲು ಸಿದ್ಧವಾಗಿದ್ದೇನೆ. ಮುಂಬಯಿಯಲ್ಲಿರುವ ನಮ್ಮ ' ಭಾರತೀಯ ವಿದ್ಯಾಭವನ ' ಕ್ಕೆ ಬೇಕಾಗಿದೆ. '

"ನಾನು ಆಗಲೆಂದು ಒಪ್ಪಿಕೊಂಡು ಮೂರು ಸಾವಿರ ರೂಪಾಯಿ ಬೆಲೆ ಗೊತ್ತು ಮಾಡಿದ. ಮುನಿಷಿಯವರು ಮರುಮಾತಾಡದೆ ಮೂರು ಸಾವಿರ ರೂಪಾಯಿಗಳಿಗೆ ಒಂದು ಚೆಕ್ ಕೊಟ್ಟುಬಿಟ್ಟರು. "

ಎಂದು ಹೇಳಿ ಸೂಪರಿಂಟೆಂಡೆಂಟರು ಚೆಕ್ಕನ್ನು ಶ್ರೀಕಂಠನ ಕೈಯಲ್ಲಿತ್ತರು. ಶ್ರೀಕಂಠ ಅವಾಕ್ಕಾಗಿ ಹೋದ.

' ಮೂರು ಸಾವಿರ ರೂಪಾಯಿಗಳು — ಕನಸಲ್ಲ; ಕೈಯಲ್ಲಿ ಚೆಕ್ಕಿದೆ. '

" ಇದರಲ್ಲಿ ಮೂರನೆಯ ಒಂದಂಶ ಶಾಲೆಗೆ ಸೇರಬೇಕು ಶ್ರೀಕಂಠ. ಉಳಿದ ಹಣ ನಿನಗೆ ಪಾವತಿ ಮಾಡುತ್ತೇನೆ. "

ಶ್ರೀಕಂಠ ಕ್ಷಣಕಾಲ ಯೋಚನೆ ಮಾಡಿ

" ಅಷ್ಟು ಹಣ ನಾನೆಲ್ಲಿಟ್ಟುಕೊಳ್ಳಲಿ ಸಾರ್. ದಯೆಯಿಟ್ಟು ಯಾಲಕ್ಕ ಪ್ಪಾಚಾರ್ಯರ ಕೈಗೆ ಕೊಟ್ಟರೆ ನಾನು ಮುಂಬಯಿಗೆ ಹೋಗುವಾಗ ತೆಗೆದುಕೊಳ್ಳುತ್ತೇನೆ. "

" ಹಾಗೇ ಆಗಬಹುದು. "

ಎಂದು ಸೂಪರಿಂಟೆಂಡೆಂಟರು ತಮ್ಮ ಒಪ್ಪಿಗೆ ಸೂಚಿಸಿದರು.

ಶ್ರೀಕಂಠನ ಯಶಸ್ಸು ನೋಡಿ ಮನಃಪೂರ್ವಕವಾಗಿ ಸಂತೋಷಿಸಿದ

ವನು ರಾಜು.

" ಶಂಖದಿಂದ ನೀರು ಬೀಳಬೇಕಾಗಿತ್ತು. ಇನ್ನು ನಿನ್ನ ಕೆಲಸವಾಯಿತು ಶ್ರೀಕಂಠ. "

" ಹಾಗೆಂದರೆ ? "

" ಸೂಪರಿಂಟೆಂಡೆಂಟರಿಗೆ ದೊಡ್ಡ ಸ್ಥಾನಗಳಲ್ಲಿರುವವರ ಮಾತಷ್ಟೇ ಪಥ್ಯ. ನಿನ್ನ ಕೃತಿ ಮುನಿಸಿಪಿಯವರ ಮೆಚ್ಚುಗೆಗೆ ಪಾತ್ರವಾಯಿತೆಂದ ಮೇಲೆ ಮುಗಿದೇ ಹೋಯಿತು – ಇನ್ನು ಹರಿಹರ ಬ್ರಹ್ಮಾದಿಗಳು ಬಂದು ನಿನ್ನ ವಿರುದ್ಧ ಹೇಳಿದರೂ ಸೂಪರಿಂಟೆಂಡೆಂಟರು ಕಿವಿಗೊಡುವುದಿಲ್ಲ. ನಿನ್ನ ಕಾಲ ಕ್ಷೇಪ ( Scholarship ) ಕಟ್ಟಿಟ್ಟ ಬುತ್ತಿ. "

" ಎಲ್ಲಾ ನಿನ್ನ ವಿಶ್ವಾಸ ರಾಜು. "

ಕೀರ್ತಿ, ಹೊನ್ನು ಎರಡೂ ಧಾರಾಳವಾಗಿ ಕೈಯಲ್ಲಿ ಸೇರಿದ್ದರೂ ಶ್ರೀ ಕಂಠನ ಮನಸ್ಸಿಗೆ ನೆಮ್ಮದಿಯಿರಲಿಲ್ಲ. ಈ ಯಶಸ್ಸಿಗೆ ಯಾರು ನಿಜವಾದ ಹಕ್ಕುದಾರರೋ ಅವರೇ ಇರಲಿಲ್ಲ. ' ಸ್ವರ್ಣ ಇದ್ದಿದ್ದರೆ............ ' ಎಂದು ಕೊಂಡ.

' ಇನ್ನೆಲ್ಲಿ ಸ್ವರ್ಣ........ '

' ಅವಳು ಗಂಡನ ಮನೆಯಲ್ಲಿ ಸುಖವಾಗಿದ್ದಾಳೆ. '

' ಈ ವೇಳೆಗೆ ನನ್ನ ನೆನಪೂ ಮರೆತು ಹೋಗಿರಬಹುದು. '

ಶ್ರೀಕಂಠನ ಮನಸ್ಸಿನ ಮೇಲೆ ನಿರ್ವಿಣ್ಣತೆಯ ಮೋಡ ಮುಸುಕಿದೊಡ ನೆಯೇ, ಅದನ್ನು ಚದುರಿಸಲು ರಾಜು ಪ್ರಯತ್ನಿಸುತ್ತಿದ್ದ.

" ಷುರುವಾಯಿತೋ ನಿನ್ನ ಯೋಚನೆ ? "

" ಏನು ಯೋಚನೆ ? "

" ಅದನ್ನು ನಾನೇನು ಬಲ್ಲೆ. ನಿನಗೆ ಗೊತ್ತು - ನಿನ್ನೊಳಗಿರುವ ಭಗ ವಂತನಿಗೆ ಗೊತ್ತು. "

" ಭಗವಂತನಿಗೆ ಗೊತ್ತೇ ? "

" ಭಗವಂತನ ಬಗ್ಗೆಯೇ ನೀನು ಸಂಶಯ ತಳೆದಿರುವ ಹಾಗೆ ಕಾಣು ತ್ತದೆ. "

" ಸಂಶಯವೂ ಇಲ್ಲ, ನಂಬಿಕೆಯೂ ಇಲ್ಲ. ಅವನಿದ್ದಾನೆಂಬುದೇ ನನಗೆ

ಇನ್ನೂ ಮನವಟ್ಟಾಗಿಲ್ಲ. ”

“ ಆಗುತ್ತದೆ – ಕಾಲಕ್ರಮೇಣ ಬೇಡವೆಂದರೂ ಅನುಭವವಾಗುತ್ತದೆ.”

ಎಂದು ರಾಜು ಹೇಳಿ ಅವನನ್ನು ಹೊರಗೆ ಹೊರಡಿಸಿದ.

ಗೆಳೆಯರು ಉಪಹಾರ ಮುಗಿಸಿಕೊಂಡು ದೊಡ್ಡ ಕೆರೆಯ ರಸ್ತೆಯಲ್ಲಿ ಹೊರಟರು. ಸಂಜೆಯೇಕೋ ಭಾರವಾಗಿದ್ದಿತು. ಗಾಳಿಯ ಚಲನವಲನವಿಲ್ಲ. ರಾಜು ಯಾವುದೋ ವಿಷಯ ತಿಳಿಸಲಿಚ್ಛಿಸಿ ಎರಡು ಮೂರು ಸಾರಿ ಗಂಟಲು ಸರಿಮಾಡಿಕೊಂಡ. ಬಾಯಿಂದ ಮಾತು ಹೊರಡದು. ಸ್ಥೈರ್ಯ ತಂದು ಕೊಂಡು ಮೆಲ್ಲನೆ

“ ಶ್ರೀಕಂಠ, ನಾನು ಮುಂಬಯಿಗೆ ಹೊರಡುವುದು ನಿಶ್ಚಯವಾಯಿತು.”

“ ನಿಶ್ಚಯವಾಯಿತೇ ? ಯಾವಾಗ ಪ್ರಯಾಣ ? ”

“ ಈ ವಾರದ ಕೊನೆಯೊಳಗಾಗಿ ಮುಂಬಯಿ ಸೇರಬೇಕು. ಅಲ್ಲಿ ಕ್ಲಾಸುಗಳು ಆರಂಭವಾಗಿವೆ. ”

“ ಸ್ಕಾಲರ್‌ಷಿಪ್ ! ”

“ ಅಪ್ಲಿಕೇಷನ್ ಕೊಟ್ಟಿದ್ದೇನೆ. ನೀನು ಹೋಗಿ ಕ್ಲಾಸ್ ಸೇರಿಕೋ. ನಾನು ಸ್ಯಾಂಕ್ಷನ್ ಮಾಡಿಸುತ್ತೇನೆ ಎಂದು ಸೂಪರಿಂಟೆಂಡೆಂಟರು ಹೇಳಿದರು.”

“ ಕೈಯಲ್ಲಿ ಸಾಕಷ್ಟು ಹಣವಿದೆಯೇ ? ”

“ ಇದೆ. ‘ ಗಾಯಿತ್ರಿ ಭವನ ’ ದವರಿಗೆ ನಾನು ಮಾಡಿಕೊಟ್ಟಿರುವ ರಾಷ್ಟ್ರಮುಖಂಡರ ತೈಲಚಿತ್ರಗಳಿಗೆ ಹಣ ಬಂದಿದೆ. ”

“ ಪರಸ್ಥಳದಲ್ಲಿ ಅವಸ್ಥೆಪಡಬೇಡ. ಹಣ ಬೇಕಾದರೆ ನಾನು ಕೊಟ್ಟಿರು ತ್ತೇನೆ. ”

“ ಸದ್ಯ ಹಣದ ಆವಶ್ಯಕತೆಯಿಲ್ಲ. ಬೇಕಾದರೆ ಬರೆಯುತ್ತೇನೆ. ”

“ ನನಗಿದ್ದವನು ನೀನೊಬ್ಬ ಸ್ನೇಹಿತ–ನೀನೂ ಹೋಗಿ ಬಿಡುವೆಯಾ?”

“ ನೀನೂ ಬೇಗ ಮುಂಬಯಿಗೆ ಬರುವೆಯಷ್ಟೆ. ”

“ ನಿನ್ನ ಜತೆಯಲ್ಲಿಯೇ ಬರಲು ಸಿದ್ಧನಾಗಿದ್ದೇನೆ. ”

“ ಈಗಲೇ ಬೇಡ. ನಿನ್ನ ಶಿಲ್ಪಗಳಿಗೆ ಇಲ್ಲಿ ಒಳ್ಳೆಯ ಯಶಸ್ಸು ಸಿಕ್ಕಿದೆ. ಇನ್ನೂ ನಾಲ್ಕಾರು ಕೃತಿಗಳನ್ನು ರಚಿಸಿ ನೀನು ಮುಂಬಯಿಗೆ ಬರುವುದೊಳ್ಳೆ ಯದು. ”

ಅರಮನೆಯ ದ್ವಾರ ದಾಟಿ ಸ್ವಲ್ಪ ಮುಂದೆ ಅರಳೀಕಟ್ಟೆಯ ಬಳಿಗೆ ಬರುವಲ್ಲಿ ಎದುರಿಗೆ ನಾಲ್ವರು ಹೆಣ್ಣುಮಕ್ಕಳು ಎದುರು ಬರುತ್ತಿದ್ದರು. ಅವರು ದೇವಾಲಯದಿಂದ ಹಿಂದಿರುಗುತ್ತಿದ್ದರೆಂಬುದನ್ನು ಅವರ ಕೈಯಲ್ಲಿದ್ದ ಒಡೆದ ಕಾಯಿ ಹೋಳುಗಳು ಸಾರುತ್ತಿದ್ದವು.

ಹೆಣ್ಣುಮಕ್ಕಳನ್ನು ನೋಡಿದ ಶ್ರೀಕಂಠ ಸ್ತಂಭೀಭೂತನಾಗಿ ನಿಂತ. ಅವನ ಕಾಲು ಮುಂದೆ ಹಾಯಲಿಲ್ಲ.

" ಇದೇಕಯ್ಯಾ " ಎಂದು ರಾಜು ಕೇಳಿದ.

" ಸ್ವಲ್ಪ ತಡೀ ರಾಜು. "

ಎಂದವನೇ ಶ್ರೀಕಂಠ ಹಿಂದಿರುಗಿ ಮತ್ತೊಮ್ಮೆ ಹೆಣ್ಣುಮಕ್ಕಳನ್ನು ನೋಡಿಕೊಂಡು ರಾಜುವಿದ್ದಲ್ಲಿ ಬಂದ.

ಶ್ರೀಕಂಠನ ವರ್ತನೆ ರಾಜುವಿಗೆ ಆಶ್ಚರ್ಯವನ್ನುಂಟು ಮಾಡಿತು. ಕಂಡವರ ಮನೆಯ ಹೆಣ್ಣುಮಕ್ಕಳನ್ನು ನೋಡುವುದು, ಅವರನ್ನು ಹಿಂಬಾಲಿಸುವುದು ಅವರಿಗೆ ಕಿರುಕುಳ ಕೊಡುವುದು ಮೊದಲಾದ ಬಾಲವ್ಯಾಧಿಗಳ ಸೋಂಕು ಶ್ರೀಕಂಠನಿಗಿರಲಿಲ್ಲ ಎಂದು ನಂಬಿದ್ದ ರಾಜು ಚಿಂತಾಕ್ರಾಂತನಾದ.

ಹೆಣ್ಣುಮಕ್ಕಳನ್ನು ನೋಡಿ ಹಿಂದಿರುಗಿದ್ದ ಶ್ರೀಕಂಠನ ಮುಖ ಆರಕ್ತವಾಗಿತ್ತು.

" ದೆವ್ವವೋ ಭೂತವೋ ಕಂಡವನಂತೆ ಆಗಿರುವೆಯಲ್ಲಾ ಶ್ರೀಕಂಠ. "

" ಈಗ ಹೋದ ಹೆಣ್ಣುಮಕ್ಕಳನ್ನು ನೋಡಿದೆಯಾ ? "

" ದಿಟ್ಟಿಸಿ ನೋಡಲಿಲ್ಲಪ್ಪಾ. ಏಕೆ ? "

" ಆ ಗುಂಪಿನಲ್ಲಿ ಸ್ವರ್ಣ ಇದ್ದಳು, "

" ಸ್ವರ್ಣ ಇಲ್ಲಿ ಹೇಗೆ ಬರಬೇಕು. "

" ಅವಳಿಗೆ ಇಲ್ಲೇ ಮದುವೆಯಾಗಿರಬೇಕು. "

ಶ್ರೀಕಂಠನ ತರ್ಕ ರಾಜು ಮನಸ್ಸಿಗೆ ಕಳವಳವನ್ನುಂಟು ಮಾಡಿತು.

" ಆದರೆ ಆಗಲಿ ಬಿಡು. ಅದು ಕಳೆದು ಹೋದ ಕಥೆ. ಅದನ್ನೇ ಯೋಚಿಸಿದರೆ ಏನು ಪ್ರಯೋಜನ. ಇನ್ನು ಸ್ವರ್ಣನನ್ನು ಕುರಿತು ನೀನು ಆಲೋಚಿಸುವುದೂ ನ್ಯಾಯವಲ್ಲ. "

" ನೀನು ಹೇಳುವುದು ನಿಜ ರಾಜು. ಅವಳು ಕಂಡವರ ಸೊತ್ತು.

ಅದಕ್ಕೆ ನಾನು ಆಸೆಪಡುವುದು ನ್ಯಾಯವಲ್ಲ. ಆದರೆ........ ನನ್ನ ಮನಸ್ಸಿನ ಮೇಲೆ ಅವಳ ಛಾಯೆ ಮೂಡಿದರೆ ಸಾಕು. ನಿರ್ಧಾರವೆಲ್ಲಾ ಗಾಳಿ ಪಾಲಾಗುತ್ತದೆ."

"ಮನಸ್ಸನ್ನು ನಿರೋಧಿಸುವುದೇ ಯೋಗ. ಶಿಲ್ಪಿಯೂ ಯೋಗಿಯಲ್ಲವೇ ?"

"ಹೌದು. ಅವನು ಮನುಷ್ಯನೂ ಆಗಿದ್ದಾನೆ."

ವಾಯುವಿಹಾರ ಮುಗಿಸಿಕೊಂಡು ಮನೆಸೇರಿದ ಮೇಲೂ ಶ್ರೀಕಂಠನ ಸ್ಮೃತಿಯಿಂದ ಸ್ವರ್ಣನ ನೆನಪು ಹೋಗಲಿಲ್ಲ. ನಿಂತರೆ, ಕುಳಿತರೆ ಅದೇ ನೆನಪು.

'ಶಿಲ್ಪಿಯೂ ಯೋಗಿ.'

'ಕಲಾವಿದನಿಗೆ ಲೌಕಿಕ ಸುಖವಿಲ್ಲ. ಕಲೆಯೇ ಅವನ ಸರ್ವಸ್ವ.'

'ಹೆಣ್ಣು ಮಾಯೆ – ಅದಕ್ಕೆ ವಶನಾಗಕೂಡದು.'

ಈ ಮಾತುಗಳನ್ನು ಬಹಳ ಹಿಂದೆಯೇ ತಂದೆ ಹೇಳಿದ್ದ. ಈಗ ರಾಜು ಇದೇ ಮಾತುಗಳನ್ನೇ ಹೇಳುತ್ತಿದ್ದಾನೆ.

'ಚಿತ್ತವೃತ್ತಿಯನ್ನು ಕಲೆಯ ಕಡೆ ತಿರುಗಿಸುವುದೇ ಇದಕ್ಕೆ ಪರಿಹಾರ'

ಎಂದು ಚಿಂತಿಸಿ ಮಣ್ಣು ಹದ ಮಾಡಿಕೊಂಡ. ಥಾಂಪ್ಸನ್ ಸಾಹೇಬರಿಗೆ ವಾಗ್ದಾನ ಮಾಡಿದ್ದ 'ಕಾಳೀಯ ಮರ್ದನ' ಶಿಲ್ಪ ಕೃತಿರೂಪಕ್ಕೆ ಇಳಿಯಬೇಕಾಗಿತ್ತು.

ಬಹಿರಾಕೃತಿಯನ್ನು ಸ್ಥೂಲವಾಗಿ ಮಣ್ಣಿನಲ್ಲಿ ತಿದ್ದಿದ. ಆದರೆ ಕೈ ಮುಂದಕ್ಕೆ ಓಡದು.

'ಸ್ವರ್ಣ — ಸ್ವರ್ಣ — ಸ್ವರ್ಣ.'

'ನನ್ನ ಸ್ವರ್ಣ ಇಲ್ಲೇ ಇರುವಳೇ ?'

ಬಲವಂತದ ಮಾಘಸ್ನಾನ ಬೇಡವೆಂದು, ಕೈ ತೊಳೆದುಕೊಂಡು ಬಂದು ಕುಳಿತ.

ಕತ್ತಲೆಯಲ್ಲಿ ಮಕ್ಕಳನ್ನಂಜಿಸುವ ನೆಳಲಿನಂತೆ ಸ್ವರ್ಣನ ನೆನಪು ಅವನನ್ನು ಕಾಡತೊಡಗಿತು.

ಪ್ರಶಾಂತವಾಗಿದ್ದ ಶ್ರೀಕಂಠನ ಮನಸ್ಸಿನ ತಿಳಿಗೊಳದ ಮೇಲೆ ಸ್ವರ್ಣ

ಸಣ್ಣ ಹರಳೊಂದನ್ನು ಒಗೆದಿದ್ದಳು. ಪ್ರಶಾಂತವಾಗಿದ್ದ ಪುಷ್ಕರಿಣಿ ಹುಚ್ಚೆದ್ದು ಕುಣಿಯತೊಡಗಿತ್ತು. ಮೂರು ನಾಲ್ಕು ದಿವಸಗಳು ಕಳೆದರೂ ಶ್ರೀಕಂಠನ ಮನಸ್ಸು ಹತೋಟಿಗೇ ಬರಲೊಲ್ಲದು.

ಸ್ವರ್ಣನನ್ನು ಕಂಡೂ ಕಾಣದಂತಾಯಿತಲ್ಲಾ ಎನ್ನುವ ಚಿಂತೆ ಒಂದು ಕಡೆ; 'ಕಾಳೀಯ ಮರ್ದನ' ಮನಸ್ಸಿನಲ್ಲಿ ರೂಪುಗೊಂಡಿದ್ದರೂ ಅದನ್ನು ನಿರ್ವಹಿಸಲಾಗದ ಅಸಹಾಯಕತೆ ಇನ್ನೊಂದು ಕಡೆ. ಇಂಥ ವಿಷಣ್ಣ ಸಮಯ ಗಳಲ್ಲಿ ನೆರವಿಗೆ ನಿಂತು, ಹುರಿಮುಂಬಿಸಿ, ಮಾರ್ಗದರ್ಶನ ಮಾಡುತ್ತಿದ್ದ ರಾಜು ಮುಂಬಯಿ ಸೇರಿಬಿಟ್ಟಿದ್ದ. 'ರಾಜು ಜತೆಯಲ್ಲಿಯೇ ನಾನು ಹೊರಟು ಹೋಗಿ ದ್ದರೆ ಚೆನ್ನಾಗಿತ್ತು' ಎಂದು ಶ್ರೀಕಂಠ ಪರಿತಪಿಸಿದ.

ವಿಕಲ್ಪಗೊಂಡಿದ್ದ ಮನಸ್ಸನ್ನು ಮತ್ತೆ ಸಮಸ್ಥಿತಿಗೆ ತರಬೇಕಾದರೆ ಶ್ರೀಕಂಠನಿಗೆ ಸಾಕುಸಾಕಾಗಿ ಹೋಯಿತು. 'ಕಾಳೀಯ ಮರ್ದನ' ನಿಗೆ ಅದನ್ನರ್ಪಿಸಿಬಿಡುವುದೇ ಶ್ರೇಯಸ್ಕರವೆಂದು ಶ್ರೀಕಂಠ ಭಾವಿಸಿದ.

ವಿದ್ಯುದಾವೇಗಕ್ಕೆ ಒಳಗಾಗಿದ್ದ ಶ್ರೀಕಂಠನ ಕ್ರಿಯಾಶಕ್ತಿ ಶಿಲ್ಪಸಮಾರ್ಪ ಣಕ್ಕೆ ವಿನಿಯೋಗವಾಯಿತು. ಎರಡೇ ವಾರಗಳಲ್ಲಿ 'ಕಾಳೀಯ ಮರ್ದನ' ಮೈತುಂಬಿ ನಿಂತ.

ಶ್ರೀಕಂಠ ಒಂದು ಬೆಳಿಗ್ಗೆ ಶಾಲೆ ಮುಗಿಸಿಕೊಂಡು ಮನೆಗೆ ಬರುತ್ತಾ ಶ್ರೀನಿವಾಸಲು ಪತಡಿಯ ಬಳಿಗೆ ಬಂದ.

"ನಟರಾಜನಿಗೆ ಮಾಡಿಕೊಟ್ಟಂಥ ಜೋದಿಗೆ ಇನ್ನೊಂದು ಬೇಕು ಶ್ರೀನಿವಾಸಲು. ಎಲ್ಲಾ ಹಾಗೇ ಇರಬೇಕು. ನೂಲಿನೆಳೆಯಷ್ಟೂ ಅಳತೆಯಲ್ಲಿ ವ್ಯತ್ಯಾಸವಾಗಬಾರದು"

"ಹಾಗೇ ಮಾಡಿಕೊಡುತ್ತೇನೆ."

"ಬೇಗ ಕೊಡಬೇಕು."

"ಐದಾರು ದಿನಗಳಲ್ಲಿ ತಂದೊಪ್ಪಿಸುತ್ತೇನೆ."

ಶ್ರೀನಿವಾಸಲು ಮನೆಯಪಕ್ಕದ ರಸ್ತೆಯಲ್ಲಿ ಹೊರಟು ಬರುವಾಗ, ಯಾವಳೋ ಹೆಣ್ಣುಮಗಳು ಊಟಮಾಡಿದೆಲೆ ಬಿಸಾಡಲು ಹೊರಬಂದಿದ್ದಳು.

ಶ್ರೀಕಂಠ ಅವಳನ್ನು ನೋಡಿದ.

ಅವಳೂ ಶ್ರೀಕಂಠನನ್ನು ನೋಡಿದಳು.

ಸ್ವರ್ಣ ! —

ಸ್ವರ್ಣ ಕ್ಷಣಕಾಲವೂ ಅಲ್ಲಿ ನಿಲ್ಲದೆ ಒಳಗೆ ಹೊರಟುಹೋದಳು.

ಶ್ರೀಕಂಠನ ತಲೆಸುತ್ತಲಾರಂಭಿಸಿತು.

‘ ಸ್ವರ್ಣ ಶ್ರೀನಿವಾಸಲು ಹೆಂಡತಿಯೇ ? ’

‘ ಇಷ್ಟುದಿನದಿಂದ ಸ್ವರ್ಣ ಇಲ್ಲೇ ಇರುವಳೇ ? ’

ಎಂದುಕೊಂಡೇ ಮನೆಸೇರಿದ.

ಅಂದಿನಿಂದ ಶ್ರೀಕಂಠನ ಮನಸ್ಸಿನಲ್ಲಿ ಒಂದೇವಿಚಾರ- ‘ ಸ್ವರ್ಣನನ್ನು ನೋಡುವುದು ಹೇಗೆ - ಅವಳೊಂದಿಗೆ ಮಾತನಾಡುವುದು ಹೇಗೆ ? ’

ಇನ್‌ಸ್ಟಿಟ್ಯೂಟಿನ ಹಿಂದೆ ಎರಡು ರಸ್ತೆಗಳು ಕಳೆದಮೇಲೆ ಮೂರನೆಯ ಸಮಾನಾಂತರ ರಸ್ತೆಯಲ್ಲಿಯೇ ಶ್ರೀನಿವಾಸಲು ಪಠಡಿ, ಮನೆ. ಪೂರ್ವಾಭಿಮುಖನಾಗಿ ಪಠಡಿ ಇತ್ತು. ದಕ್ಷಿಣದ ಭಾಗದ ರಸ್ತೆಗೆದುರಾಗಿ ಮನೆಯ ಬಾಗಿಲು. ಪಠಡಿಹಿಂದೆಯೇ ಮನೆಯಿದ್ದರೂ ಅದಕ್ಕೆ ಪ್ರತ್ಯೇಕ ಪ್ರವೇಶವಿತ್ತು.

ಬೋದಿಗೆಯ ನೆಪಮಾಡಿಕೊಂಡು ಶ್ರೀಕಂಠ ಪದೇ ಪದೇ ಶ್ರೀನಿವಾಸಲು ಪಠಡಿಗೆ ಬರಲಾರಂಭಿಸಿದ. ಯಾವಾಗಬಂದರೂ ಆಶಾಭಂಗ. ಮನೆಯ ಬಾಗಿಲು ತೆರೆಯುತ್ತಿರಲಿಲ್ಲ. ಸ್ವರ್ಣ ಪಠಡಿಯೊಳಗೆ ಸುಳಿಯುತ್ತಿರಲಿಲ್ಲ.

‘ ಎಷ್ಟು ಸಮೀಪ - ಆದರೆ ಎಷ್ಟು ದೂರ ! ’

ಶ್ರೀಕಂಠನಿಗೊಂದೇ ಸಮಾಧಾನ. ‘ ಸ್ವರ್ಣ ಇದೇ ಊರಿನಲ್ಲಿದ್ದಾಳೆ- ಇಲ್ಲೇ ಇದ್ದಾಳೆ - ಇಂದಲ್ಲನಾಳೆ ಅವಳ ಮುಖದರ್ಶನ ಸಿಕ್ಕಬಹುದು. ’

ಒಂದು ದಿನ ಶ್ರೀಕಂಠ ಪಠಡಿಗೆ ಬಂದಾಗ ಶ್ರೀನಿವಾಸಲು ಇರಲಿಲ್ಲ. ಮೂಲೆಯಲ್ಲಿ ಶ್ರೀನಿವಾಸಲು ಆಳು ಲಕ್ಷ್ಮಯ್ಯ ಕರೀಮರದ ತುಂಡೊಂದನ್ನು ಚೆಗ್ಗುತ್ತ ಕುಳಿತಿದ್ದ.

‘ ಇಂದು ಹೇಗಾದರೂ ಸ್ವರ್ಣನನ್ನು ಕಾಣಲೇ ಬೇಕು ’ ಎಂದುಕೊಂಡು ಶ್ರೀಕಂಠ, ಮೆಲ್ಲನೆ ಲಕ್ಷ್ಮಯ್ಯನ ಜತೆ ಮಾತಿಗಾರಂಭಿಸಿ

“ ಲಕ್ಷ್ಮಯ್ಯ, ಸ್ವಲ್ಪ ಇನ್‌ಸ್ಟಿಟ್ಯೂಟ ತನಕ ಹೋಗಿ ಬರುವೆಯಾ ” ಎಂದು ಕೇಳಿದ.

“ ಏಕೆ ಸ್ವಾಮಿ. ಏನಾದರೂ ಕೆಲಸವಿತ್ತೇ ? ”

“ ಇತ್ತು. ಸೂಪರಿಂಟೆಂಡೆಂಟು ಇದ್ದಾರೆಯೇ ನೋಡಿಕೊಂಡು ಬರು

ವೆಯಾ ? ”

“ ಆಗಲಿ ಸ್ವಾಮಿ. ”

“ ಯಜಮಾನರು ಎಷ್ಟು ಹೊತ್ತಿಗೆ ಬರುತ್ತಾರೆ. ”

“ ಕೃಷ್ಣರಾಜೇಂದ್ರ ಮಿಲ್ಲಿಗೆ ಫರ್ನಿಚರ್ ಬೇಕಾಗಿತ್ತಂತೆ. ಅಲ್ಲಿಗೆ ಹೋಗಿದ್ದಾರೆ. ಅರ್ಧ ಮುಕ್ಕಾಲು ಗಂಟೆಯಲ್ಲಿ ಬರಬಹುದು. ”

ಲಕ್ಷ್ಮಯ್ಯ ಹೋದ ಮೇಲೆ ಶ್ರೀಕಂಠ ಮೆಲ್ಲನೆದ್ದು ಪಡಸಾಲೆಯಿಂದ ಮನೆಯೊಳಗೆ ಹೋಗುವ ಬಾಗಿಲು ಸರಿಸಿ ಇಣಿಕಿ ನೋಡಿದ. ಎದುರಿಗೆ ಸ್ವರ್ಣ ಸೀರೆ ಹರವುತ್ತ ನಿಂತಿದ್ದಳು. ಕ್ಷೀಣ ಸ್ವರದಲ್ಲಿ

“ ಸ್ವರ್ಣ ” ಎಂದು ಕೂಗಿದ.

ಸ್ವರ್ಣ ಬೆಚ್ಚಿದಳು. ಅವಳ ಜಂಘಾಬಲವೇ ಉಡುಗಿ ಹೋಗಿತ್ತು. ಶ್ರೀಕಂಠ ಒಳಗೆಲ್ಲಿ ಬಂದು ಬಿಡುವನೋ ಎಂದು ಹೆದರಿ ಮೆಲ್ಲನೆ ಬಾಗಿಲು ಬಳಿ ಬಂದು ನಿಂತಳು.

“ ನಿನ್ನ ಕೈಲಿ ಮಾತನಾಡಬೇಕು. ”

“ ಇಲ್ಲಿ ಸಾಧ್ಯವಿಲ್ಲ. ಅವರು ಬಂದು ಬಿಡುತ್ತಾರೆ. ”

“ ಅವರು ಬರುವುದಕ್ಕೆ ಇನ್ನೂ ಅರ್ಧ ಗಂಟೆ ಇದೆ. ”

“ ಲಕ್ಷ್ಮಯ್ಯ ! ”

“ ಅವನನ್ನು ಇನ್‌ಸ್ಟಿಟ್ಯೂಟಿಗೆ ಕಳಿಸಿದ್ದೇನೆ. ”

“ ಇಲ್ಲಿ ಮಾತಾಡಲು ಸಾಧ್ಯವಿಲ್ಲ. ”

“ ಹಾಗಾದರೆ ಮತ್ತೆಲ್ಲಿ ? ”

“ ಎಲ್ಲಿಯೂ ಸಾಧ್ಯವಿಲ್ಲ. ”

“ ನೀನು ಒಲ್ಲೆಯೆಂದರೆ ನಾನು ಕೇಳುವುದಿಲ್ಲ. ನಾನು ಮಾತನಾಡಲೇ ಬೇಕು. ”

ಸ್ವರ್ಣನಿಗೆ ಉಭಯ ಸಂಕಟಕ್ಕಿಟ್ಟುಕೊಂಡಿತು. ಒಳಗೊಂದು ಕಣ್ಣು – ಹೊರಗೊಂದು ಕಣ್ಣು. ಒಳಗಿನಿಂದ ಅತ್ತೆ ಬರುವರೆಂಬ ಭಯ – ಹೊರಗಿನಿಂದ ಗಂಡ ಬರುವನೆಂಬ ಭಯ. ಶ್ರೀಕಂಠನ ಧ್ವನಿಯಲ್ಲಿದ್ದ ಗಡಸು ಅವನ ನಿರ್ಧಾರವನ್ನು ಸೂಚಿಸುತ್ತಿತ್ತು.

“ ಇಲ್ಲಿ ನಿಲ್ಲಬೇಡ. ದಯವಿಟ್ಟು ಹೊರಟುಹೋಗು ಶ್ರೀಕಂಠ. ”

" ಪುನಃ ನಿನ್ನನ್ನು ನೋಡುವುದು ? "

" ನನ್ನನ್ನೇಕೆ ನೋಡಬೇಕು. "

" ಅದನ್ನು ಸಾವಕಾಶವಾಗಿ ಚರ್ಚಿಸೋಣ. "

" ಇಲ್ಲಿ ನಿಲ್ಲಬೇಡ ಶ್ರೀಕಂಠ. ದಯೆಯಿಟ್ಟು ಹೋಗು. "

" ನೀನು ಒಪ್ಪುವ ವರೆಗೆ ಈ ಸ್ಥಳಬಿಟ್ಟು ಕದಲುವುದಿಲ್ಲ. "

" ನಾಳೆ ಬರುತ್ತೇನೆ – ಹೋಗು. "

" ಎಷ್ಟು ಹೊತ್ತಿಗೆ ? "

" ಸಂಜೆ ಏಳು ಗಂಟೆಗೆ ? "

" ಶ್ರೀನಿವಾಸಲು ಮನೆಯಲ್ಲಿರುವುದಿಲ್ಲವೇ ? "

" ಸಂಜೆ ಒಂದೆರಡು ಗಂಟೆ ಅವರು ಹೊರಗೆ ಹೋಗುತ್ತಾರೆ. "

" ನಾನು ದಕ್ಷಿಣ ಬಾಗಿಲು ಕಡೆ ಕಾಣಿಸಿಕೊಳ್ಳುತ್ತೇನೆ. ಜತೆಯಲ್ಲಿ ಬಂದು ಬಿಡು – ನನ್ನ ರೂಮು ಹತ್ತಿರದಲ್ಲೆ ಇದೆ. "

" ಹಾಗೇ ಆಗಲಿ. "

" ಮಾತಿಗೆ ತಪ್ಪಕೂಡದು. "

" ಇಲ್ಲ – ತಪ್ಪುವುದಿಲ್ಲ. "

" ನನ್ನಾಣೆ. "

" ನಿನ್ನಾಣೆ. "

ಶ್ರೀಕಂಠ ಬಾಗಿಲು ಬಿಟ್ಟೊಡನೆಯೇ ಸ್ವರ್ಣ ಬಾಗಿಲು ಹಾಕಿಕೊಂಡಳು. ಶ್ರೀಕಂಠ ಸ್ವಸ್ಥಾನದಲ್ಲಿ ಬಂದು ಕುಳಿತ.

ಲಕ್ಷ್ಮಯ್ಯ ಹಿಂದಿರುಗಿದವನು

" ಇನ್‌ಸ್ಟಿಟ್ಯೂಟೆಲ್ಲಾ ಹುಡುಕಿದೆ ಸಾರ್. ಅವರು ಕಾಣಲಿಲ್ಲ. "

ಎಂದು ಹೇಳಿದ.

" ನಾನು ಬಂದಿದ್ದೆ ಎಂದು ಶ್ರೀನಿವಾಸಲೂಗೆ ಹೇಳು "

ಎಂದು ತಿಳಿಸಿ ಶ್ರೀಕಂಠ ಮನೆಯ ಕಡೆ ಹೊರಟ.

ಶ್ರೀಕಂಠನ ಮನಸ್ಸಿಗೆ ತುಸು ತೃಪ್ತಿಯಾಗಿತ್ತು.

'ನಾಳೆ - ನಾಳೆ ಸ್ವರ್ಣ ಬರುತ್ತಾಳೆ' ಎಂದು ಅವನ ಹೃದಯ ಮೊರೆಯ ತೊಡಗಿತು.

ಮಾರನೆಯ ದಿನ ಶ್ರೀಕಂಠನಿಗೆ ಸ್ವಲ್ಪವೂ ಬಿಡುವಿಲ್ಲ. ಸಂಜೆಯ ವೇಳೆಗೆ ತನ್ನ ರೂಮನ್ನು ಸ್ವಚ್ಛವಾಗಿ ಗುಡಿಸಿ, ಸಾರಿಸಿ, ಮಣ್ಣು ಮುದ್ದೆಯನ್ನು ಮೂಲೆ ಗೊತ್ತರಿಸಿ ಶಿಲ್ಪಗಳನ್ನು ಕ್ರಮವಾಗಿ ಜೋಡಿಸಿಟ್ಟ. ಐದು ಗಂಟೆಯ ವೇಳೆಗೇ ಹೋಟೆಲಿಗೆ ಹೋಗಿ ತಿಂಡಿ ಸಾಮಾನುಗಳನ್ನೂ ಥರ್ಮಾಸ್ ಫ್ಲ್ಯಾಸ್ಕನಲ್ಲಿ ( Thermos Flask ) ಕಾಫಿಯನ್ನೂ ತಂದಿಟ್ಟ. ಮಾರ್ಕೆಟ್ಟಿಗೆ ಹೋಗಿ ಬಗೆ ಬಗೆಯ ಹಣ್ಣುಗಳನ್ನೂ ಹೂವುಗಳನ್ನೂ ಆರಿಸಿ ಕೊಂಡು ತಂದ.

ಅವನು ಮನೆ ತಲುಪುವವೇಳೆಗೆ ಬಾಗಿಲು ಬಳಿ ಒಂದು ಕಾಗದ ಬಂದಿತ್ತು, ಶ್ರೀಕಂಠ ಅದನ್ನು ಕೈಗೆತ್ತಿಕೊಂಡು ನೋಡಿದ. ತಾನು ಬಹಳ ದಿನಗಳಿಂದ ನಿರೀಕ್ಷಿಸುತ್ತಿದ್ದ ರಾಜೂ ಕಾಗದ. ಅದನ್ನು ಒಡೆದು ನೋಡಲೂ ವ್ಯವಧಾನವಿಲ್ಲ - ಮನಸ್ಸಿಗೆ ಯಾವದೂ ಬೇಡವಾಗಿತ್ತು – ರಾಜೂ ಕಾಗದ ಕೂಡ.

ಗಂಟೆ ಆರುಹೊಡೆದಿತ್ತು. ಇನ್ನೂ ಒಂದು ಗಂಟೆಯಕಾಲ ಕಾಯ ಬೇಕು. ಅರವತ್ತು ನಿಮಿಷಗಳು - ಅರವತ್ತುಯುಗಗಳು ! ಆ ಗಂಟೆಕಳೆಯಲು ಏನಾದರೂ ಉದ್ಯೋಗ ಬೇಕಾಗಿತ್ತು. ತಿಂಡಿ ಪೊಟ್ಟಣಗಳನ್ನು ಬಿಚ್ಚಿ ತಟ್ಟೆ ಗಳಲ್ಲಿ ಅಣಿಮಾಡಿಟ್ಟ. ಹಣ್ಣುಗಳನ್ನು ಸುಲಿದು ತಟ್ಟೆಗಳಲ್ಲಿ ತುಂಬಿಟ್ಟ.

ಗಂಟೆ ಮುಂದಕ್ಕೇ ಸಾಗಲೊಲ್ಲದು. ಕುಂಟುತ್ತ ಎಡವುತ್ತ ಸಾಗಿದ್ದ ಟೈಮ್ ಪೀಸಿನ ( Time Piece ) ಕಡೆ ತಿರುಗಿನೋಡಿದ. ಅವನ ಕೆಂಗಣ್ಣಿ ನಿಂದ ಕಿಡಿ ಕಾರಿತು. ಕಾಲನ ಗತಿಯನ್ನು ಗಡಿಯಾರ ಕುದುರಿಸಬಲ್ಲುದೇ ?

೮

ಮನೆಯಲ್ಲಿ ಕೂಡುವುದು ಶ್ರೀಕಂಠನಿಗೆ ಅಸಾಧ್ಯವಾಯಿತು. ಎದ್ದು ಹೊರಟ. ಗಡಿಯಾರದ ಮುಳ್ಳು ಆರಕ್ಕೆ ಬರುತ್ತಿದ್ದಂತೆ ಶ್ರೀಕಂಠ ಸ್ವರ್ಣನ ಮನೆ ಸಮೀಪಿಸಿದ.

ರಸ್ತೆಯಲ್ಲಿ ಹೆಚ್ಚು ಜನರ ಓಡಾಟವಿರಲಿಲ್ಲ. ಶ್ರೀನಿವಾಸಲು ಪರಡಿಯ ಬಾಗಿಲೂ ಹಾಕಿತ್ತು. ಮನೆಯ ಬಾಗಿಲೂ ಹಾಕಿತ್ತು.

ದೊಡ್ಡ ಗಡಿಯಾರದಲ್ಲಿ ' ಥಣ್–ಥಣ್ ' ಎಂದು ಆರು ಹೊಡೆಯಿತು.

ಶ್ರೀಕಂಠನ ಎದೆಯಲ್ಲಿ ಸತತವಾಗಿ ' ಢಣ್‌–ಢಣ್ ' ಶಬ್ದ.

ಸ್ವರ್ಣನ ಬಾಗಿಲು ತೆಗೆಯುವ ಚಿನ್ಹೆಯೇ ಇಲ್ಲ. ಸ್ವರ್ಣ ನನಗೆ ಮೋಸ ಮಾಡಿದಳೇ ? – ನನ್ನ ಕಾಟ ತಪ್ಪಿಸಿಕೊಳ್ಳಲು ನಾಳೆ ಬರುವೆನೆಂದು ಸುಳ್ಳು ಹೇಳಿದಳೇ ?

ಅವನ ಮನಸ್ಸು ಅಸ್ತವ್ಯಸ್ತವಾಯಿತು. ನಿರಾಶೆ, ಕ್ರೋಧಗಳೆರಡೂ ಅವನನ್ನು ಪೀಡಿಸಲಾರಂಭಿಸಿದವು.

ರಸ್ತೆಯಲ್ಲಿ ಒಂದೇ ಕಡೆ ನಿಂತರೆ ಅನುಮಾನಕ್ಕೆ ಕಾರಣವಾಗಬಹುದೆಂದು ಅತ್ತಿತ್ತ ಓಡಿಯಾಡಿದ. ಒಂದೊಂದು ನಿಮಿಷವೂ ಅವನಿಗೆ ಒಂದೊಂದು ಯುಗವಾಗಿತ್ತು.

ಸ್ವಲ್ಪ ಹೊತ್ತು ಕಳೆದಿರಬಹುದು. ಸ್ವರ್ಣನ ಬಾಗಿಲು ತೆಗೆಯಿತು. ಅವಳ ಮನೆಗೆ ಸ್ವಲ್ಪ ದೂರದಲ್ಲಿ ನಿಂತು ಶ್ರೀಕಂಠ ಮುಖ ತೋರಿಸಿದ. ಸ್ವರ್ಣ ಅವನನ್ನು ಹಿಂಬಾಲಿಸಿದಳು.

ಸ್ವರ್ಣನನ್ನು ತನ್ನ ಮನೆಯ ಮಹಡಿಯ ಮೇಲೆ ಕರೆದುಕೊಂಡು ಹೋದ ಮೇಲೇ ಶ್ರೀಕಂಠ ನಿರಾಳವಾಗಿ ಉಸಿರಾಡಿಸಿದ್ದು.

' ಸ್ವರ್ಣ ಬಂದಿದ್ದಳು. '

' ಕನಸಲ್ಲ – ಸತ್ಯ – ಸತ್ಯ. '

ಸ್ವರ್ಣನ ದೇಹಾದಂತ್ಯವೂ ನಡುಗುತ್ತಿತ್ತು. ಹಜಾರದ ಒಂದೆಡೆ ಸಾಲ ಭಂಜಿಕೆಯಂತೆ ನಿಂತು ಬಿಟ್ಟಿದ್ದಳು. ಶ್ರೀಕಂಠ ಅವಳ ಕೈಹಿಡಿದು ಬೆಂಚಿನ ಮೇಲೆ ಕೂಡಿಸಿ

" ಚೆನ್ನಾಗಿರುವೆಯಾ ? " ಎಂದು ಕೇಳಿದ.

" ಇದ್ದೇನೆ. "

" ನನ್ನ ಮೇಲೆ ಕೋಪವೇ ? "

" ಏಕೆ ? "

" ಏಕೆಯೆನ್ನುವುದು ನಿನಗೂ ಗೊತ್ತು. "

" ನನ್ನ ಕಾಗದ ನಿನ್ನ ಕೈಸೇರಿತೇ ? "

" ಸೇರಿತು. "

" ಉತ್ತರವೇಕೆ ಬರೆಯಲಿಲ್ಲ. "

" ಏನೆಂದು ಬರೆಯಲಿ. ಒಬ್ಬರ ಆಶ್ರಯದಲ್ಲಿದ್ದ ನಾನು ನಿನ್ನನ್ನು ಕರೆದುಕೊಂಡು ಬಂದು ಕಷ್ಟಕ್ಕೆ ಸಿಕ್ಕಿಸಲೇ ? "

ಸ್ವರ್ಣನ ಮುಖದ ಮೇಲೆ ನೋವಿನ ಚಿನ್ಹೆಗಳು ಕಾಣಿಸಿದವು. ಅವಳ ಕಣ್ಣುಗಳಿಂದ ಹನಿಗಳು ಜಾರಿದವು.

" ಅಳಬೇಡ ಸ್ವರ್ಣ. "

" ನನ್ನ ಕೈಯೇಕೆ ಬಿಟ್ಟೆ ಶ್ರೀಕಂಠ. ನಿನ್ನ ಜತೆ ಬೇಕಾದ ಕಷ್ಟ ಅನುಭವಿಸುವುದಕ್ಕೆ ನಾನು ಸಿದ್ಧವಾಗಿರಲಿಲ್ಲವೇ ? ನೀನು ಮಾಡಿದ್ದ ಆಣೆ ಪ್ರಮಾಣವೂ ಮರೆತು ಹೋಯಿತೇ ? "

ಗುಂಜೂರು ಬಿಟ್ಟ ದಿನದಿಂದ ಅಂದಿನವರೆಗೆ ತನ್ನ ಜೀವನದಲ್ಲಿ ನಡೆದಿದ್ದ ಎಲ್ಲ ಘಟನೆಗಳನ್ನೂ ಶ್ರೀಕಂಠ ವರದಿ ಒಪ್ಪಿಸಿದ. ಸ್ವರ್ಣನ ಮುಖ ಸ್ವಲ್ಪ ಪ್ರಸನ್ನವಾಯಿತು.

" ನೀನು ದೊಡ್ಡ ಶಿಲ್ಪಿಯಾದುದನ್ನು ಕಂಡು ನನಗೆ ಸಂತೋಷವಾಗಿದೆ. ನಿನ್ನ ಶಿಲ್ಪಗಳಿಗೆ ಸಾವಿರಾರು ರೂಪಾಯಿ ಬರುತ್ತಿವೆಯಂತೆ ! "

" ಯಾರು ಹೇಳಿದರು ? "

" ಅವರು........ "

ಶ್ರೀಕಂಠನಿಗೆ ಸಾವಿರ ಚೇಳು ಒಮ್ಮೆಲೇ ಕುಟುಕಿದಂತಾಯಿತು. ತನ್ನ ಸ್ವರ್ಣನ ಲೋಕದಲ್ಲಿ ' ಅವರು ' ಬಂದು ಸೇರಿಕೊಂಡಿತಲ್ಲಾ ಎಂದು ಕನಲಿದ.

" ನಾನು ಮನೆಗೆ ಹೋಗಬೇಕು ಶ್ರೀಕಂಠ. "

" ಇಷ್ಟು ಬೇಗ – ಬಂದಿನ್ನೂ ಹತ್ತು ನಿಮಿಷವಾಗಿಲ್ಲ. "

" ಮನೆಯಲ್ಲಿ ಅತ್ತೆಯೊಬ್ಬರೇ ಇದ್ದಾರೆ. "

" ಮನೆಯಲ್ಲಿ ಇನ್ನೂ ಯಾರು ಯಾರಿದ್ದಾರೆ ? "

" ಅವರು, ನಾನು, ಅತ್ತೆ, ನಾವು ಮೂರೇ ಜನ. "

" ಈಗೇನು ಹೇಳಿ ಬಂದೆ. "

" ಬಾಯಮ್ಮನವರ ಮನೆಗೆ ಹೋಗಿ ಬರುತ್ತೇನೆಂದು ಹೇಳಿದೆ. "

" ಬಾಯಮ್ಮ ಯಾರು ? "

" ನಮ್ಮ ಮನೆಯ ಹತ್ತಿರ ಇದ್ದಾರೆ. ಅವರ ಮಗಳು ಪಾರ್ವತಿ ನಾನೂ ತುಂಬ ಸ್ನೇಹಿತರು. "

" ಅಲ್ಲಿಗೆ ನಿಮ್ಮತ್ತೆ ನಿನ್ನ ಹುಡುಕಿಕೊಂಡು ಹೋಗುವುದಿಲ್ಲವೇ ? "

" ಇಲ್ಲ. ಅತ್ತೆಗೆ ಕಣ್ಣು ಮಂದ. ಅವರು ಮನೆಬಿಟ್ಟು ಎಲ್ಲಿಗೂ ಹೋಗುವುದಿಲ್ಲ – ನಿನ್ನ ಶಿಲ್ಪಗಳನ್ನು ನನಗೆ ತೋರಿಸುವುದಿಲ್ಲವೇ "

ಶ್ರೀಕಂಠ ಮೇಲಕ್ಕೆದ್ದು ತನ್ನ ಶಿಲ್ಪಗಳ ಅವಕುಂಠನ ತೆಗೆದು ಸ್ವರ್ಣನಿಗೆ ತೋರಿಸಿದ. ಅವಳ ಹೃದಯ ಅಕ್ಕರೆ, ಅಭಿಮಾನದಿಂದ ತುಂಬಿತು.

" ನೀನು ಇಷ್ಟು ಗಟ್ಟಿಗ ಎಂದು ನನಗೆ ಗೊತ್ತಿರಲಿಲ್ಲ ಶ್ರೀಕಂಠ. "

" ಇದೊಂದು ಒಡೆದ ಮಡಕೆ – ಇದರಲ್ಲಿ ಗಟ್ಟಿಗತನವೇನು ಬಂತು ? "

" ಅದೇಕೆ ಹಾಗನ್ನುವೆ. ಸೊಗಸಾದ ಮೂರ್ತಿಗಳನ್ನು ಮಾಡುತ್ತಿರುವೆ. ಊರಿಗೆ ಊರೇ ನಿನ್ನನ್ನು ಹೊಗಳುತ್ತಿದೆ. "

" ನಿಜ ಸ್ವರ್ಣಾ - ಸೊಗಸಾದ ಸಂಜೆ - ಕಣ್ಣಿಗೊಪ್ಪುವ ಹೂಗಳು - ಮೃದುವಾಗಿ ಬೀಸುವ ತಂಗಾಳಿ ಎಲ್ಲವೂ ಇದೆ - ಆದರೆ - ಬೆಳದಿಂಗಳಿಲ್ಲ. ಎಷ್ಟು ಸೊಗಸು, ಸೌಂದರ್ಯವಿದ್ದರೇನು ಬೆಳಕೇ ಇಲ್ಲ. "

" ನೀನೇ ಬೆಳಕು ಚೆಲ್ಲುತ್ತಿರುವಾಗ ನಿನಗೆ ಬೆಳಕಿನ ಆಗತ್ಯವೇನಿದೆ ? "

" ನಿನಗೆ ತಿಳಿಯುವ ಹಾಗೆ ಅದನ್ನು ವರ್ಣಿಸುವ ಸಾಮರ್ಥ್ಯ ನನಗಿಲ್ಲ · ಸ್ವರ್ಣಾ, ನೀನಿಲ್ಲದ ಈ ಬಾಳುವೆ ನಿರರ್ಥಕ - ನಿಷ್ಪ್ರಯೋಜಕ. "

" ಚೆಲ್ಲಿ ಹೋದ ಹಾಲು ನೆನಸಿಕೊಂಡು ಅತ್ತರೇನು ಪ್ರಯೋಜನ ಶ್ರೀಕಂಠ. "

" ನನ್ನಿಂದ ಯಾರೂ ನಿನ್ನನ್ನು ಕಸುಗೊಳ್ಳಲು ಸಾಧ್ಯವಿಲ್ಲ. "

ಸ್ವರ್ಣ ಮೆಲ್ಲನೆದ್ದು

" ನನಗೆ ಹೊತ್ತಾಯಿತು ಶ್ರೀಕಂಠ - ಮನೆಗೆ ಹೋಗಬೇಕು "

ಎಂದಳು.

" ನನ್ನ ಎಲ್ಲಾ ಶಿಲ್ಪಗಳನ್ನೂ ನೀನು ನೋಡಿಲ್ಲ. "

" ಇನ್ನೂ ಇದೆಯೇ ? "

" ಒಳಗೆ ಒಂದಿದೆ "

ಎಂದು ಅವಳನ್ನು ಒಳಗೆ ಕರೆದೊಯ್ದು ಗೋಡೆಯ ಗೂಡಿನಲ್ಲಿದ್ದ ಒಂದು ಮೂರ್ತಿಯ ಕಡೆ ಕೈ ತೋರಿಸಿದ.

ಮೂರ್ತಿಯ ಮೇಲೆ ಕವಿದಿದ್ದ ಮುಸುಕನ್ನು ಸ್ವರ್ಣನೇ ತೆಗೆದು ನೋಡಿ

ಚಕಿತಳಾದಳು.

"ಶ್ರೀಕಂಠಾ........"

"ಹೌದು ಸ್ವರ್ಣ"

"ಇದನ್ನು ನೀನು ಇಟ್ಟುಕೊಳ್ಳಬಾರದು."

"ನನ್ನ ದೇವಿಯ ಮೂರ್ತಿ ನನ್ನಲ್ಲಿರಬಾರದೇ ?"

"ನನ್ನ ಏಕೆ ಪರೀಕ್ಷಿಸುವೆ ಶ್ರೀಕಂಠಾ ?"

ಎಂದು ದುಃಖಿಸುತ್ತಾ ಹೊರಬಂದಳು.

ವಿಷಯಾಂತರ ಮಾಡುವುದು ಅವಶ್ಯಕವಾಗಿತ್ತು. ಶ್ರೀಕಂಠ

"ನೀನು ಬರುವೆಯೆಂದು ತಿಂಡಿ ಕಾಫಿ ತಂದಿಟ್ಟಿರುವೆ" ಎಂದ.

ಸ್ವರ್ಣ ಕತ್ತೆತ್ತಿ ನೋಡಿದಳು.

ಶ್ರೀಕಂಠ ತಿಂಡಿಯ ತಟ್ಟೆಗಳನ್ನು ಅವಳ ಮುಂದಿಟ್ಟು, ಥರ್ಮಾಸ್ ತೆಗೆದು ಎರಡು ಕಪ್ಪುಗಳಿಗೆ ಕಾಫಿ ಹಾಕಿದ. ಸ್ವರ್ಣ ಕಾಫಿ ಕಪ್ ಕೈಗೆ ತೆಗೆದು ಕೊಂಡಳು.

"ತಿಂಡಿ ತೆಗೆದುಕೊಳ್ಳುವುದಿಲ್ಲವೇ ?"

ತಟ್ಟೆಯಲ್ಲಿದ್ದ ಉಪ್ಪೇರಿಯನ್ನು ಬಾಯಿಗೆ ಹಾಕಿಕೊಂಡು

"ಸಾಕು. ಕಾಫಿ ಕುಡಿಯುತ್ತೇನೆ."

ಶ್ರೀಕಂಠ ಬಲವಂತ ಮಾಡಲಿಲ್ಲ. ಇಬ್ಬರೂ ಕಾಫಿ ಮುಗಿಸಿ ಕಪ್ಪು ಗಳನ್ನು ಕೆಳಗಿಟ್ಟರು.

"ಇನ್ನು ನಾನು ಹೊರಡಬೇಕು" ಎಂದು ಸ್ವರ್ಣ ಬಾಗಿಲು ಬಳಿ ನಡೆ ದಳು.

ಶ್ರೀಕಂಠ ಅವಳನ್ನು ಮನೆ ಮುಟ್ಟಿಸಿ ಬರಲು ಜತೆಯಲ್ಲಿ ಹೊರಟ. ಮನೆ ಸಮೀಪಿಸುತ್ತಿದ್ದಂತೆ

"ಪುನಃ ಯಾವಾಗ ನಿನ್ನನ್ನು ಕಾಣುವುದು."

"ನಾವು ಒಬ್ಬರನ್ನೊಬ್ಬರು ನೋಡದಿರುವುದೇ ಒಳ್ಳೆಯದು."

"ಹೆಣ್ಣಿನ ಮನಸ್ಸು ತುಂಬ ಮೃದುವಾದುದೆಂದು ನಾನು ಕೇಳಿದ್ದೆ."

"ನಾನು ಕಠಿಣಚಿತ್ತಳು - ಪಾಪಿ."

"ಹಾಗೆನ್ನಬೇಡ ಸ್ವರ್ಣ. ನನ್ನ ಜೀವನ ಬೆಳಗಿಸುವ ದೇವಿ ಎಂದಿಗೂ

ಪಾಪಿಯಾಗಲಾರಳು."

"ಕಾಳಿಯ ಮರ್ದನ ಮುಗಿದ ಮೇಲೆ ಏನು ಮಾಡುವೆ ?"

"ಸರಸ್ವತಿ ಮೂರ್ತಿ ಕಡೆಯಬೇಕೆಂದುಕೊಂಡಿದ್ದೇನೆ."

"ಸಂತೋಷ."

"ಅದಕ್ಕೆ ನಿನ್ನ ಸಹಾಯ ಬೇಕು."

"ನಾನೇನು ಸಹಾಯ ಮಾಡಬಲ್ಲೆ ?"

"ನೀನು ಪೋಸ್ (Pose) ಮಾಡಬೇಕು........ನನಗಾಗಿ ಇಷ್ಟಾದರೂ ಮಾಡಲಾರೆಯಾ ?"

"ನಿನಗಾಗಿ ನಾನು ಏನು ಮಾಡಲು ಸಿದ್ಧಳಾಗಿಲ್ಲ?"

"ನಾಳೆಯಿಂದ ಬರುವೆಯಾ ?"

"ನಿತ್ಯ ಬರಬೇಕೇ ?"

"ನಿತ್ಯ ಬಂದರೆ ಕೆಲಸ ಚೆನ್ನಾಗಿ ಸಾಗುತ್ತದೆ. ಮಧ್ಯೆ ನಿಂತುಹೋದರೆ ನಿಂತೇ ಹೋಗುತ್ತದೆ."

"ನಾಲ್ಕೈದು ದಿನ ಕಳೆಯಲಿ. ಅನಂತರ ಬರುತ್ತೇನೆ."

"ಏಕೆ ?"

"ಅತ್ತೆ ಮೈಯಲ್ಲಿ ಹುಷಾರಿಲ್ಲ. ನಾನು ಅವರ ಸಮೀಪದಲ್ಲಿಯೇ ಇರಬೇಕಾಗುತ್ತದೆ."

"ನಾಲ್ಕೈದು ದಿನ ನಿನ್ನ ನೋಡದೇ ಇರಬೇಕೇ ?"

"ಪಠಡೀಗೇ ಬರುತ್ತಿರುವೆಯಲ್ಲವೇ ?"

"ಬಂದರೇನು ಪ್ರಯೋಜನ - ನಿನ್ನ ಕೈಯಲ್ಲಿ ಒಂದು ಮಾತೂ ಆಡಲು ಸಾಧ್ಯವಿಲ್ಲ."

"ಒಂದೆರಡು ಮಾತು ಆಡಬಹುದು."

ಶ್ರೀಕಂಠ ಅವಳ ಮನೆಗೆ ಸ್ವಲ್ಪ ದೂರದಲ್ಲಿ ನಿಂತ. ಸ್ವರ್ಣ ಮನೆ ಸೇರಿದಳು.

ಮಿಶ್ರ ಭಾವನೆಗಳು ಶ್ರೀಕಂಠನ ಮನಸ್ಸನ್ನು ಕದಡಿ ಬಿಟ್ಟಿದ್ದವು. 'ಸ್ವರ್ಣ ನನ್ನನ್ನು ಪ್ರೀತಿಸುತ್ತಾಳೆಯೇ – ನಾನು ಮಾಡಿರುವ ಅನ್ಯಾಯ ಮರೆತಿರುವಳೇ ?' ಎಂಬ ಯೋಚನೆ ಅವನನ್ನು ಕಾಡತೊಡಗಿದವು. ಅವಳು ಆಡಿದ

ಪ್ರತಿಯೊಂದು ಮಾತನ್ನೂ ಜ್ಞಾಪಿಸಿಕೊಂಡು ಮೆಲಕು ಹಾಕತೊಡಗಿದ.

' ನಿನ್ನ ಜತೆ ಬೇಕಾದ ಕಷ್ಟ ಅನುಭವಿಸುವುದಕ್ಕೆ ನಾನು ಸಿದ್ಧವಾಗಿರಲಿಲ್ಲವೇ ? ನೀನು ಮಾಡಿದ್ದ ಆಣೆ ಪ್ರಮಾಣ ಮರೆತು ಹೋಯಿತೇ ? '

' ನೀನು ದೊಡ್ಡ ಶಿಲ್ಪಿಯಾದುದನ್ನು ಕಂಡು ನನಗೆ ಸಂತೋಷವಾಗಿದೆ.'

' ನೀನು ಇಷ್ಟು ಗಟ್ಟಿಗ ಎಂದು ನನಗೆ ಗೊತ್ತಿರಲಿಲ್ಲ. '

' ಸೊಗಸಾದ ಮೂರ್ತಿಗಳನ್ನು ಮಾಡುತ್ತಿರುವೆ - ಊರಿಗೆ ಊರೇ ನಿನ್ನನ್ನು ಹೊಗಳುತ್ತಿದೆ. '

' ನೀನೇ ಬೆಳಕು ಚೆಲ್ಲುತ್ತಿರುವಾಗ ನಿನಗೆ ಬೆಳಕಿನ ಅಗತ್ಯವೇನಿದೆ ? '

' ನಿನಗಾಗಿ ನಾನು ಏನು ಮಾಡಲು ಸಿದ್ಧವಾಗಿಲ್ಲ? '

— ' ನಿರಾಶೆಗೊಳ್ಳಬೇಕಾಗಿರಲಿಲ್ಲ – ಆಶಾಕಿರಣ ಮೂಡಿದೆ - ಸರಸ್ವತಿ ಮೂರ್ತಿಗೆ ಸ್ವರ್ಣ ಪೋಸ್ ಮಾಡಲೊಪ್ಪಿದುದೇ ಸಾಕ್ಷ್ಯವಲ್ಲವೇ ? '

ಶ್ರೀಕಂಠನ ಧಮನಿಯಲ್ಲಿನ ರಕ್ತ ಅತ್ಯುಗ್ರ ವೇಗದಿಂದ ಸಂಚರಿಸತೊಡಗಿತು. ಕ್ರತುಶಕ್ತಿ ಅವನನ್ನು ಹೊಡೆದೆಬ್ಬಿಸಿ ಕಾರ್ಯೋನ್ಮುಖ ಮಾಡಿತು.

' ಕಾಳೀಯ ಮರ್ದನ ' ಅಪೂರ್ಣ ಶಿಲ್ಪದ ಅನಾವರಣ ಮಾಡಿ, ಕೈಗೆ ಉಳಿಯೆತ್ತಿಕೊಂಡ.

ರಾಜೂ ಕಾಗದ ಉತ್ತರ ನಿರೀಕ್ಷಿಸುತ್ತಾ ಶ್ರೀಕಂಠನನ್ನೇ ದಿಟ್ಟಿಸಿ ನೋಡುತ್ತ ಕುಳಿತಿತ್ತು.

೯

ಯಮುನಾ ನದಿಯಲ್ಲಿದ್ದ ಕಾಳಿಂದಿ ಮಡುವಿನಲ್ಲಿ ದುಷ್ಟ ಕಾಳಸರ್ಪವೊಂದು ಸೇರಿಕೊಂಡು ಸುತ್ತಮುತ್ತಲಿನ ಗೊಲ್ಲ ಗೊಲ್ಲತಿಯವರಿಗೆ ಭಯ ಭ್ರಾಂತಿಗಳನ್ನು ಹುಟ್ಟಿಸಿತ್ತು. ಮಡುವಿನ ನೀರು ಕುಡಿದ ಅನೇಕ ದನಕರುಗಳು, ಗೊಲ್ಲಬಾಲಕರು ಮೃತ್ಯುವಶರಾಗಿದ್ದರು. ಗೊಲ್ಲರು ಬಂದು ಶ್ರೀಕೃಷ್ಣನಲ್ಲಿ ಮೊರೆಯಿಟ್ಟರು. ಆಪದ್ಬಂಧು ಮಡುವಿನಲ್ಲಿ ಧುಮ್ಮಿಕ್ಕಿ ಕಾಳಸರ್ಪದೊಂದಿಗೆ ಹೋರಾಡಿ ಅದನ್ನು ದಮನ ಮಾಡುತ್ತಾನೆ. ಕಾಳನಾಗ ಮಡುವನ್ನು ತೊರೆದು ಹೋಗುತ್ತದೆ.

ಬಂದುದಲ್ಲದೆ ಅವನ ಆಸೆಯ ಕಿಚ್ಚು ಕೆರಳಲಾರಂಭಿಸಿತು.

ಇಬ್ಬರೂ ಹೋರಾಡಲಾರಂಭಿಸಿದರು. ಸ್ವರ್ಣನ ಕೈ ಬಳೆಗಳು ಪುಡಿ ಪುಡಿಯಾದವು. ಅವಳ ವಸ್ತ್ರಗಳು ಅಸ್ತವ್ಯಸ್ತವಾಗಿ ಮೇಲುಸೆರಗು ಜಾರಿತು. ಕುಪ್ಪಸದ ಗುಂಡಿಗಳು ಸಿಡಿದವು.

ಶ್ರೀಕಂಠನ ಕೈ ಮೇಲ್ಗೈಯಾಗುತ್ತ ಬಂತು. ಸ್ವರ್ಣನ ಧ್ವನಿ ಅತಿ ಕೃಶವಾಯಿತು. ಹೋರಾಟ ಮುಂದುವರಿಸುವ ಶಕ್ತಿಯೂ ಅವಳಲ್ಲಿ ಉಳಿಯ ಲಿಲ್ಲ. ಸೋತು ಸೊರಗಿದಳು. ಶ್ರೀಕಂಠ ಅವಳ ಕುಪ್ಪಸವನ್ನು ಹಿಡಿದೆಳೆದ ರಭಸಕ್ಕೆ ಉಳಿದಿದ್ದ ಗುಂಡಿಗಳು ಸಿಡಿದು ಹೋದವು. ಶ್ರೀಕಂಠ ಅವಳ ಸ್ತನ ಗಳಮಧ್ಯೆ ಮುಖವಿಟ್ಟ. ಸ್ವರ್ಣ ನಿಶ್ಚೇತನಳಾದಳು. ಶ್ರೀಕಂಠ ಅವಳನ್ನೆತ್ತಿ ಕೊಂಡು ಒಳಕೋಣೆಗೆ ನಡೆದ.

## ೧೦

ಮಾರನೆಯ ಬೆಳಿಗ್ಗೆ ಶ್ರೀಕಂಠ ಹಾಸಿಗೆಬಿಟ್ಟು ಏಳುವಾಗ ಒಂಭತ್ತು ಗಂಟೆ ಹೊಡೆದಿತ್ತು. ದೀರ್ಘಕಾಲ ಮಲಗಿದ್ದರೂ ಮೈಗೆ ನೆಮ್ಮದಿಯಾಗಿರಲಿಲ್ಲ. ಮೈ ಮಾಂಸಖಂಡಗಳು ಮರದ ಕೊರಡುಗಳಂತಾಗಿದ್ದವು. ಉತ್ಸಾಹ, ಉಲ್ಲಾಸಗಳೆರಡೂ ಮಾಯವಾಗಿದ್ದವು.

ಶ್ರೀಕಂಠ ಹಾಸಿಗೆಯಮೇಲೆ ಕುಳಿತು ಚಿಂತಿಸಿದ. ಹಿಂದಿನ ದಿನದ ಘಟನೆಗಳು ಮನಸ್ಸಿನ ತೆರೆಯಮೇಲೆ ಸುಳಿದಾಡಿದವು.

'ನಾನೇನು ಮಾಡಿಬಿಟ್ಟೆ' ಎಂದು ಗಾಬರಿಯಾದ.

ತನ್ನ ಅಮಾನುಷ ವರ್ತನೆ ಬೃಹದಾಕಾರ ತಳೆದು ಎದುರುನಿಂತಿತು.

'ಅಯ್ಯೋ ಪಾಪಿ - ನಿರ್ಭಾಗ್ಯ'

ಎಂದು ತನ್ನನ್ನೇ ಹಳಿದುಕೊಂಡ.

'ಮಗುವಿನಂತೆ ನಂಬಿ ಬಂದ ಸ್ವರ್ಣನ ಸರ್ವನಾಶ ಮಾಡಿ ಬಿಟ್ಟೆ ಯಲ್ಲಾ!'

'ಪರಿಶುದ್ಧವೂ, ಅಮರವೂ ಆದ ಪ್ರೇಮವನ್ನು ಕೊಳಚೆಯಲ್ಲಿ ಹಾಕಿ ತುಳಿದು ಬಿಟ್ಟೆಯಲ್ಲಾ!'

'ಸ್ವರ್ಣನನ್ನು ನಾಶಮಾಡಿ ಬಿಟ್ಟೆಯಲ್ಲಾ!'

ತನ್ನ ಘೋರ ಕೃತ್ಯದ ನೆನಪು ಬಂದು, ಶ್ರೀಕಂಠನ ಆಪಾದ ಮಸ್ತಕ ಬೆವರು ಮೂಡಿತು. ಅಗ್ನಿತಪ್ತವಾಗಿದ್ದ ದೇಹ ಸುಡಲಾರಂಭಿಸಿತು. ಕುದಿಯುವ ನೀರು ಕಣ್ಣಿನಿಂದ ತಡಸಲಿನಂತೆ ಜಾರಿತು.

'ಇನ್ನು ಸ್ವರ್ಣನಿಗೆ ಮುಖ ಹೇಗೆ ತೋರಿಸಲಿ?'

'ಇನ್ನು ಅವಳು ಕಣ್ಣೆತ್ತಿ ನನ್ನ ಪಾಪಿಮುಖ ನೋಡುವಳೇ?'

'ಅಯ್ಯೋ! ಸ್ವರ್ಣನನ್ನು ಕಾಣಬೇಕೆಂದು, ಅವಳೊಂದಿಗೆ ಮಾತನಾಡಬೇಕೆಂದು ಎಷ್ಟು ದಿವಸ ಬಯಸಿದೆ. ಅವಳನ್ನು ಕಂಡಾಗ ಆದುದೇನು?'

'ಕಲೆಯನ್ನು ನನ್ನ ಅಲ್ಪ ಆಶಾ ತೃಪ್ತಿಗಾಗಿ ಉಪಯೋಗಿಸಿಕೊಂಡೆ ನಲ್ಲಾ!'

'ವಿದ್ಯಾಗೌರಿಯ ಹೆಸರಿನಲ್ಲಿ ಎಂತಹ ಅಪಚಾರ – ಅಕೃತ್ಯವನ್ನಾಚರಿಸಿದೆ.'

'ವಾಗ್ದೇವಿ ನನ್ನನ್ನು ಕ್ಷಮಿಸುವಳೇ? – ನನ್ನನ್ನು ಅನುಗ್ರಹಿಸುವಳೇ.'

'ಅಯ್ಯೋ! …………

ಎಂದು ಅವನ ಹೃದಯದಿಂದ ಚೀತ್ಕಾರವೆದ್ದಿತು.

ತನ್ನ ಅಪರಾಧಕ್ಕೆ ಯಾವ ಶಿಕ್ಷೆಯೂ ಸಾಲದೆನಿಸಿತು. ಸ್ವರ್ಣನನ್ನು ಪುನಃ ಕಾಣುವ ಆಶೆಯೂ ದೂರ ಉಳಿಯಿತು.

ಪಶ್ಚಾತ್ತಾಪದ ದಳ್ಳುರಿಯಲ್ಲಿ ಶ್ರೀಕಂಠನ ಮನಸ್ಸು ಬೇಯತೊಡಗಿತು. ಒಂದು ದಿನವೆಲ್ಲಾ ಕೋಣೆ ಬಿಟ್ಟೇ ಹೊರಬರಲಿಲ್ಲ.

ಮಾರನೆಯ ದಿನ ಹೇಗಾದರೂ ಮಾಡಿ ಸ್ವರ್ಣನನ್ನು ಕಾಣಲು ನಿರ್ಧರಿಸಿದ.

'ಕೊನೆಯ ಬಾರಿಗೆ ಅವಳನ್ನು ನೋಡಿ ಕ್ಷಮೆ ಬೇಡುತ್ತೇನೆ.

ಎಂದುಕೊಂಡೆದ್ದು ಕಾಲೆಳೆದುಕೊಂಡು ಶ್ರೀನಿವಾಸಲು ಪಠಡಿಯ ಕಡೆ ನಡೆದ. ದಕ್ಷಿಣ ಭಾಗದಲ್ಲಿದ್ದ ಮನೆಯ ಬಾಗಿಲಿಗೆ ಬೀಗ ಹಾಕಿತ್ತು.

'ಬೀಗ ಏಕೆ ಹಾಕಿದೆ? ಮನೆಯವರು ಎಲ್ಲಿಗೆ ಹೋದರು?'

ಎಂದುಕೊಂಡೇ ಪಠಡಿ ಪ್ರವೇಶಿಸಿದ.

ಶ್ರೀನಿವಾಸಲು ಕಾಣಲಿಲ್ಲ. ಲಕ್ಷ್ಮಯ್ಯ ಕತ್ತು ಬಗ್ಗಿಸಿಕೊಂಡು ಕೆಲಸ ಮಾಡುತ್ತಿದ್ದ. ಶ್ರೀಕಂಠನನ್ನು ಕಂಡೊಡನೆಯೇ ಲಕ್ಷ್ಮಯ್ಯ ಕತ್ತೆತ್ತಿ

" ನಾನೇ ಬರಬೇಕೂಂತಿದ್ದೆ ಸ್ವಾಮಿ. ಬೋದಿಗೆ ತಯಾರಾಗಿದೆ. ಪಾಲಿಷ ಮಾಡಿಕೊಟ್ಟುಬಿಡು ಎಂದು ಯಜಮಾನರು ಹೇಳಿಹೋದರು. "

" ಶ್ರೀನಿವಾಸಲು ಎಲ್ಲಿಗೆ ಹೋದರು ? "

" ಅಮ್ಮಾವರು ಇದ್ದಕ್ಕಿದ್ದಂತೆ ಕಾಹಿಲೆಬಿದ್ದರು. ದೊಡ್ಡಮ್ಮಾವರು ' ಯಾವದೋ ಗಾಳಿ ಕಾಟ ' ಎಂದು ಹೇಳಿದರು. ಎಲ್ಲರೂ ಚಿಕ್ಕಮ್ಮಾವರ ಊರಿಗೆ ನಿನ್ನೆ ಸಂಜೆ ಹೋದರು. "

" ಗಾಳಿಕಾಟವೇ ? ಏನಾಯಿತು. "

" ಏನಾಯಿತೋ ಕಾಣೆ ಸ್ವಾಮಿ. ಸುಮ್ಮನೆ ಅಳುತ್ತಿದ್ದರು. ಹತ್ತು ಹತ್ತು ನಿಮಿಷಕ್ಕೆ ಮೂರ್ಛೆ ಬೀಳುತ್ತಿದ್ದರು. ಯಾರ ಕೈಯಲ್ಲಿಯೂ ಮಾತಾಡುತ್ತಿರ ಲಿಲ್ಲ. "

ಶ್ರೀಕಂಠನಲ್ಲಿ ಉಳಿದಿದ್ದ ಅಲ್ಪಸ್ವಲ್ಪ ಶಾಂತಿ, ಧೈರ್ಯ ನುಚ್ಚುನೂರಾ ಯಿತು.

' ಗುಂಜೂರಿಗೆ ಹೋಗಲೇ ? ' ಎಂದುಕೊಂಡ.

ಮರುಕ್ಷಣವೇ ಅವನ ವಿಚಾರ ಬದಲಾಯಿಸಿತು.

' ನಾನು ಅಲ್ಲಿಗೆ ಹೋದಲ್ಲಿ ನಾನೇ ಅಪರಾಧಿಯೆಂದು ಸಾರಿಕೊಂಡಂತಾ ಗುತ್ತದೆ..... ನನ್ನ ಮುಖ ನೋಡಿದರೆ ಸ್ವರ್ಣನ ಪರಿಸ್ಥಿತಿ ಉಲ್ಬಣಾವಸ್ಥೆ ಗೇರಿದರೂ ಏರಬಹುದು. '

ಶ್ರೀನಿವಾಸಲು ಬರುವನ್ನು ಕಾಯುವುದೊಂದೇ ಮಾರ್ಗ ಎಂದು ಕೊಂಡ.

ಬೆಳಿಗ್ಗೆ, ಸಂಜೆ ತಪ್ಪದೆ ಶ್ರೀನಿವಾಸಲು ಪಠಡೀಗೆಹೋಗಿ ವಿಚಾರಿಸಿ ಕೊಂಡು ಬರುವ ಉದ್ಯಮವನ್ನುಳಿದು ಬೇರೆ ಎತ್ತಲೂ ಶ್ರೀಕಂಠನ ಮನಸ್ಸು ಓಡಲೊಲ್ಲದು.

ಹನ್ನೆರಡು ದಿವಸಗಳು ಕಳೆದವು - ಶ್ರೀನಿವಾಸಲು ಹಿಂದಿರುಗಿರಲಿಲ್ಲ. ಅವನಿಂದ ಲಕ್ಷ್ಮಯ್ಯನಿಗೆ ಪತ್ರವೂ ಬಂದಿರಲಿಲ್ಲ.

ಶ್ರೀಕಂಠನ ತಾಳ್ಮೆ ಮುಗಿದಿತ್ತು. ಇನ್ನು ಒಂದೆರಡು ದಿವಸಗಳಲ್ಲಿ ಶ್ರೀನಿವಾಸಲು ಹಿಂದಿರುಗದಿದ್ದರೆ ತಾನು ಗುಂಜೂರಿಗೆ ಹೋಗುವುದೆಂದು ನಿರ್ಧರಿಸಿದ.

ಹದಿಮೂರು ದಿವಸಗಳು ಕಳೆದವು.

ಹದಿನಾಲ್ಕನೆಯ ದಿವಸ ಶ್ರೀಕಂಠ ಪಠಡಿಗೆ ಹೋದಾಗ ಶ್ರೀನಿವಾಸಲು ಸ್ವಸ್ಥಾನದಲ್ಲಿ ಕುಳಿತಿದ್ದ. ಅವನ ತೇಜೋವಿಹೀನ ಮುಖ ಶ್ರೀಕಂಠನ ಮನಸ್ಸಿನಲ್ಲಿ ಭಯ ಹುಟ್ಟಿಸಿತು.

ಶ್ರೀನಿವಾಸಲು ಕ್ಷೀಣಸ್ವರದಲ್ಲಿ 'ಬನ್ನಿ ಸ್ವಾಮಿ' ಎಂದ. ಶ್ರೀಕಂಠ ಅವನ ಸಮೀಪದಲ್ಲಿ ಕುಳಿತು

"ಊರಿಗೆ ಹೋಗಿದ್ದಿರೆಂದು ಗೊತ್ತಾಯಿತು. ಬಹಳ ದಿವಸ ಹೋಗಿಬಿಟ್ಟಿರಲ್ಲಾ ಶ್ರೀನಿವಾಸಲು."

"ಹೌದು ಸ್ವಾಮಿ. ನಿಮ್ಮ ಕೆಲಸ ತಡವಾಯಿತು. ಕ್ಷಮಿಸಬೇಕು."

"ನನ್ನ ಕೆಲಸವಿರಲಿ - ಏನು ವಿಶೇಷ."

"ಇದ್ದಕ್ಕಿದ್ದಂತೆ ನಮ್ಮ ಮನೆಯವರಿಗೆ ಗಾಳಿಕಾಟ ಆರಂಭವಾಯಿತು. ಸ್ಥಳಾಂತರವಾಗಬೇಕೆಂದು ನನ್ನ ತಾಯಿ ಹಟಹಿಡಿದರು. ಎಲ್ಲರನ್ನೂ ಕರೆದುಕೊಂಡು ಗುಂಜೂರಿಗೆ ಹೋದೆ."

"ಮುಂದೆ........"

ಆ ಪ್ರಶ್ನೆ ಕೇಳುವಾಗ ಶ್ರೀಕಂಠನ ಬಾಯಲ್ಲಿ ದ್ರವವಾರಿಹೋಗಿತ್ತು.

ಶ್ರೀನಿವಾಸಲು ಕಣ್ಣಲ್ಲಿ ಪ್ರವಾಹ ಹೊರಟಿತು.

"ಮುಂದೆ........ಅಲ್ಲಿ ಹೋದ ಮೇಲೆ ಮನೆಯವರ ಪರಿಸ್ಥಿತಿ ಮತ್ತಷ್ಟು ಕೆಟ್ಟಿತು. ಇದ್ದಕ್ಕಿದ್ದಂತೆ ಓಡಿ ಹೋಗುತ್ತಿದ್ದಳು. ತಲೆತುಂಬ ಹೂ ಮುಡಿದುಕೊಂಡು ಕಲ್ಯಾಣಿಯ ಕಟ್ಟೆಯ ಮೇಲೆ ಕುಳಿತು ತನ್ನಷ್ಟಕ್ಕೇ ನಗುತ್ತಿದ್ದಳು – ಊರಾಚೆ ಇರುವ ಪಾಳು ಆಂಜನೇಯಸ್ವಾಮಿ ದೇವಾಲಯಕ್ಕೆ ಓಡಿಹೋಗುತ್ತಿದ್ದಳು. – ಅವಳನ್ನು ಹಿಡಿಯುವುದೇ ನಮಗೆಲ್ಲಾ ದೊಡ್ಡ ಕೆಲಸವಾಯಿತು. ಈಗ್ಗೆ ನಾಲ್ಕು ದಿವಸಗಳ ಹಿಂದೆ........"

"ನಾಲ್ಕು ದಿವಸಗಳ ಹಿಂದೆ ಏನಾಯಿತು ?"

"ಯಾವ ಹೊತ್ತಿನಲ್ಲಿ ನಮ್ಮ ಕಣ್ಣು ತಪ್ಪಿಸಿ ಓಡಿ ಹೋಗಿದ್ದಳೋ ಗೊತ್ತಿಲ್ಲ. ನಾವು ಊರೆಲ್ಲಾ ಹುಡುಕಿದೆವು. ಸಿಕ್ಕಲಿಲ್ಲ. ಕೊನೆಗೆ ತೋಟಿಯನ್ನು ಬಿಟ್ಟು ಕಲ್ಯಾಣಿ ಶೋಧಿಸಿದೆವು. ಅಲ್ಲಿ ಅವಳ....ಮೃತ ಶರೀರ........ ಸಿಕ್ಕಿತು."

" ಹಾ ! "

" ಯಾವ ಗ್ರಹಚಾರವೋ ಕಾಣೆ. ಇದೊಂದೂ ನನಗೆ ಅರ್ಥವಾಗುತ್ತಿಲ್ಲ. "

ಸಿಡಿಲಿಗೂ ಪ್ರಬಲವಾದ ಈ ಆಘಾತಕ್ಕೆ ಸಿಕ್ಕಿ ಶ್ರೀಕಂಠನ ಜೀವ ತತ್ತರಿಸಿತು. ಶ್ರೀನಿವಾಸಲೂಗೆ ಸಮಾಧಾನ ಹೇಳುವ ಲೌಕಿಕವೂ ಶ್ರೀಕಂಠನಿಗೆ ಹೊಳೆಯಲಿಲ್ಲ.

ಅಲ್ಲಿಂದೆದ್ದು ನೇರವಾಗಿ ತನ್ನ ರೂಮಿಗೆ ಬಂದು ಕುಳಿತ.

' ಮೈಸೂರಿಗೂ ನಿನಗೂ ಇದ್ದ ಋಣಾನುಬಂಧ ತೀರಿ ಹೋಯಿತು ಶ್ರೀಕಂಠ - ನೀನು ಪಾಪಿ - ವಿಶ್ವಾಸಘಾತಕ – ಇಲ್ಲಿ ನಿನಗಿನ್ನು ಸ್ಥಳವಿಲ್ಲ,

ಎಂದು ಅಂತರ್ವಾಣಿ ಕೂಗಿತು.

' ನನಗಿನ್ನು ಇಲ್ಲಿ ಸ್ಥಳವಿಲ್ಲ '

ಎಂದುಕೊಂಡೆದ್ದು ನೇರವಾಗಿ ಅಂಚೆಯ ಮನೆಗೆ ಹೋಗಿ ರಾಜುವಿಗೆ ತಾರು ಕಳಿಸಿದ.

ಕಾಲುಗಳು ಅವನನ್ನು ಬಲವತ್ತರವಾಗಿ ಯಾಲಕ್ಕಪ್ಪಾಚಾರ್ಯರ ಬಳಿಗೆ ಕರೆದೊಯ್ದವು.

# ೧

ದಾದರ್ ಸ್ಟೇಷನ್ನಿನಲ್ಲಿ ಶ್ರೀಕಂಠನಿಗೆ ಸ್ವಾಗತ ಬಯಸಿದ ರಾಜುವಿಗೆ ಗೆಳೆಯನ ಗುರುತೇ ಸಿಕ್ಕದಂತಾಗಿತ್ತು. ಮನೆಗೆ ಟ್ಯಾಕ್ಸಿಯಲ್ಲಿ ಕರೆದೊಯ್ಯುತ್ತಾ

" ಇದೇನಯ್ಯಾ ನಿನ್ನ ಅವಸ್ಥೆ ! "

" ಏನಾಗಿದೆ ? "

" ನಿನ್ನ ಮುಖ ಕನ್ನಡಿಯಲ್ಲಿ ನೋಡಿಕೊಂಡಿರುವೆಯಾ ? "

....................................................

" ಕಾಹಿಲೆ ಬಿದ್ದಿದ್ದೆಯೇನು ? "

ರಾಜೂ ಬಾಯಿ ಕಟ್ಟುವುದಕ್ಕೆ

" ಹೂ - ನಾಲ್ಕು ದಿವಸ ಜ್ವರ ಬಂದಿತ್ತು "

ಎಂದು ಶ್ರೀಕಂಠ ಹೇಳಿದ. ಟ್ಯಾಕ್ಸಿ ಬೂದಿ ಬಣ್ಣದ ಒಂದು ಭವ್ಯ ಮಂದಿರದ ಮುಂದೆ ನಿಂತಿತು. ರಾಜು ಕೆಳಗಿಳಿದು, ಶ್ರೀಕಂಠನನ್ನೂ ಇಳಿಸಿ ಕೊಂಡ. ಮನೆಯನ್ನೇ ದಿಟ್ಟಿಸಿ ನೋಡುತ್ತ ಶ್ರೀಕಂಠ

" ನಿನ್ನ ಮನೆಯೊ ಇದು " ಎಂದು ಕೇಳಿದ.

" ಸ್ವಲ್ಪ ತಡಿ - ನಿನಗೆ ಎಲ್ಲವೂ ಗೊತ್ತಾಗುತ್ತದೆ. "

ಮನೆಯ ಭಯ್ಯನ ಸಹಾಯದಿಂದ ಎರಡನೆಯ ಅಂತಸ್ತಿನಲ್ಲಿದ್ದ ರಾಜೂ ನಿವಾಸಕ್ಕೆ ಸಾಮಾನುಗಳು ಒಯ್ಯಲ್ಪಟ್ಟವು. ರಾಜು ಗೆಳೆಯನಿಗೆ ಮನೆ ತೋರಿಸುತ್ತಾ

" ಈ ಕೋಣೆ - ಇದರ ಪಕ್ಕದ ಕೋಣೆ ಎರಡೇ ನನ್ನವು. ಸ್ನಾನ, ಶೌಚಕ್ಕೆ ಎರಡು ಸಣ್ಣ ಕೋಣೆಗಳು ಪ್ರತ್ಯೇಕವಾಗಿವೆ. "

" ಬಾಡಿಗೆ ಎಷ್ಟು ಕೊಡುತ್ತಿದ್ದೀ ? "

" ನಲವತ್ತೈದು. "

ಶ್ರೀಕಂಠ ಸ್ನಾನ ಮುಗಿಸಿದ ಮೇಲೆ ಇಬ್ಬರೂ ' ಮೈಸೂರು ಅಸೋಸಿಯೇಷನ್ನಿ ' ನಿಂದ ಬಂದಿದ್ದ ' ಡಬ್ಬದ ಊಟ ' ಮಾಡಿ ಮುಗಿಸಿದರು.

" ಊಟ ಎಲ್ಲಿಂದ ತರಿಸುವೆ ? "

" ಹತ್ತಿರದಲ್ಲೇ ಮೈಸೂರು ಅಸೋಸಿಯೇಷನ್ ಇದೆ. ಅಲ್ಲಿಂದ ತರಿಸುತ್ತೇನೆ. "

" ಚೆನ್ನಾಗಿದ್ದೀಯಾ ರಾಜೂ. "

" ನನಗೇನು ಧಾಡಿ. ನಿನ್ನ ಸ್ಥಿತಿ ನೋಡಿ ತುಂಬ ವಿಷಾದವಾಗುತ್ತಿದೆ."

" ನನಗಾಗಿ ಮರುಗಬೇಡ. ನಾನು ಯಾರ ಮರುಕಕ್ಕೂ ಅರ್ಹನಲ್ಲ. "

" ಏಕೆ ಶ್ರೀಕಂಠಾ, ಇಷ್ಟು ಬೇಸರದಿಂದ ಮಾತನಾಡುತ್ತಿರುವೆ. "

" ಸದ್ಯ ನನ್ನ ಏನೂ ಕೇಳಬೇಡ ರಾಜೂ, ನಿನ್ನ ದಮ್ಮಯ್ಯ. ಕಾಲ ಕ್ರಮೇಣ ಎಲ್ಲವನ್ನೂ ತಿಳಿಸುತ್ತೇನೆ. "

" ಹಾಗೇ ಆಗಬಹುದು. ಸ್ವಲ್ಪ ಹೊತ್ತು ಮಲಗಿ ವಿಶ್ರಾಂತಿ ತೆಗೆದುಕೊ. ಸಂಜೆಗೆ ಸಮುದ್ರತೀರಕ್ಕೆ ಹೋಗಿ ಬರೋಣ. "

" ನಿನಗೆ ಶಾಲೆಯಿಲ್ಲವೇ ? "

" ಇದೆ. ನಿನಗಾಗಿ ಇಂದು - ನಾಳೆ ಚಕ್ಕರ ಹೊಡೆದು ಬಿಡುತ್ತೇನೆ. "

" ಶಾಲೆಯೇಕೆ ತಪ್ಪಿಸಿಕೊಳ್ಳುವೆ - ಹೋಗು. "

" ಎರಡು ದಿವಸ ತಪ್ಪಿಸಿಕೊಂಡರೆ ಪ್ರಪಂಚ ಮುಳುಗಿ ಹೋಗುವದಿಲ್ಲಯ್ಯಾ. "

ಶ್ರೀಕಂಠ ಹೋಗಿ ಮಲಗಿದ. ನಿದ್ರೆ ಬರಲೊಲ್ಲದು. ಕಣ್ಣು ಮುಚ್ಚಿದರೆ ಅದೇ ಧ್ಯಾನ - ಅದೇ ಚಿಂತೆ. "

ಹಿಂದೊಮ್ಮೆ ಕಲ್ಯಾಣಿಯಲ್ಲಿ ಸ್ನಾನ ಮಾಡಿದಾಗ ಸ್ವರ್ಣ ನೀರಿನಲ್ಲಿ ತೊಯ್ದಿದ್ದಳು - ಇಂದೂ ನೀರಿನಲ್ಲಿ ತೊಯ್ದಿದ್ದಾಳೆ. ಅದು ಬಾಳು - ಇದು ಸಾವು. "

ಶ್ರೀಕಂಠ ಸ್ವಲ್ಪ ಹೊತ್ತು ಲಿಬಿಲಿಬಿ ಒದ್ದಾಡಿ ಮೇಲಕ್ಕೆದ್ದು, ಒಳಗೆ ಮಲಗಿದ್ದ ರಾಜು ಮುಖವನ್ನು ನೋಡಿದ. ತಲೆಯ ಕೆಳಗೆ ಬಲಗೈ ಕೊಟ್ಟು

ರಾಜು ನಿರಾಪದವಾಗಿ ಮಲಗಿ ಮಗುವಿನಂತೆ ನಿದ್ರಿಸುತ್ತಿದ್ದ. ಶಾಂತಿದೇವಿ ತನ್ನ ಪ್ರೀತಿಯ ಮಗನ ಮುಖವನ್ನು ಸೆರಗಿನಿಂದ ಮುಚ್ಚಿದ್ದಳು.

ರಾಜುವಿಗೆ ಎಚ್ಚರವಾಗದಂತೆ ಹೊರಬಂದು ಗೋಡೆಯ ಮೇಲಿದ್ದ ಚಿತ್ರಗಳನ್ನು ನೋಡತೊಡಗಿದ. ಕೆಲವು ಪ್ರಕೃತಿ ನೋಟಗಳು - ಕೆಲವು ಜೀವನ ನೋಟಗಳು. ಒಂದರಲ್ಲಿ ಮೊಸುಗಾತಿಯವರ ನೈಸರ್ಗಿಕ ವಿಲಾಸ; ಇನ್ನೊಂದರಲ್ಲಿ ಖಂಡಾಲಾ ಬಳಿಯಿದ್ದ ವನಶ್ರೀಯ ಅದ್ಭುತ ರಮ್ಯ ವಿಲಾಸ; ಮತ್ತೊಂದರಲ್ಲಿ ಎಳೆ ಹರೆಯದ ದಂಪತಿಗಳ ಕ್ರೀಡಾ ವಿಲಾಸ; ಮಗದೊಂದರಲ್ಲಿ ಮುದಿ ತಾಯಿಯೊಬ್ಬಳ ಭಕ್ತಿವಿಲಾಸ.

ಜೀವನದಲ್ಲಿ - ನಿಸರ್ಗದಲ್ಲಿ ಎಷ್ಟು ಸೌಂದರ್ಯವಿದೆ, ಎಂಥ ಮೋಹಕತೆಯಿದೆ.

ಆದರೆ ಈ ಸೌಂದರ್ಯ - ಮೋಹಕತೆಗೆ ಪ್ರತಿಸ್ಪಂದಿಸುವ ಶ್ರೀಕಂಠನ ಹೃದಯ ಬರಡಾಗಿತ್ತು. ಸಹರಾ ಮರುಭೂಮಿಯಂತೆ ಶುಷ್ಕ ಧೂಳೀ ಕಣಗಳಿಂದ ತುಂಬಿತ್ತು.

ಆ ಹೃದಯದಲ್ಲಿಯೂ ಒಮ್ಮೆ ಜೀವನದಬಳ್ಳಿ ಚಿಗುರಿತ್ತು - ಮೊಗ್ಗೆಯೂ ಕಾಣಿಸಿಕೊಂಡಿತ್ತು.

ಸ್ವಚ್ಛಂದ ವೃತ್ತಿಯ ಶಿಶುವಿನಂತೆ ತಾನೇ ಮೊಗ್ಗೆಯನ್ನು ಜಿಗುಟಿದ್ದ. ಉಗುರಿನ ನಂಜೇರಿ ಬಳ್ಳಿಯೇ ಒಣಗಿ ಹೋಗಿತ್ತು. ಜೀವನ ಅರಳಿದ್ದೆಡೆ ಸ್ಮಶಾನವಾಗಿತ್ತು.

ಶ್ರೀಕಂಠ ‘ ತಾಯಿ ಚಿತ್ರ ’ ನೋಡುತ್ತ ಕುಳಿತುಬಿಟ್ಟ. ಅವನ ಕಣ್ಣು ಚಿತ್ರದ ಮೇಲೆ – ದೃಷ್ಟಿ ಎತ್ತಲೋ ! !

ಕಣ್ಣಿನಿಂದ ಆಗಾಗ್ಗೆ ಒಂದೊಂದು ಹನಿ ನೀರು ಮಿಡಿಯುತ್ತಿತ್ತು.

‘ ಇದೇ ನನ್ನ ತರ್ಪಣ. ನಾನು ಬದುಕಿರುವ ವರೆಗೆ ಈ ಅಶ್ರುತರ್ಪಣವನ್ನೊಪ್ಪಿಸುತ್ತಿರುವೆ ಸ್ವರ್ಣ. ’

ರಾಜು ಎದ್ದವನು ಮುಖ ತೊಳೆದುಕೊಂಡು ಬಂದು

“ ನಿದ್ರೆ ಬರಲಿಲ್ಲವೇ ಶ್ರೀಕಂಠ ?” ಎಂದು ಕೇಳಿದ.

“ ಇಲ್ಲಪ್ಪಾ ಬರಲಿಲ್ಲ. ”

“ ರಾತ್ರಿ ಚೆನ್ನಾಗಿ ನಿದ್ರೆಯಾಗಿತ್ತೇ ? ”

" ರೈಲಿನಲ್ಲಿ ಕೂಡುವುದಕ್ಕೇ ಸ್ಥಳವಿರಲಿಲ್ಲ. ಇನ್ನು ನಿದ್ರೆ ಮಾಡುವುದು ಹೇಗೆ ? "

" ಏಳು – ಹೊರಗೆ ಹೋಗಿ ಬರೋಣ. "

ಇಬ್ಬರೂ ಮನೆಬಿಟ್ಟು ಹೊರಟು, ದಾರಿಯಲ್ಲಿ ಸಿಕ್ಕಿದ 'ಇರಾನಿ ರೆಸ್ಟುರಾ' ದಲ್ಲಿ ಬ್ರೆಡ್ಡು, ಬಿಸ್ಕತ್ತು, ಕಾಫಿ ಸೇವಿಸಿ ಬಸ್ಸಿನಲ್ಲಿ ಚೌಪಾತಿಗೆ ಹೊರಟರು.

ಕಣ್ಣು ಹಾಯುವಷ್ಟು ದೂರವೂ ಜನಸಮೂಹ. ಸಮುದ್ರ ತೀರದ ಮರಳು ಕಣಗಳೊಂದಿಗೆ ಜನಗಣ ಸ್ಪರ್ಧೆ ಹೂಡಿದಂತಿತ್ತು. ಶ್ರೀಕಂಠ ವಿಸ್ಮಯ ದಿಂದ

" ಇದೇನು ಜನಜಂಗುಳಿ ರಾಜು. ಯಾವದಾದರೂ ಉತ್ಸವ ನಡೆದಿ ದೆಯೋ ? "

" ಇಲ್ಲಿ ನಿತ್ಯೋತ್ಸವ. ಸಂಜೆಯಾಗುತ್ತಲೇ ಅರ್ಧ ಮುಂಬಯಿಯೇ ಇಲ್ಲಿಗೆ ಬರುತ್ತದೆ. "

" ಯಾವದಾದರೂ ಏಕಾಂತ ಸ್ಥಳಕ್ಕೆ ಹೋಗಿ ಕುಳಿತಿದ್ದರಾಗಿತ್ತು. "

" ನಾನು ಉದ್ದೇಶಪೂರ್ವಕವಾಗಿಯೇ ನಿನ್ನನ್ನಿಲ್ಲಿ ಕರೆದುಕೊಂಡು ಬಂದೆ. "

" ಏಕೆ ? "

" ಬಂದಾಗಿನಿಂದಲೂ ನೀನು ಏನೋ ಚಿಂತಿಸುತ್ತಿರುವೆ. ನಿನ್ನ ದುಃಖ ಸ್ವಲ್ಪ ಇಳಿಮುಖವಾಗಲಿ ಎಂದು. "

" ಇಳಿಮುಖವಾಗಲಾರದು ರಾಜು. "

" ಏಕೆ ಮಿತ್ರಾ, ನನ್ನಲ್ಲಿ ಹೇಳಿಕೊಳ್ಳಬಾರದಷ್ಟು ರಹಸ್ಯವೇ ಅದು — ವಿಷಕೀಟದಂತೆ ನಿನ್ನಂತರಂಗ ಕೊರೆಯುತ್ತಿರುವ ದುಃಖದ ಕಾರಣ ಅರಿಯುವ ಅಧಿಕಾರ ನನಗಿಲ್ಲವೇ ? "

" ರಾಜೂ, ಹಾಗೆ ನಾನು ಭಾವಿಸಿದ್ದಲ್ಲಿ ಇಲ್ಲಿಗೇಕೆ ಬರುತ್ತಿದ್ದೆ. ನಿನಗೆ ನನ್ನ ದುಃಖದ ಕಾರಣ ಹೇಳುವ ಧೈರ್ಯವೇ ಬಾರದು - ನಾನು ಪಾಪಿ ವಿಶ್ವಾಸಘಾತಕ. "

" ನಾನು ಪಾಪಿ ಎನ್ನುವುದನ್ನು ಬೈಬಲ್ ಹೇಳಿಕೊಡುತ್ತದೆ; ನಾನು ಪುಣ್ಯವಂತ ಎನ್ನುವುದನ್ನೂ ಭಗವದ್ಗೀತೆ ಹೇಳಿಕೊಡುತ್ತದೆ. ನಾವು ಬೈಬಲ್

ಭಕ್ತರಲ್ಲವಲ್ಲ!"

"ನನ್ನ ಕಥೆ ಕೇಳಿದರೆ ಭಗವದ್ಗೀತೆಯೂ ನನ್ನನ್ನು ಪಾಪಿ ಎಂದು ಕರೆಯದೆ ಇರಲಾರದು."

"ಯಾರದೋ ಕೊಲೆ ಮಾಡಿರುವವನಂತೆ ಮಾತಾಡುತ್ತಿರುವೆಯಲ್ಲಾ ಶ್ರೀಕಂಠ."

"ಹೌದು ರಾಜು - ಕೊಲೆ ಮಾಡಿ ಬಂದಿದ್ದೇನೆ."

"ಯಾರ ಕೊಲೆ?"

"ನನ್ನ ಸ್ವರ್ಣನದು!"

"ಸ್ವರ್ಣನ ಕೊಲೆ! ನಿನ್ನ ಮಾತು ಕೇಳಿದರೆ ಬುದ್ಧಿ ವಿಕಲ್ಪವಾಗಿದೆಯೆಂದು ಭಾವಿಸಬೇಕಾಗುತ್ತದೆ."

ಶ್ರೀಕಂಠ ಸಾವಕಾಶವಾಗಿ ತನ್ನೆಲ್ಲ ಕಥೆಯನ್ನು ನಿರೂಪಿಸಿದ. ರಾಜೂನ ದೇಹಾದ್ಯಂತವೂ ಕಂಪಿಸಿತು. 'ಅಪರಾಧ ಯಾರದೇ ಇರಲಿ – ಅಳತೆ ಮೀರಿದ ಅನ್ಯಾಯವಂತೂ ಆಗಿತ್ತು.' ಗತಚೇತನನಾಗಿದ್ದ ಗೆಳೆಯನನ್ನು ರಾಜು ಸಂತೈಸಲೇ ಬೇಕಾಗಿತ್ತು.

"ಕೈ ಮಿಂಚಿ ಹೋದುದಕ್ಕೆ ಚಿಂತಿಸಿ ಏನು ಸಾರ್ಥಕ. ನಿನ್ನ ಕಣ್ಣೀರು ಸ್ವರ್ಣನನ್ನು ಬದುಕಿಸಬಲ್ಲುದೇ?"

"ಬದುಕಿಸುವ ಮಾತೆಲ್ಲಿ ರಾಜೂ. ಮೃತ್ಯುದೂತನಾಗಿರುವ ನನ್ನ ಸ್ಪರ್ಶ ಮಾಡಿದ ಸಮಸ್ತ ವಸ್ತುಗಳೂ ಕ್ಷಯಿಸಲೇ ಬೇಕು."

"ದುಃಖ ನಿನ್ನನ್ನು ಭ್ರಾಂತನನ್ನಾಗಿ ಮಾಡಿದೆ. ನೀನು ಮೃತ್ಯುದೂತನಲ್ಲ - ದೇವದೂತ."

"ನಾನು - ದೇವದೂತ!"

"ಹೌದು ಶ್ರೀಕಂಠ. ಕಲ್ಲು ಮಣ್ಣುಗಳಲ್ಲಿ ಭಗವದಂಶವನ್ನು ತಂದು ತುಂಬುವ ಶಕ್ತಿ ದೇವಶಕ್ತಿ. ಅದನ್ನು ನಿರ್ವಹಿಸಬಲ್ಲವನು ದೇವದೂತ."

"ಇಲ್ಲ ಮಿತ್ರಾ - ಆ ಶಕ್ತಿಯನ್ನು ಸ್ವರ್ಣ ಹೀರಿಕೊಂಡು ಬಿಟ್ಟಿದ್ದಾಳೆ. ಈಗ ಉಳಿದಿರುವುದೆಲ್ಲಾ ರಸ ಹಿಂಡಿದ ಕಬ್ಬಿನ ಸಿಪ್ಪೆ."

"ಸ್ವರ್ಣನಿಗೆ ತುಂಬ ಅನ್ಯಾಯ ಮಾಡಿದೆನೆಂದು ದುಃಖಿಸುತ್ತಿರುವೆಯಲ್ಲವೇ?"

" ಅನ್ಯಾಯವಾಗಿಲ್ಲವೇ ? "

" ಆಗಿದೆ. ಇಲ್ಲವೆಂದು ಹೇಳಲಾರೆ - ಆದರೆ ಆ ಅನ್ಯಾಯಕ್ಕಿಂತ ಈ ಅನ್ಯಾಯ ನೂರು ಭಾಗ ಅಧಿಕವಾದುದು. ನಾನು ಒಂದೆರಡು ಸ್ಪಷ್ಟ ಪ್ರಶ್ನೆಗಳನ್ನು ಕೇಳಲೇ ? "

" ಕೇಳು. "

" ನೇರವಾದ ಉತ್ತರ ಕೊಡಬೇಕು. "

" ನಿನ್ನಲ್ಲಿ ನಾನು ಯಾವದನ್ನೂ ಮರೆಮಾಜುವುದಿಲ್ಲ. "

" ನೀನು ಬಯಸಿದ ರೀತಿಯಲ್ಲಿ ಸ್ವರ್ಣ ನಿನ್ನನ್ನು ಬಯಸಿದಳೇ ? "

" ಅಂದರೆ........ "

" ದೈಹಿಕವಾಗಿ. "

" ಇಲ್ಲ - ಅವಳೂ ಹಾಗೆ ಬಯಸಿದ್ದರೆ ಈ ಸಮಸ್ಯೆ ಏಳುತ್ತಲೇ ಇರಲಿಲ್ಲ. "

" ಸ್ವರ್ಣ ಬಯಸಿದ್ದು - ಪ್ರೀತಿಸಿದ್ದು - ಗೌರವಿಸಿದ್ದು ನಿನ್ನ ಕಲೆಯನ್ನಲ್ಲವೇ ? "

" ಹೌದು. "

" ಅವಳನ್ನು ನಾಶ ಮಾಡಿದಂತೆ ಅವಳ ಪ್ರೀತಿಯ ವಸ್ತುವನ್ನೂ ನಾಶ ಮಾಡುವೆಯಾ ? ಅವಳು ಬದುಕಿದ್ದುದೇ ನಿನ್ನ ಕಲೆಗಾಗಿ - ಈಗ ಬದುಕಿರುವುದೂ ನಿನ್ನ ಕಲೆಗಾಗಿಯೇ ! ನಿನ್ನ ಕಲೆ ದೇದೀಪ್ಯಮಾನವಾಗಿ ಬೆಳಗಿದರೆ ಅವಳ ಬಾಳು ಬೆಳಗುತ್ತದೆ– ಅದು ಅಳಿದರೆ ಅವಳೂ ಅಳಿಯುತ್ತಾಳೆ. ಮೂರ್ಖಾ - ದೈವ ನಿನ್ನನ್ನು ಹೇಗೆ ಆಡಿಸುತ್ತಿದೆ ಬಲ್ಲೆಯಾ ? ಸ್ತ್ರೀಮೋಹಕ್ಕೆ ಈಡಾಗಿ ನಿನ್ನ ಕಲೆ ಕೃಶವಾಗುವುದೆಂದು ದೈವವೇ ಈ ಆಟ ಆಡಿದೆ. ಕಲಾವಿದನಿಗೆ ಲೌಕಿಕ ಸುಖ ಅನುಭವಿಸುವ ಅಧಿಕಾರವಿಲ್ಲವೆಂದು ನಾನು ಹೇಳಿರಲಿಲ್ಲವೇ ? ಕಲೆ ದಯಾದಾಕ್ಷಿಣ್ಯಗಳನ್ನರಿಯದ ಕ್ರೂರ ಪ್ರಭು ಎಂಬುದನ್ನರಿಯೆಯಾ ? — ಶ್ರೀಕಂಠ, ನಿನ್ನ ಮನಸಸ್ಸಾಕ್ಷಿಯಾಗಿ ಹೇಳು, ನೀನು ನಿಜವಾಗಿ ತ್ರಿಕರಣಪೂರ್ವಕವಾಗಿ ಸ್ವರ್ಣನನ್ನು ಪ್ರೀತಿಸುವೆಯಾ ? "

" ಅದನ್ನೂ ನೀನೂ ನಂಬುವುದಿಲ್ಲವೇ ? "

" ನಂಬಲಾರೆ – ಪ್ರೀತಿಯೆಂದರೇನು ? "

" ................................................ "

" ನನಗೆ ಬೇಕು, ಬೇಕು ಎನ್ನುವುದು ಪ್ರೀತಿಯ ಲಕ್ಷಣವೇ? ತ್ಯಾಗ ವರಿಯದ ಪ್ರೀತಿ ಸ್ವಾರ್ಥಪ್ರೀತಿ. ಈಗ ನೀನು ಯೋಚಿಸುತ್ತಿರುವುದು ನಿನಗಾಗಿರುವ ನಷ್ಟವನ್ನು. ವಿವಾಹಿತ ಸ್ತ್ರೀಯೊಂದಿಗೆ ಯಾವ ಜವಾಬುದಾರಿಯೂ ಇಲ್ಲದೆ ಶೃಂಗಾರಸೌಖ್ಯವನ್ನನುಭವಿಸಲು ಸಾಧ್ಯವಿಲ್ಲವಲ್ಲಾ ಎಂದು ದುಃಖಿಸುತ್ತಿರುವೆ. "

" ರಾಜೂ........ ! "

" ನಿನ್ನ ಹೃದಯವನ್ನು ಬಗೆದು ನೋಡು. ನಿನ್ನ ಪ್ರೀತಿ ನಿಜವಾದುದಾಗಿದ್ದರೆ ಅಂದು ಸ್ವರ್ಣನ ಮನಸ್ಸಿಗೆ ಪ್ರತಿಯಾಗಿ ಅವಳ ಮೇಲೆ ನೀನು ಅತ್ಯಾಚಾರ ಮಾಡುತ್ತಿರಲಿಲ್ಲ. "

" ಕ್ಷಮಿಸು ಮಿತ್ರಾ — ಮರ್ಮಘಾತಕವಾದ ನಿನ್ನ ಮಾತು ಸತ್ಯ. ನನ್ನನ್ನು ಕ್ಷಮಿಸು. "

" ನೀನು ಸ್ವರ್ಣನ ಕ್ಷಮೆ ಬೇಡಬೇಕು. ಅದಕ್ಕಿರುವುದೊಂದೇ ಮಾರ್ಗ. ಯಾವ ಧ್ರುವ ನಕ್ಷತ್ರವನ್ನು ಕಣ್ಣುಮುಂದಿಟ್ಟುಕೊಂಡು ಜೀವನಯಾತ್ರೆ ಆರಂಭಿಸಿದೆಯೋ ಆ ಯಾತ್ರೆ ಮುಂದುವರಿಸಿ, ಧ್ರುವನಕ್ಷತ್ರ ಮುಟ್ಟಬೇಕು. "

" ಪ್ರಯತ್ನಿಸುತ್ತೇನೆ ರಾಜು - ಮನಃಪೂರ್ವಕವಾಗಿ ಪ್ರಯತ್ನಿಸುತ್ತೇನೆ. ನಿನ್ನ ಪ್ರೇಮ, ಅಂತಃಕರಣ, ಉಪದೇಶ ಸದಾ ನನ್ನನ್ನು ರಕ್ಷಿಸಲಿ. "

" ಪ್ರೇಮ, ಅಂತಃಕರಣ, ಉಪದೇಶಗಳನ್ನು ಗೆಳೆಯನಿಗೊಪ್ಪಿಸದ ಗೆಳೆತನಕ್ಕೆ ಬೆಲೆಯುಂಟೇ? "

ರಾಜೂ ಮಾತುಗಳು ಗೆಳೆಯನ ಮಾತುಗಳಾಗಿರಲಿಲ್ಲ. ತಾಯಿಯ ಮಾತಾಗಿತ್ತು - ಜಗತ್ತಿನ ತಾಯಿಯ ಅಮೃತವಾಣಿಯಾಗಿತ್ತು.

## ೨

ಚೌಪಾತಿಯ ಸಂದೇಶ ಸಂಪೂರ್ಣವಾಗಿ ಶ್ರೀಕಂಠನ ಮನಸ್ಸನ್ನು ಪರಿವರ್ತಿಸದಿದ್ದರೂ ಸಾಕಷ್ಟು ಪರಿಣಾಮವುಂಟು ಮಾಡಿತ್ತು. ಶ್ರೀಕಂಠ ಸದ್ಯಕ್ಕೆ ಯಾವ ಕೆಲಸಕ್ಕೂ ಕೈಹಾಕದೆ ನಾಲ್ಕು ದಿನ ವಿಶ್ರಾಂತಿ ಪಡೆಯುವುದು ಲೇಸೆಂದು ರಾಜು ಯೋಚಿಸಿದ್ದ.

ಎರಡುದಿವಸ ಶಾಲೆಗೆ ಹೋಗದಿದ್ದ ರಾಜೂ ಮೂರನೆಯ ದಿನ ಹೋಗುವುದೋ ಬಿಡುವುದೋ ಎಂದು ಯೋಚಿಸುತ್ತಿದ್ದಂತೆ ಪ್ರಭಾ ಅವನನ್ನು ಹುಡುಕಿಕೊಂಡು ಬಂದಳು.

" ಏನು ಪ್ರಭಾ ಸಮಾಚಾರ ? " ಎಂದು ಕೇಳಿದ.

"ಎರಡು ದಿವಸದಿಂದ ಏನಾಗಿಬಿಟ್ಟೆಯೋ ವಿಚಾರಿಸಿಕೊಂಡು ಹೋಗುವ ಎಂದು ಬಂದೆ." ಎಂದು ತನ್ನ ಕಣ್ಣನ್ನು ಸುತ್ತ ಹೊರಳಿಸಿದಳು. ರೂಮಿನ ಮೂಲೆಯಲ್ಲಿದ್ದ ಶ್ರೀಕಂಠನ ದೊಡ್ಡ ಸ್ಟೀಲ್ ಟ್ರಂಕ್ ನೋಡಿ

" ಓಹೋ! ಯಾರೋ ಬಂಧುಗಳು ಆಗಮಿಸಿರುವಂತಿದೆ ! "

" ಬಂಧುಗಳಲ್ಲ ಪ್ರಭಾ – ನನ್ನ ಪರಮ ಸ್ನೇಹಿತ. "

" ಅವರು ಮನೆಯಲ್ಲಿಲ್ಲವೋ ? "

" ಇದ್ದಾನೆ - ಸ್ನಾನ ಮಾಡುತ್ತಿದ್ದಾನೆ. "

" ಶಾಲೆಗೆ ತಪ್ಪಿಸಿಕೊಂಡುದಲ್ಲದೆ ನಿನ್ನೆ ಪಾರ್ಟಿ ಮೀಟಿಂಗಿಗೂ ತಪ್ಪಿಸಿಕೊಂಡೆ. "

" ನನ್ನ ಸ್ನೇಹಿತ ತುಂಬ ವ್ಯಸನದಲ್ಲಿದ್ದ - ಅವನನ್ನು ಬಿಟ್ಟು ಬರಲು ಮನಸ್ಸಾಗಲಿಲ್ಲ. ಶಾಲೆಯಲ್ಲಿ ಏನು ಸಮಾಚಾರ ? "

" ಪ್ರದರ್ಶನ ಹತ್ತಿರಕ್ಕೆ ಬಂದಿತು. ನಿನ್ನ ಕೃತಿಗಳು ಸಿದ್ಧವಾಗಲಿಲ್ಲವೆಂದು ಪ್ರಿನ್ಸಿಪಾಲರು ಧುಮಗುಟ್ಟುತ್ತಿದ್ದಾರೆ. ಅದನ್ನು ಹೇಳುವುದಕ್ಕೇ ಬಂದೆ."

ಸ್ನಾನ ಮುಗಿಸಿಕೊಂಡು ಬಂದ ಶ್ರೀಕಂಠ, ಹೊರಗೆ ಕಾಣಿಸಿಕೊಳ್ಳದೆ ಒಳಗೇ ನಿಂತ. ' ಇಲ್ಲೀ ಬಾ ಶ್ರೀಕಂಠ ' ಎಂದು ರಾಜು ಕರೆಯಲು ಶ್ರೀಕಂಠ ನಿರ್ವಾಹವಿಲ್ಲದೆ ಹೊರಗೆ ಬರಬೇಕಾಯಿತು.

" ಪ್ರಭಾ, ಇವನೇ ನನ್ನ ಪರಮ ಮಿತ್ರ ಶ್ರೀಕಂಠ. ಉತ್ತಮ ಶಿಲ್ಪಿ. ಮುಂಬಯಿಯಲ್ಲಿ ಅವಕಾಶ ಸಿಕ್ಕಿದರೆ, ಮುಂಬಯಿಯ ಶಿಲ್ಪಿಗಳನ್ನೆಲ್ಲಾ ಏಕಾಪೋಶನ ತೆಗೆದುಕೊಳ್ಳಬಲ್ಲ. "

" ಶಿಲ್ಪಿಗಳೇ ! " ಎಂದು ಪ್ರಭಾ ಆಶ್ಚರ್ಯ ವ್ಯಕ್ತಮಾಡಿದಳು.

" ಶ್ರೀಕಂಠ, ನನ್ನ ಗೆಳತಿ, ಸಹಪಾಠಿ, ಕಲಾವಿದೆ ಪ್ರಭಾ ಪರಿಚಯ ಮಾಡಿಕೋ. "

ಶ್ರೀಕಂಠ ಪ್ರಭಾ ಇಬ್ಬರೂ ಕೈಮುಗಿದರು.

" ನೀವು ಚಿತ್ರಕಲಾ ಅಭ್ಯಾಸ ಮಾಡುತ್ತಿರುವಿರಾ ? "

" ಹೌದು. "

" ಪ್ರದರ್ಶನಗಳ ಅರ್ಧಭಾಗ ಪಾರಿತೋಷಕ ಪ್ರಭನ ಪಾಲು ಶ್ರೀಕಂಠ ಭಾರತೀಯ ಕಲಾವಿಧಾನದಲ್ಲಿ ಪ್ರಭಾ ತನ್ನದೇ ಆದ ವೈಶಿಷ್ಟ್ಯ ದೊರಕಿಸಿ ಕೊಂಡಿದ್ದಾಳೆ. "

" ನನ್ನನ್ನೇಕೆ ವೃಥಾ ಹೊಗಳುವಿರಿ ರಾಜ್. "

" ನನ್ನ ಬಾಯಿಂದ ಎಷ್ಟು ಹೊಗಳಿಕೆ ಬರುತ್ತದೆಂಬುದನ್ನು ಶ್ರೀಕಂಠ ಬಲ್ಲ ಪ್ರಭಾ. "

" ನಿಮ್ಮ ಕೃತಿಗಳನ್ನು ನನಗೆ ತೋರಿಸುವಿರಾ ? " ಎಂದು ಶ್ರೀಕಂಠ ಕೇಳಿದ.

" ಆಗಬಹುದು. ನಿಮ್ಮ ಶಿಲ್ಪಗಳಲ್ಲಿ ಯಾವದನ್ನಾದರೂ ಇಲ್ಲಿ ತಂದಿರುವಿರಾ ? "

" ತಂದಿದ್ದೇನೆ. ನಾಲ್ಕಾರು ದಿವಸ ಕಳೆದ ಮೇಲೆ ತೋರಿಸುತ್ತೇನೆ. "

" ನೀನು ಶಾಲೆಗೆ ಹೋಗಿ ಪ್ರಿನ್ಸಿಪಾಲರಿಗೆ ಮುಖ ತೋರಿಸಿ ಬರುವುದೊಳ್ಳೆಯದು ರಾಜ್. "

" ನೀನು ! "

" ನಾನು ಶಾಲೆಯಿಂದಲೇ ಬರುತ್ತಿದ್ದೇನೆ - ಮನೆಗೆ ಹೋಗುತ್ತೇನೆ. "

ರಾಜು ಏನನ್ನೋ ಯೋಚಿಸುತ್ತ " ಮೊದಲು ಎಲ್ಲರೂ ಊಟ ಮಾಡೋಣ " ಎಂದು ಹೇಳಿದ.

' ಡಬ್ಬದ ಊಟ ' ಮೂವರಿಗೂ ಸಾಕಾಗುವಷ್ಟಿತ್ತು. ಊಟ ಸಾಗುತ್ತಿದ್ದಾಗ ರಾಜೂ

" ಪ್ರಭಾ, ಒಂದು ಕೆಲಸ ಮಾಡುವೆಯಾ " ಎಂದು ಕೇಳಿದ.

" ಹೇಳು – ಅಗತ್ಯವಾಗಿ ಮಾಡುತ್ತೇನೆ. "

" ಊಟ ಮುಗಿಸಿ ನಾನು ಶಾಲೆಗೆ ಹೋಗುತ್ತೇನೆ. ನೀನು ಶ್ರೀಕಂಠನನ್ನು ಕರೆದುಕೊಂಡು ಹೋಗಿ ಊರು ತೋರಿಸಿಕೊಂಡು ಬಾ. ಮಲಬಾರ್ ಹಿಲ್ಸ್, ಅಲೆಕ್ಸಾಂಡ್ರಾ ಡಾಕ್ಸ್, ಬಾಲಾರ್ಡ್ ಪಿಯರ್, ಮ್ಯುಸಿಯಂ ನೋಡಿಕೊಂಡು ನೀವಿಬ್ಬರೂ ಸುಮಾರು ೪ - ೪॥ ಗೆ ' ಚೇತನ ರೆಸ್ಟೂರಾ ' ಬಳಿಗೆ

ಬಂದರೆ ನಾನೂ ಬರುತ್ತೇನೆ. ಸಂಜೆ ಯಾವದಾದರೂ ಪಿಕ್ಚರಿಗೆ ಹೋಗೋಣ. ಮೆಟ್ರೋ ಥಿಯೇಟರಿನಲ್ಲಿ ಯಾವ ಚಿತ್ರವಿದೆ ? "

" ರೀಟಾ ಹೇವರ್ತ್ ಅಭಿನಯಿಸಿರುವ 'ಕಾರ್ಮೆನ್' ( Carmen ) ನಡೆಯುತ್ತಿದೆ. "

" ಸೊಗಸಾದ ಚಿತ್ರ. ಶ್ರೀಕಂಠನಿಗೆ ನೀನು ಕಾರ್ಮೆನ್ ಕಥೆ ಹೇಳಿದು "

ಶ್ರೀಕಂಠ ಏಕೋ ಮುಜುಗರ ಪಡುತ್ತಿರುವುದನ್ನು ಕಂಡು ರಾಜೂ

" ಏಕೆ ಮಿತ್ರಾ " ಎಂದು ಕೇಳಿದ.

" ನಾನು ಮನೆಯಲ್ಲಿದ್ದರಾಗದೇ ? "

" ಖಂಡಿತವಾಗಿಯೂ ಆಗದು. ಮುಂಬಯಿಯಲ್ಲಿ ಯಾರಾದರೂ ಮನೆಯಲ್ಲಿ ವಾಸ ಮಾಡುತ್ತಾರೇನಯ್ಯಾ ? "

" ಇನ್ನೆಲ್ಲಿ ವಾಸ ಮಾಡುತ್ತಾರೆ ರಾಜೂ ? "

" ಬೀದಿಗಳಲ್ಲಿ, ಬಸ್ಸುಗಳಲ್ಲಿ, ರೈಲುಟ್ರಾಮುಗಳಲ್ಲಿ, ಹೋಟೇಲುಗಳಲ್ಲಿ."

ಎನ್ನುತ್ತ ರಾಜು ತನ್ನ ಇಜಾರ, ಜುಬ್ಬ ಧರಿಸಿ ಹೊರಡಲನುವಾಗಿ

" ಪ್ರಭಾ, ನನ್ನ ಮಿತ್ರ ತುಂಬ ನೊಂದಿದ್ದಾನೆ. ಅವನ ಮನಸ್ಸನ್ನು ಪೂರ್ವ ಸ್ಥಿತಿಗೆ ತರುವುದು ನಮ್ಮ ಕರ್ತವ್ಯ. ಶ್ರೀಕಂಠನಿಂದ ಭಾರತ ಶಿಲ್ಪಕಲೆ ಬದುಕಬೇಕಾಗಿದೆ............ ನಾಲ್ಕಕ್ಕೆ ಸರಿಯಾಗಿ 'ಚೇತನ' ದ ಬಳಿಗೆ ಬನ್ನಿ. "

ಎಂದು ಹೇಳಿ ಹೊರಟು ಬಿಟ್ಟ.

ಶ್ರೀಕಂಠ ಕುಳಿತಲ್ಲಿಯೇ ಕುಳಿತ. ಅವನ ಮೌನವ್ರತಕ್ಕೆ ಭಂಗ ತರಬಾರದೆಂದು ಪ್ರಭಾ 'ಸ್ಟುಡಿಯೋ' ಪತ್ರಿಕೆ ಮಗುಚಿ ಹಾಕುತ್ತ ಕುಳಿತಳು. ಸ್ವಲ್ಪ ಹೊತ್ತು ಕಳೆದ ಮೇಲೆ ಶ್ರೀಕಂಠನೇ

" ಪ್ರಭಾದೇವಿ - ಎಷ್ಟು ದಿವಸಗಳಿಂದ ರಾಜೂ ಪರಿಚಯ ? " ಎಂದು ಕೇಳಿದ.

" ಅವರು ಕಲಾಶಾಲೆ ಸೇರಿದ ಒಂದೆರಡು ದಿನಗಳಲ್ಲಿಯೇ ಪರಿಚಯವಾಯಿತು. ಪರಿಚಯ ಬಹು ಕ್ಷಿಪ್ರವಾಗಿ ಗಾಢಸ್ನೇಹವಾಯಿತು. "

" ರಾಜೂ ಸ್ವಭಾವವೇ ಅಂಥದು. ಒಮ್ಮೆ ಅವನನ್ನು ಕಂಡವರು ಯಾರೂ ಮರೆಯುವಂತಿಲ್ಲ. "

" ನೀವೂ ಅವರೂ ತುಂಬ ಹಳೆಯ ಸ್ನೇಹಿತರೇ ? "

" ಇಲ್ಲ – ನಾನೂ ಅವನೂ ಮೈಸೂರು ಕಲಾಶಾಲೆಯಲ್ಲಿ ಸಂಧಿಸಿದೆವು. ನಮ್ಮಲ್ಲಿಯೂ ಬಹು ಬೇಗ ಸ್ನೇಹ ವಿಕಾಸವಾಯಿತು. "

" ಇಲ್ಲಿನ ಕಲಾಶಾಲೆ ಸೇರಲು ಬಂದಿರುವಿರಾ ? "

" ಇನ್ನೂ ನಿರ್ಧರಿಸಿಲ್ಲ. ನನಗೆ ಜಗತ್ತೇ ಶೂನ್ಯವಾಗಿ ಕಂಡು ಬಂದಾಗ ರಾಜೂ ನೆನಪಾಯಿತು. ಗಂಟು ಮೂಟೆ ಕಟ್ಟಿಕೊಂಡು ಇಲ್ಲಿಗೆ ಬಂದೆ. "

" ನಮ್ಮ ಶಾಲೆಯಲ್ಲಿ ಪ್ರಿನ್ಸಿಪಾಲರ ಮೊದಲುಗೊಂಡು, ಆಳಿನ ವರೆಗೆ ಎಲ್ಲರೂ ರಾಜೂ ಅವರನ್ನು ಪ್ರೀತಿಸುತ್ತಾರೆ. ಇವರಿಂದ ಉಪಕೃತರಾಗದಿರುವವರೇ ವಿರಳ. ಮೊನ್ನೆ ನಡೆದ ಒಂದು ಸುದ್ದಿ ಹೇಳುತ್ತೇನೆ ಕೇಳಿ : ಡಿಪ್ಲೊಮಾ ಕ್ಲಾಸಿನಲ್ಲಿ ಸರಾಫ್ ಎನ್ನುವ ವಿದ್ಯಾರ್ಥಿಯಿದ್ದ. ತೀರ ಬಡವ. ಪರೀಕ್ಷೆಗೆ ಕೆಲವು ದಿನಗಳ ಮೊದಲು ಅವನು ತುಂಬ ಕಷ್ಟಕ್ಕೆ ಸಿಕ್ಕಿಕೊಂಡ. ಈ ವರ್ಷ ಡಿಪ್ಲೊಮಾ ದೊರಕಿಸಿಕೊಳ್ಳದಿದ್ದರೆ ಅವನ ಪರಿಸ್ಥಿತಿ ತುಂಬ ಕಷ್ಟಕ್ಕಿಟ್ಟುಕೊಳ್ಳುತ್ತಿತ್ತು. ಡಿಪ್ಲೊಮಾ ದೊರಕಿಸಿಕೊಳ್ಳಬೇಕಾದರೆ ಕೆಲವು ಸ್ವತಂತ್ರ ಕೃತಿಗಳನ್ನು ಮಾಡಿರಬೇಕೆಂಬ ನಿಯಮವಿದೆ. ಸರಾಫ್ ಯಾವ ಕೃತಿಯನ್ನೂ ಮಾಡಲಾಗಲಿಲ್ಲ. ಅವನ ಅವಸ್ಥೆ ರಾಜೂ ಕಿವಿಯ ಮೇಲೆ ಬಿದ್ದ ಕೂಡಲೆ ತಮ್ಮ ಮೂರು ಪೂರ್ಣ ಕೃತಿಗಳನ್ನು ಸರಾಫನಿಗೆ ದಾನ ಕೊಟ್ಟುಬಿಟ್ಟರು. ಸರಾಫನಿಗೆ ಡಿಪ್ಲೋಮಾ ಅನಾಯಾಸವಾಗಿ ಸಿಕ್ಕಿತು. ಈಗ ಸರಾಫನಿಗೆ 'ಚಿತ್ರಮಯೂರಿ' ಪತ್ರಿಕೆಯಲ್ಲಿ ಒಳ್ಳೆಯ ಕೆಲಸವಾಗಿದೆ. ಅನುಕೂಲವಾಗಿದ್ದಾನೆ. "

ಶ್ರೀಕಂಠನ ಕಣ್ಣುಗಳಲ್ಲಿ ಆನಂದಾಶ್ರುಗಳು ತುಂಬಿದವು.

" ರಾಜೂ ಪ್ರೋತ್ಸಾಹ, ವಿಮರ್ಶೆ ಇಲ್ಲದಿದ್ದರೆ ನಾನು ಯಾವ ಕೃತಿಯನ್ನೂ ಮಾಡಲು ಸಾಧ್ಯವಾಗುತ್ತಿರಲಿಲ್ಲ ಪ್ರಭಾದೇವಿ. ನನ್ನ ಒಂದು ಕೃತಿ ಈ ಊರಿನ 'ಭಾರತೀಯ ವಿದ್ಯಾಭವನ' ಸೇರುವುದಕ್ಕೂ ಅವನೇ ಕಾರಣ. "

" ಇಲ್ಲಿ ನಿಮ್ಮ ಕೃತಿಯಿದೆಯೇ ? "

" ಇದೆ – ಕಂಚಿನಲ್ಲಿ 'ನಟರಾಜ' ವಿಗ್ರಹ ಕಡೆದಿದ್ದೆ. ಮಾನ್ಯ ಶ್ರೀ ಕೆ. ಎಂ. ಮುನಿಷಿಯವರು ಅದನ್ನು ತಮ್ಮ 'ವಿದ್ಯಾಭವನ' ಕ್ಕಾಗಿ ಕೊಂಡರು. "

" ಏಳಿ 'ವಿದ್ಯಾಭವನ' ಕ್ಕೆ ಹೋಗಿ ನೋಡಿಕೊಂಡು ಬರೋಣ. " ಎಂದಳು - ಶ್ರೀಕಂಠ ವಸ್ತ್ರ ಧರಿಸಿ ಅವಳೊಂದಿಗೆ ಹೊರಟ.

ಮುಕ್ಕಾಲು ದಾರಿಯನ್ನು ಎಲೆಕ್ಟ್ರಿಕ್ ಟ್ರೇನಿನಲ್ಲಿ ಕಳೆದುದಾಯಿತು. ಉಳಿದ ಭಾಗವನ್ನು ಬಸ್ಸಿನಲ್ಲಿ ಕಳೆದುದಾಯಿತು. ಬಸ್ ನಿಲ್ದಾಣದಿಂದ ಸ್ವಲ್ಪ ದೂರ ನಡೆದು ' ಭವನ ' ಕ್ಕೆ ಹೋಗಬೇಕಾಗಿತ್ತು. ಪ್ರಭಾ ಶ್ರೀಕಂಠನ ಕೈ ಹಿಡಿದುಕೊಂಡು ರಸ್ತೆ ದಾಟಿಸಿದಳು. ಶ್ರೀಕಂಠನಿಗೆ ಬಸ್ಸು, ಕಾರುಗಳ ಓಡಾಟ, ಜನಸಂದಣಿ ಸ್ಮೃತಿ ಭ್ರಂಶತೆಯನ್ನುಂಟು ಮಾಡಿತ್ತು. ಪ್ರಭಾ ನಸುನಗುತ್ತಾ

" ಮುಂಬಯಿ ಸಾಕೆನಿಸಿತೇ ? " ಎಂದು ಕೇಳಿದಳು.

" ಇಲ್ಲಿ ಮನುಷ್ಯರಿದ್ದಾರೆಂದೇ ಭಾಸವಾಗುವುದಿಲ್ಲ ಮಿಸ್ ಪ್ರಭಾ. ಗಾಳೀ ಗಿರುಗಟ್ಟಿಯಲ್ಲಿ ಗೊಂಬೆಗಳು ಸುತ್ತುನಂತೆ ಜನ ಸುತ್ತುತ್ತಿದ್ದಾರೆ. "

" ಇಲ್ಲಿಯ ಜೀವನವೂ ಹಾಗೇ ಇದೆ. ಶುದ್ಧ ಯಾಂತ್ರಿಕ ಜೀವನ. "

" ಈ ಯಾಂತ್ರಿಕ ಜೀವನದ ಮಧ್ಯೆ ಕಲೆ ಬೆಳೆಯಬಲ್ಲುದೇ ? "

" ಈ ಜೀವನಕ್ಕೆ ಹೊಂದಿಕೊಂಡು ಒಂದು ನೂತನ ಕಲೆಯೇ ಸೃಷ್ಟಿಯಾಗುತ್ತಿದೆ. ಜೀವನದಲ್ಲಿ ಕಂಡು ಬರುವ ಉದ್ವೇಗ, ಆತುರ, ವೇಗ, ಅಶಾಂತಿಗಳೇ ಕಲೆಯಲ್ಲಿಯೂ ಪ್ರತಿಧ್ವನಿಸುತ್ತಿವೆ. "

" ಅದನ್ನು ಕಲೆಯೆನ್ನುವಿರಾ ? "

" ಏಕನ್ನಬಾರದು. "

" ಕಲೆ ಶಾಂತಿದಾಯಿ. "

" ಹೌದು – ಹಾಗೇ ಕ್ರಾಂತಿದಾಯಿ. "

" ಕ್ರಾಂತಿಮಯ ಜೀವನ ಬಯಸುವುದು ಕ್ರಾಂತಿಯನ್ನಲ್ಲ - ಶಾಂತಿಯನ್ನು. "

" ಜೀವನದ ಬಯಕೆಗಳೆಲ್ಲಾ ಸಫಲವಾಗುವವೇ ? "

" ಇಲ್ಲ – ಮಿಸ್ ಪ್ರಭಾ – ಸಫಲವಾಗುವುದಿಲ್ಲ. ಹಣ್ಣು ಕೈಗೆ ನಿಲುಕಲಿಲ್ಲವೆಂದು ಅದನ್ನು ' ಹುಳಿ ' ಎಂದು ತಿರಸ್ಕರಿಸಿದ ನರಿಯ ಪಾಡಾಗಿದೆ ನಮ್ಮದೂ. "

ಭವನದ ದಿವ್ಯ ಕಟ್ಟಡ ದೃಗ್ಗೋಚರವಾಯಿತು.

" ಅದೇ ಭವನ " ಎಂದಳು ಪ್ರಭಾ.

ಶ್ರೀಕಂಠ ಸ್ವಲ್ಪಹೊತ್ತು ಭವನದ ಮುಂದೆ ನಿಂತು ಅದರ ವಾಸ್ತುಶಿಲ್ಪವನ್ನು ಪರೀಕ್ಷಿಸಿ ನೋಡಿದ. ಅವನ ಮುಖ ಪ್ರಸನ್ನವಾಗಿ ಅರಳಿತು.

" ಚೆನ್ನಾಗಿದೆಯೇ ? "

" ಹಸಿದವನಿಗೆ ಗಂಜೀಯೂಟ ಕೊಟ್ಟಂತಾಗಿದೆ. "

" ಹಾಗೆಂದರೆ ? "

" ಈ ಆಧುನಿಕ ಕಟ್ಟಡಗಳ ಕುರೂಪ ನೋಡಿ ನೋಡಿ ಬೇಸತ್ತಿದ್ದೆ - ಸುಲಕ್ಷಣವಾದ ಕಟ್ಟಡಗಳನ್ನು ಕಟ್ಟುವವರು - ಕಟ್ಟಿಸುವವರು ಇನ್ನೂ ಉಳಿದಿದ್ದಾರಲ್ಲಾ ಎಂದು ಮನಸ್ಸಿಗೆ ಸಂತೋಷವಾಯಿತು. "

ಇಬ್ಬರೂ ' ಭವನ ' ಪ್ರವೇಶಿಸಿದರು. ಮುಖಮಂಟಪದಲ್ಲಿ ನಿಂತಿದ್ದ ಆಳು " ಯಾರು ಬೇಕಾಗಿತ್ತು " ಎಂದು ಕೇಳಿದ. " ಯಾರೂ ಬೇಡ - ಇಲ್ಲಿರುವ ' ನಟರಾಜ ' ವಿಗ್ರಹ ನೋಡಿ ಹೋಗಲು ಬಂದೆವು. " ಎಂದು ಪ್ರಭಾ ಹೇಳಿದಳು. ಆಳು ಅವರನ್ನು ಒಳಗಿನ ಹಜಾರಕ್ಕೆ ಕರೆದೊಯ್ದು.

ಹಜಾರದ ಮಧ್ಯೆ ಎತ್ತರದ ಪಾದಪೀಠದ ಮೇಲೆ ' ನಟರಾಜ ' ವಿಗ್ರಹ ಪ್ರತಿಷ್ಠಿತವಾಗಿತ್ತು. ' ಮೂರ್ತಿ ಹೇಗಿದೆ ' ಎಂದು ಶ್ರೀಕಂಠ ಪ್ರಭನನ್ನು ಕೇಳಬೇಕಾಗಿರಲಿಲ್ಲ - ಅವಳ ಮುಖದ ಮೇಲೆ ಆನಂದ, ಆಶ್ಚರ್ಯ, ಭಕ್ತಿ ಲಾಸ್ಯವಾಡುತ್ತಿದ್ದವು. ಪ್ರಭಾ ಪ್ರದಕ್ಷಿಣೆ ಮಾಡಿ ಮೂರ್ತಿಯ ಪಕ್ಕಗಳನ್ನೂ ಹಿಂಭಾಗವನ್ನೂ ಪರೀಕ್ಷಿಸಿ ನೋಡಿ

" ಹಿಂಭಾಗದಲ್ಲಿಯೂ ಎಷ್ಟು ಸೂಕ್ಷ್ಮವಾಗಿ ಕೆತ್ತಿರುವಿರಿ " ಎಂದಳು.

ಅವರಿಬ್ಬರೂ ಮೂರ್ತಿಯನ್ನು ನೋಡಿ ಆನಂದಿಸುತ್ತಿದ್ದ ಬಗೆ ಭವನದ ಆಳಿನ ಮನಸ್ಸಿನಲ್ಲಿ ಗೌರವ ಹುಟ್ಟಿಸಿತ್ತು. ಅವನು ಪ್ರಭನ ಬಳಿ ಬಂದು ಮರಾಟಿಯಲ್ಲಿ

" ಕಾರ್ಯದರ್ಶಿಗಳಿದ್ದಾರೆ ಕರೆಯಲೇ ಬಾಯಿ ?" ಎಂದು ಕೇಳಿದ.

" ಶುಕ್ಲಾಜಿ ಇದ್ದಾರೆಯೇ ? "

" ಇದ್ದಾರೆ. "

ಪ್ರಭಾ ಶ್ರೀಕಂಠನ ಕಡೆ ತಿರುಗಿ

" ಚಂದ್ರಶೇಖರ ಶುಕ್ಲಾಜಿಯವರ ಪರಿಚಯ ಮಾಡಿಕೊಳ್ಳುವಿರೇನು ?" ಎಂದು ಕೇಳಿದಳು.

" ಅವರು ಯಾರು ? "

" ಭವನದ ಕಾರ್ಯದರ್ಶಿಗಳಲ್ಲಿ ಒಬ್ಬರು. ಘನವಿದ್ವಾಂಸರು. ಈಚೆಗೆ

ಗಾಂಧೀಜಿಯವರ ಮೇಲೆ ಅದ್ಭುತ ಗ್ರಂಥ ಬರೆದಿದ್ದಾರೆ."

"ಅವರಿಗೇಕೆ ತೊಂದರೆ ಕೊಡಬೇಕು. ನಾನು ಅವರಲ್ಲಿ ಮಾತನಾಡ ಬೇಕಾದುದೇನಿದೆ ?"

"ಮುಂಬಯಿಯಲ್ಲಿರಲು ನಿರ್ಧರಿಸಿರುವಿರಲ್ಲವೇ ?"

"ಹೌದು."

"ಹಾಗಾದರೆ ಕೆಲವು ಸದ್ಗೃಹಸ್ಥರ ಪರಿಚಯ ಮಾಡಿಕೊಳ್ಳುವುದು ಒಳ್ಳೆಯದು."

"ನಿಮ್ಮ ಮಾತಿಗೆ ಅಡ್ಡಿಯೇಕೆ ಬರಲಿ - ಆಗಬಹುದು."

ಪ್ರಭಾ ತನ್ನ ಕೈಚೀಲದಿಂದ ಒಂದು ಚೂರು ಕಾಗದ ತೆಗೆದು, ತನ್ನ ಹೆಸರು ಬರೆದು ಆಳಿನ ಕೈಯಲ್ಲಿಟ್ಟಳು. ಆಳು ಕಾಗದ ಕೈಗೆ ತೆಗೆದುಕೊಂಡು

"ಬನ್ನಿ ಬಾಯಿ – ಅವರಿರುವಲ್ಲಿಗೆ ಕರೆದುಕೊಂಡು ಹೋಗುತ್ತೇನೆ" ಎಂದ.

"ಬೇಡ - ನಾವು ಶಿಲ್ಪ ನೋಡುತ್ತಿರುತ್ತೇವೆ. ಶುಕ್ಲಾಜಿಯವರನ್ನು ಇಲ್ಲಿಗೇ ಬರಹೇಳು" ಎಂದಳು.

ಆಳಿನ ಜತೆಯಲ್ಲಿ ಶುಕ್ಲಾಜಿ ಬಂದವರು ವಿಶ್ವಾಸಪೂರ್ವಕವಾಗಿ ಪ್ರಭಾನ ಕೈಕುಲುಕಿ

"ಒಳಗೆ ಬರಬೇಕಾಗಿತ್ತು ಪ್ರಭಾ" ಎಂದರು.

"ನಟರಾಜನಲ್ಲಿ ಮೈಮರೆತಿದ್ದೆ ಶುಕ್ಲಾಜಿ. ಈ ಮಿತ್ರರ ಪರಿಚಯ ಮಾಡಿಕೊಳ್ಳಿ. ಶ್ರೀಕಾಂತ — ಮೈಸೂರಿನವರು."

ಶುಕ್ಲಾಜಿ ಶ್ರೀಕಂಠನ ಕೈಕುಲುಕಿ

"ಬಹಳ ಸಂತೋಷ. ಈ 'ನಟರಾಜ' ವಿಗ್ರಹ ಮೈಸೂರಿನ ಶಿಲ್ಪಿ ಕಡೆದದ್ದು. ಮಾನ್ಯ ಮುನಿಷಿಯವರು ಮೈಸೂರಿಗೆ ಹೋಗಿದ್ದಾಗ ಇದನ್ನು 'ಭವನ'ಕ್ಕಾಗಿ ಕೊಂಡರು.

ಶ್ರೀಕಂಠ ಕಣ್ಸನ್ನೆ ಮಾಡುತ್ತಿದ್ದರೂ ಗಮನಿಸದೆ ಪ್ರಭಾ ತುಂಟ ನಗೆ ಬೀರುತ್ತಾ

"ಶುಕ್ಲಾಜಿ, ನಿಮಗೊಂದು ಆಶ್ಚರ್ಯದ ಸುದ್ದಿ ಹೇಳಬೇಕಾಗಿದೆ."

"ಏನದು ಪ್ರಭಾ ?"

" ಈ ಮೂರ್ತಿ ಕಡೆದ ಶಿಲ್ಪಿಯ ಹೆಸರು ಗೊತ್ತೇ ? "

" ಗೊತ್ತು – ಅವರ ಹೆಸರು ಶ್ರೀಕಂಠ "

" ಇಗೋ – ನಿಮ್ಮ ಮೂರ್ತಿ ಕಡೆದ ಶಿಲ್ಪಿ ಶ್ರೀಕಂಠ ಅವರು ಇಲ್ಲೇ ಇದ್ದಾರೆ ನೋಡಿ. "

ಶುಕ್ಲಾ ಅವರು ಅನುಮಾನದಿಂದ

" ಪ್ರಭಾ ಹೇಳುವುದು ನಿಜವೇ ? " ಎಂದು ಕೇಳಿದರು.

' ನಿಜ ' ವೆಂದು ಶ್ರೀಕಂಠ ತಲೆಯಲ್ಲಾಡಿಸಿದ.

ಶುಕ್ಲಾಜಿ ಇಬ್ಬರನ್ನೂ ಬಿಡದೆ ತಮ್ಮ ಕೋಣೆಗೆ ಕರೆದೊಯ್ದು ಕುಳ್ಳಿರಿಸಿಕೊಂಡು ಶ್ರೀಕಂಠನ ಜೀವನವೃತ್ತಾಂತ ಕೇಳಿ ತಿಳಿದುಕೊಂಡು

" ಶ್ರೀ ಮುನಿಷಿಯವರನ್ನು ಕಾಣುವುದಿಲ್ಲವೇ ? "

" ಕಾಣುತ್ತೇನೆ. ನಾನು ಇದೇ ಮುಂಬಯಿಗೆ ಬಂದಿದ್ದೇನೆ. ನಾಲ್ಕು ದಿವಸ ಕಳೆದ ಮೇಲೆ ಅವರ ದರ್ಶನ ತೆಗೆದುಕೊಳ್ಳುತ್ತೇನೆ. "

" ಅವರು ನಿಮಗೆ ಕಾಗದ ಬರೆಯುವುದರಲ್ಲಿದ್ದರು. "

" ಏಕೆ ಸರ್. "

" ಭವನಕ್ಕೆ ಗಾಂಧೀಜಿಯವರ ಪ್ರತಿಮೆಯೊಂದು ಬೇಕಾಗಿದೆ. ಅದನ್ನು ನಿಮ್ಮ ಕೈಲೇ ಮಾಡಿಸಬೇಕೆಂದು ಮುನಿಷಿಜೀಯವರು ಉದ್ದೇಶಪಟ್ಟುಕೊಂಡಿದ್ದಾರೆ. "

" ನಾನು ಭಾಗ್ಯಶಾಲಿ ಸರ್. ' ಭವನ ' ಕ್ಕೆ ಕಾಣಿಕೆಯಾಗಿ ನಾನು ಗಾಂಧೀಜಿಯವರ ಮೂರ್ತಿ ಮಾಡಿಕೊಡುತ್ತೇನೆ. "

" ಕಲಾವಿದರಿಂದ ಉಚಿತ ಸೇವೆ ತೆಗೆದುಕೊಳ್ಳುವುದು ತಪ್ಪೆಂದು ಮುನಿಷಿಜೀಯವರ ನಿರ್ಧಾರ. — ನೀವು ಎಲ್ಲಿದ್ದೀರಿ ? ನಿಮ್ಮ ವಿಳಾಸ ಕೊಟ್ಟು ಹೋಗಿ. "

" ಸದ್ಯಕ್ಕೆ ನಾನು ಗೆಳೆಯನೊಬ್ಬನ ಜತೆ ಇದ್ದೇನೆ. ಪ್ರಭಾದೇವಿಗೆ ಅವರ ಮನೆ ಗೊತ್ತು. "

" ನೀನೂ ಇತ್ತ ಕಡೆ ಬಂದು ಬಹಳ ದಿವಸವಾಯಿತು ಪ್ರಭಾ.

" ಹೌದು ಶುಕ್ಲಾಜಿ - ಕೈತುಂಬ ಕೆಲಸ. ಶಾಲೆಯ ಪ್ರದರ್ಶನ ಸಮೀಪಿಸುತ್ತಿದೆ. "

" ಭವನದ 'ಕಲಾಪ್ರದರ್ಶನ' ವೂ ಇದೆಯೆಂಬುದನ್ನು ಮರೆಯಬೇಡ."

" ಭವನ ಮರೆಯಲು ಸಾಧ್ಯವೇ ಶುಕ್ಲಾಜಿ. "

ಶುಕ್ಲ ಅವರು ಬೆಲ್ ಹೊಡೆದು ಆಳನ್ನು ಕರೆದು ಚಹಾ, ಬಿಸ್ಕತ್ತುಗಳನ್ನು ತೆಗೆದುಕೊಂಡು ಬಾರೆಂದು ಹೇಳಿ ಶ್ರೀಕಂಠನ ಕಡೆ ತಿರುಗಿ

" ಭವನ ತೋರಿಸುತ್ತೇನೆ ಬನ್ನಿ " ಎಂದರು.

ಭವನದ ನಾಟ್ಯಮಂದಿರ, ಪುಸ್ತಕ ಭಂಡಾರ, ಸಂಗೀತ ಶಾಖೆ, ಸಂಶೋಧನ ವಿಭಾಗಗಳನ್ನು ತೋರಿಸಿ ಅವುಗಳ ಚಟುವಟಿಕೆಗಳನ್ನು ಶುಕ್ಲರು ವರ್ಣಿಸಿದರು. ಭಾರತ ಸಂಸ್ಕೃತಿಯ ಪುನರುಜ್ಜೀವನಕ್ಕೆ ಶ್ರೀ ಮುನಿಷಿಯವರು ಕೈ-ಗೊಂಡಿದ್ದ ಉದಾತ್ತ ಸೇವೆಯನ್ನು ನೋಡಿ ಶ್ರೀಕಂಠನ ಮನಸ್ಸಿಗೆ ಹರ್ಷವಾಯಿತು.

ಅವರು ಶುಕ್ಲರ ಕಛೇರಿಗೆ ಹಿಂದಿರುಗುವ ವೇಳೆಗೆ ಚಹ, ಬಿಸ್ಕತ್ತು ಸಿದ್ಧವಾಗಿತ್ತು. ಅಲ್ಪಾಹಾರವಾದ ಮೇಲೆ ಶುಕ್ಲರು, ಶ್ರೀಕಂಠನ ವಿಳಾಸವನ್ನು ಗುರುತು ಹಾಕಿಕೊಂಡು

" ನಾನು ಶ್ರೀ ಮುನಿಷಿಯವರಲ್ಲಿ ಪ್ರಸ್ತಾಪಿಸಿ ತಿಳಿಸುತ್ತೇನೆ. ನೀವೂ ಮೇಲಿಂದ ಮೇಲೆ ಭವನಕ್ಕೆ ಬರುತ್ತಿರಿ. ಶಿಲ್ಪ, ವಾಸ್ತುಶಿಲ್ಪ, ಚಿತ್ರಕಲೆ, ಪ್ರತಿಮಾ ಲಕ್ಷಣಗಳ ಮೇಲೆ ಪುಸ್ತಕ ಭಂಡಾರದಲ್ಲಿ ಒಳ್ಳೆಯ ಗ್ರಂಥಗಳಿವೆ – ಅವುಗಳನ್ನು ಉಪಯೋಗಿಸಿಕೊಳ್ಳಿ. " ಎಂದರು.

ಶ್ರೀಕಂಠ, ಪ್ರಭಾ ಶುಕ್ಲರ ಸೌಹಾರ್ದಕ್ಕೆ ಕೃತಜ್ಞತೆ ಸಮರ್ಪಿಸಿ ಅಲ್ಲಿಂದ ಹೊರಟರು.

" ಎಲ್ಲಿಗೆ ಹೋಗೋಣ ? " ಎಂದು ಪ್ರಭಾ ಕೇಳಿದಳು.

" ನಿಶ್ಶಬ್ದವಾಗಿರುವ ಸ್ಥಳ ಯಾವದಾದರೂ ಇದ್ದರೆ ಅಲ್ಲಿ ಹೋಗಿ ಕೂಡೋಣ " ಎಂದು ಹೇಳಿದ.

ಇಬ್ಬರೂ ಬಂದು ಮಲಬಾರ್ ಗುಡ್ಡದ ಮೇಲಿದ್ದ ' ತೂಗು ತೋಟ ' ದಲ್ಲಿ ( Hanging Gardens ) ಕುಳಿತರು.

" ನನ್ನ ಮೇಲೆ ಅಸಮಾಧಾನವೇ ಶ್ರೀಕಾಂತರೇ " ಎಂದು ಪ್ರಭಾ ಕೇಳಿದಳು.

" ಅಸಮಾಧಾನವೇತಕ್ಕೆ ? "

" ಜನಸಂಪರ್ಕವೇ ಬೇಡವೆಂದಿದ್ದ ನಿಮ್ಮನ್ನು ಶುಕ್ಲಾಜೀಗೆ ಪರಿಚಯ ಮಾಡಿಕೊಟ್ಟುದಕ್ಕೆ. "

" ಅದರಿಂದ ನನಗೆ ಲಾಭವೇ ಆಯಿತಲ್ಲ ! "

" ಶುಕ್ಲಾಜಿ ಹೇಳಿದಂತೆ ನೀವು ಭವನದ ಸಂಬಂಧ ಬೆಳಸಿಕೊಳ್ಳುವುದೊಳ್ಳೆಯದು. ದೇಶವಿದೇಶಗಳ ವಿದ್ವನ್ಮಣಿಗಳು ಇಲ್ಲಿಗೆ ಬರುತ್ತಿರುತ್ತಾರೆ. "

" ಆಗಲಿ. ನನ್ನ ಭವಿಷ್ಯದ ಜವಾಬುದಾರಿಯನ್ನು ನೀವೂ ರಾಜೂ ಹೊತ್ತಿರುವಾಗ ನನಗೇನು ಯೋಚನೆ ? "

" ಸ್ಕೂಲ್ ಆಫ್ ಆರ್ಟ್ಸ್ ( School of Arts ) ಸೇರುವ ಉದ್ದೇಶ ವಿದೆಯೇ ? "

" ಇಲ್ಲಿಯ ಕಲಾಶಾಲೆ ಸೇರಬೇಕೆಂಬುದು ನನ್ನ ಬಹಳ ದಿವಸಗಳ ಆಸೆ. ನಿಮ್ಮ ಅಭಿಪ್ರಾಯವೇನು ? "

" ಕಲಾಶಾಲೆಯಿಂದ ನಿಮಗೆ ಪ್ರಯೋಜನವಾಗುವುದೆಂದು ನನಗನಿಸುವುದಿಲ್ಲ. "

" ಏಕೆ ? "

" ಶಾಲೆಯಲ್ಲಿ ದೊರೆಯುವ ಕಲೆಗಿಂತ ನಿಮ್ಮ ಕಲೆ ಬಹಳ ಮುಂದೆ ಹೋಗಿದೆ. ಮುಖಸ್ತುತಿಯೆಂದು ನೀವು ಭಾವಿಸದಿದ್ದರೆ ಒಂದು ವಿಷಯ ಹೇಳಬಯಸುತ್ತೇನೆ. "

" ಹೇಳಿ. "

" ಮುಂಬಯಿಯಲ್ಲಿ ಬಹಳ ಜನ ಶಿಲ್ಪಿಗಳಿದ್ದಾರೆ. ದೊಡ್ಡ ದೊಡ್ಡ ಶಿಲ್ಪ ಸಂಸ್ಥೆಗಳಿವೆ. ಆದರೆ ನಿಮ್ಮ ಮಟ್ಟದ ಶಿಲ್ಪಿಗಳು ಇಲ್ಲಿಲ್ಲವೆಂದು ಧಾರಾಳವಾಗಿ ಹೇಳಬಲ್ಲೆ. ಇಲ್ಲಿಯ ಶಿಲ್ಪಿಗಳು ಇಟಲಿ, ಇಂಗ್ಲೆಂಡ್, ಫ್ರಾನ್ಸ್ ಮಾದರಿಗಳನ್ನನುಕರಿಸುತ್ತಾರೆ. ಶಿಲ್ಪದಲ್ಲಿ ಭಾರತೀಯ ಸಂಪ್ರದಾಯವೊಂದಿದೆ - ಅದು ವೈಶಿಷ್ಟ್ಯಪೂರ್ಣವಾದುದು ಎಂಬ ಕಲ್ಪನೆಯೇ ನಮ್ಮ ಶಿಲ್ಪಿಗಳಿಗಿಲ್ಲ. ವಿದ್ಯಾಭವನಕ್ಕೆ ನಿಮ್ಮ ಕೈಯಲ್ಲಿಯೇ ಗಾಂಧೀಜಿಯವರ ಮೂರ್ತಿ ಮಾಡಿಸಬೇಕೆಂದು ಶ್ರೀ ಮುನಿಷಿಯವರು ನಿರ್ಧರಿಸಿರುವುದೂ ಇದೇ ಕಾರಣಕ್ಕೆಂದು ನನ್ನ ಅಭಿಪ್ರಾಯ. "

" ಇಷ್ಟೊಂದು ಮೆಚ್ಚುಗೆಗೆ ನಾನು ಅರ್ಹನಲ್ಲ ಪ್ರಭಾದೇವಿ. ನಾನೊಬ್ಬ

ಸಾಮಾನ್ಯ ಹಳ್ಳಿಯ ಶಿಲ್ಪಿ. ”

“ ಭಾರತದ ಬದುಕು, ಸಂಸ್ಕೃತಿ ಉಳಿದಿರುವುದು ಹಳ್ಳಿಗಳಲ್ಲಿಯೇವಿನಾ ಮುಂಬಯಿಯಂಥ ಪಟ್ಟಣಗಳಲ್ಲಿಯಲ್ಲ. ದೊಡ್ಡ ಪಟ್ಟಣಗಳ ಅಭಾರತೀಯತೆಯನ್ನು ಹಳ್ಳಿಗಳು ನಿವಾರಿಸಬೇಕು. ”

ಪ್ರಭಾದೇವಿಯ ಮಾತಿನಲ್ಲಿ ಎಷ್ಟು ಅಂಶ ಅಭಿಮಾನ, ಎಷ್ಟು ಅಂಶ ಸತ್ಯ ಮೂಡಿದೆಯೆಂಬುದನ್ನು ಶ್ರೀಕಂಠ ವಿಚಾರ ಮಾಡತೊಡಗಿದ. ಸ್ವರ್ಣ - ಅಭಿಮಾನಿ. ತಾನು ಮಾಡಿದುದೆಲ್ಲಾ ಅವಳಿಗೆ ಪ್ರಿಯವಾಗಿತ್ತು, ಕೌತುಕವನ್ನುಂಟು ಮಾಡಿತ್ತು. ಆದರೆ ಪ್ರಭಾದೇವಿ - ಒಣ ಅಭಿಮಾನಿಯಲ್ಲ. ಈಕೆ ಸ್ವಯಂ ಕಲಾವಿದೆ. ಮುಂಬಯಿಯಲ್ಲಿ ಜೀವನ ಕಳೆದವಳು. ಹಲವು ಶಿಲ್ಪಿಗಳ ಚಿತ್ರಗಾರರ ಕೃತಿಗಳ ಪರಿಚಯವುಳ್ಳವಳು. ಪ್ರಭಾ ನನ್ನನ್ನು ಮೆಚ್ಚಿಸಲು ಅಸತ್ಯ ನುಡಿಯಬೇಕಾದ ಅಗತ್ಯವಿಲ್ಲ. ಅವಳಿಗೆ ನಾನು ಯಾರು ? — ಯಾವನೋ ಆಗಂತುಕ - ಅಪರಿಚಿತ.

ಪ್ರಭಾದೇವಿಯ ಮೆಚ್ಚುಗೆಯ ಮಾತು ಅಭಿಮಾನದಿಂದ ಪ್ರೇರಿತವಾಗಿರಲಿ, ಸತ್ಯದಿಂದ ಕೂಡಿರಲಿ, ಶ್ರೀಕಂಠನ ಮನಸ್ಸಿಗೆ ತುಂಬ ಆಪ್ಯಾಯಮಾನವಾಯಿತು. ಅವನ ಸುಪ್ತ ಚೇತನವನ್ನು ಅದು ಬಡಿದೆಬ್ಬಿಸಿ ಜಾಗೃತಗೊಳಿಸಿತ್ತು.

“ ನಾನು ಕಲಾಶಾಲೆ ಸೇರುವುದು ನಿರರ್ಥಕವೆಂದು ನಿಮ್ಮ ಅಭಿಪ್ರಾಯವೇ ? ”

“ ಖಂಡಿತವಾಗಿ ನಿರರ್ಥಕ. ನಿಮ್ಮ ಚೇತನ ಗ್ರೀಕ್ ಮಾಡೆಲ್‌ಗಳ ಪ್ರತಿಚಿತ್ರ ಮಾಡುವುದಕ್ಕೆ ಹುಟ್ಟಿರುವ ಚೇತನವಲ್ಲ – ಅದು ಸ್ವತಂತ್ರವಾಗಿ ಬೆಳೆಯಬೇಕು. ”

“ ನಾನೇನು ಮಾಡಬೇಕೆಂದು ಸೂಚಿಸುವಿರಿ ? ”

“ ಸ್ವಂತ ಸ್ಟೂಡಿಯೋ ತೆಗೆಯುವುದು ಲೇಸು. ರಾಜ್ ಅವರನ್ನೂ ಕೇಳಿ ನೋಡಿ. ಅವರೂ ಇದೇ ಅಭಿಪ್ರಾಯ ವ್ಯಕ್ತ ಮಾಡುತ್ತಾರೆ. ”

ಶ್ರೀಕಂಠ ಯೋಚನಾಪರವಶನಾದುದನ್ನು ನೋಡಿ ಪ್ರಭಾ

“ ಹಣಕ್ಕೇನು ಮಾಡುವುದೆಂದು ಯೋಚಿಸುತ್ತಿರುವಿರಾ ? ” ಎಂದು ಕೇಳಿದಳು.

" ಇಲ್ಲ - ಸದ್ಯಕ್ಕೆ ಹಣದ ಯೋಚನೆಯಿಲ್ಲ. ಮೈಸೂರಿನಲ್ಲಿ ನನ್ನ ಹಣ ಯಾಲಕ್ಕಪ್ಪಾಚಾರ್ಯರಲ್ಲಿದೆ - ಅದನ್ನು ನಾನು ತರಿಸಿಕೊಳ್ಳಬಹುದು. ಪ್ರಭಾದೇವಿ, ಪರಿಚಯವಾದ ಸ್ವಲ್ಪವೇ ಹೊತ್ತಿನೊಳಗಾಗಿ ನನ್ನ ವಿಷಯವನ್ನೆಲ್ಲಾ ಸಂಗ್ರಹಿಸಿ ಬಿಟ್ಟಿದ್ದೀರಿ - ನಿಮ್ಮ ಪರಿಚಯ ಮಾಡಿಕೊಟ್ಟೇ ಇಲ್ಲವಲ್ಲಾ !"

" ನನ್ನದು ಹೇಳಿಕೊಳ್ಳುವಂಥದ್ದೇನೂ ಇಲ್ಲ. ನಾನೊಬ್ಬ ಕಲಾ ವಿದ್ಯಾರ್ಥಿನಿ. "

" ನಿಮಗೆ ತಾಯಿ ತಂದೆ ಇದ್ದಾರೆಯೇ ? "

" ತಂದೆ ಇದ್ದಾರೆ - ತಾಯಿ ತೀರಿಕೊಂಡರು. - ಬಲತಾಯಿ ಇದ್ದಾರೆ."

" ತಂದೆಯವರಿಗೇನು ಕೆಲಸ ? "

" ಅವರು ಕಸ್ಟಂ ಕಛೇರಿಯ (Custom office) ಸೂಪರಿಂಟೆಂಡೆಂಟ ರಾಗಿದ್ದು ವಿರಾಮವೇತನ ಪಡೆದಿದ್ದಾರೆ. "

" ಅಣ್ಣತಮ್ಮಂದಿರು – ಅಕ್ಕತಂಗಿಯರು.... "

" ಯಾರೂ ಇಲ್ಲ. ತಂದೆಯವರಿಗೆ ನಾನೊಬ್ಬಳೇ ಮಗಳು. ಬಲ ತಾಯಿಗೆ ಒಬ್ಬ ಮಗನಿದ್ದಾನೆ – ಅವನಿನ್ನೂ ಸಣ್ಣವನು. "

" ನಿಮ್ಮ ಕಲಾಕೃತಿಗಳನ್ನು ಯಾವಾಗ ತೋರಿಸುವಿರಿ ? "

" ನಿಮಗೆ ತೋರಿಸಲು ಭಯವಾಗುವುದಲ್ಲಾ ! "

" ಏಕೆ ? "

" ಅವುಗಳ ತೀರ ಅಪ್ರಬುದ್ಧಾವಸ್ಥೆ. "

" ಅಪ್ರಬುದ್ಧವೆಂದು ಮೊಗ್ಗೆಯನ್ನು ತಿರಸ್ಕರಿಸಲಾಗುವುದೇ ? – ಪ್ರಕೃತಿ ನೋಟಗಳನ್ನು (Landscapes) ಮಾಡಿರುವಿರಾ ? "

" ಮಾಡಿದ್ದೇನೆ. ನನ್ನ ' ಅಭಿಸಾರಿಕೆ ' – ' ಅಪ್ಸರೆಯರು ' – ' ಕಾಡು ಕುಸುಮಗಳು ' ಚಿತ್ರಗಳಿಗೆ ಕಳೆದ ವರ್ಷದ ಪ್ರದರ್ಶನದಲ್ಲಿ ಪಾರಿತೋಷಕ ಗಳು ದೊರೆತವು. "

" ತುಂಬ ಸಂತೋಷ. ಅವುಗಳನ್ನು ನೀವು ನನಗೆ ತೋರಿಸಲೇ ಬೇಕು. "

" ಆಗಬಹುದು " ಎಂದು ಒಪ್ಪಿಕೊಂಡು ತನ್ನ ಕೈಗಡಿಯಾರ ನೋಡಿ ಘಂಟೆ ನಾಲ್ಕಾಯಿತು. ಹೋಗೋಣವೇ – ರಾಜ್ ಕಾಯುತ್ತಿರುತ್ತಾರೆ. "

ಎಂದಳು.

ಶ್ರೀಕಂಠ, ಪ್ರಭಾ ಇಬ್ಬರೂ 'ಚೇತನ' ತಲುಪುವ ವೇಳೆಗೆ ರಾಜ್ ಬಂದು ಕಾಯುತ್ತಿದ್ದ. ಮೂವರೂ 'ರೆಸ್ಟುರಾ' ದಲ್ಲಿ ಕುಳಿತು, ಟೋಸ್ಟ ಕಾಫಿಗೆ 'ಆರ್ಡ್ಡರ್' ಮಾಡಿದರು

"ಎಲ್ಲೆಲ್ಲಿಗೆ ಹೋಗಿದ್ದಿರಿ" ಎಂದು ರಾಜು ಕೇಳಿದ.

ಪ್ರಭಾ ಒಪ್ಪಿಸಿದ ನಗರ ಪರ್ಯಟನ ವರದಿ ಕೇಳಿ ರಾಜು ಸಂತೋಷ ಪಟ್ಟುಗೊಂಡು

"ವಿದ್ಯಾಭವನಕ್ಕೆ ಶ್ರೀಕಂಠನನ್ನು ಕರೆದುಕೊಂಡು ಹೋದುದು ಒಳ್ಳೆಯು ದಾಯಿತು ಪ್ರಭಾ" ಎಂದು ಹೇಳಿದ.

ಬಾಯ್ ತಂದಿಟ್ಟ ಟೋಸ್ಟ್, ಕಾಫಿ ಸೇವಿಸುತ್ತಾ ಪ್ರಭಾ ಶ್ರೀಕಂಠನಿಗೆ ತಾನಿತ್ತ ಸಲಹೆಯನ್ನು ರಾಜೂಗೆ ಹೇಳಿದಳು.

"ಅದಕ್ಕೆ ನೀನೇನು ಹೇಳಿದೆ ರಾಜೂ?"

"ನಿನ್ನ ಕೇಳಿ ನಿರ್ಧರಿಸುವುದಾಗಿ ಹೇಳಿದೆ."

"ಪ್ರಭಾ ಸಲಹೆ ಸೂಕ್ತವಾಗಿದೆ. ನಿನ್ನ ದರ್ಜೆಯ ಶಿಲ್ಪಿಗಳು ಮುಂಬಯಿ ಯಲ್ಲಿಲ್ಲವೆಂಬುದು ನಿರ್ವಿವಾದ."

"ನಾನು 'ಸ್ಟೂಡಿಯೋ' ತೆಗೆಯುವದಾದರೆ ಒಳ್ಳೆಯ ಸ್ಥಳ ಹುಡುಕ ಬೇಕು."

"ಸದ್ಯಕ್ಕೇಕೆ ಬೇರೆ ಸ್ಥಳ - ನನ್ನ ರೂಮನ್ನೇ ಸ್ಟೂಡಿಯೋ ಮಾಡಿ ಕೊಳ್ಳಬಹುದಲ್ಲಾ?"

"ನಿನ್ನ ಎರಡು ರೂಮುಗಳು ನಿನಗೇ ಸಾಲದು. ನಮ್ಮಿಬ್ಬರ ವಾಸ, ಸ್ಟೂಡಿಯೋಕೆ ಅವು ತೀರ ಸಾಲದಾಗುತ್ತವೆ. 'ವಿದ್ಯಾಭವನ' ದವರು ನನಗೆ ಗಾಂಧೀಜಿ ಪ್ರತಿಮೆ ಕೆಲಸ ಒಪ್ಪಿಸಿದರೆ ವಿಶಾಲವಾದ ಹಜಾರ ಬೇಕಾಗುತ್ತದೆ."

"ನಿನಗೆ ಹೇಗೆ ಅನುಕೂಲವೋ ಹಾಗೇ ಮಾಡು ಮಾರಾಯ. ಸದ್ಯ ನೀನು ನಿರ್ವಿಣ್ಣತೆ ಕಳೆದುಕೊಂಡು ಕೆಲಸದಲ್ಲಿ ಆಸಕ್ತನಾದರೆ ಸಾಕು."

"ನೀವು ಹೋದ ಕೆಲಸವೇನಾಯಿತು ರಾಜ್" ಎಂದು ಪ್ರಭಾ ಕೇಳಿ ದಳು.

"ಪ್ರಿನ್ಸಿಪಾಲರು ಸ್ವಲ್ಪ 'ಗರಂ' ಆಗಿದ್ದರು ಪ್ರಭಾ. ಅಜಂತೆಯ ಪ್ರತಿ

ಚಿತ್ರಗಳನ್ನು ನಾನು ಮಾಡಿ ಪ್ರದರ್ಶನಕ್ಕಿಡದಿದ್ದರೆ ತಾವು ತುಂಬ ಅಸಮಾಧಾನಪಟ್ಟುಕೊಳ್ಳುವುದಾಗಿ ತಿಳಿಸಿದರು.

" ಬಹಳ ಸಂತೋಷ. ಪ್ರಿನ್ಸಿಪಾಲರ ಒತ್ತಾಯವಿರದಿದ್ದರೆ ರಾಜ್ ಕೆಲಸವೇ ಮಾಡುವುದಿಲ್ಲ ಶ್ರೀಕಾಂತ........ಮಹಾ ಸೋಮಾರಿ. "

" ಅದು ಸೋಮಾರಿತನವಲ್ಲ ಪ್ರಭಾ. ಕಲಾವಿದನ ಹೃದಯ ಒಮ್ಮೊಮ್ಮೆ ಬಂಜರು ಭೂಮಿಯಂತಾಗುತ್ತದೆ. ಆಗವನು ಅದನ್ನು ಹದಮಾಡಿ ಗೊಬ್ಬರ ಗೋಡು ಹಾಕಬೇಕಾಗುತ್ತದೆ. ಅವನ ಕಷ್ಟದ ಪರಿಚಯ ಪಡೆದವರು ಅವನನ್ನು ಸೋಮಾರಿ ಎನ್ನುತ್ತಾರೆ. "

" ನಿಮ್ಮ ಕಷ್ಟದ ಪರಿಚಯ ನನಗಿಲ್ಲವೇ ರಾಜ್ - ಪರಿಹಾಸ್ಯಕ್ಕಂದೆ. "

ರಾಜೂ ನಕ್ಕುಬಿಟ್ಟ. ಬಿಲ್ ಪಾವತಿಯಾದ ಮೇಲೆ ಎಲ್ಲರೂ 'ಮೆಟ್ರೊ' ಸಿನಿಮಾ ಮಂದಿರದ ಕಡೆ ನಡೆದರು.

' ಕಾರ್ಮೆನ್ ' ( Carmen ) ಚಿತ್ರ ನೋಡಿಯಾದ ಮೇಲೆ

" ಪ್ರಭಾನನ್ನು ಮನೆ ಮುಟ್ಟಿಸಿ ನಾವು ಮನೆಗೆ ಹೋಗೋಣ " ಎಂದು ರಾಜು ಸೂಚಿಸಿದ.

" ಬೇಡ – ನಾನು ಹೋಗುತ್ತೇನೆ. ಶ್ರೀಕಾಂತರಿಗೆ ತುಂಬ ಆಯಾಸವಾಗಿರಬಹುದು. ನೀವು ಮನೆಗೆ ಹೋಗಿ " ಎಂದಳು.

" ಪ್ರಭಾ, ನಾಳೆ ನಾನು ಬೆಳಿಗ್ಗೆಯೇ ಶಾಲೆಗೆ ಹೋಗಬೇಕಾಗಿದೆ. ನಿನಗೆ ಕ್ಲಾಸಿದೆಯೇನು ? "

" ಇಲ್ಲ - ಪ್ರದರ್ಶನಕ್ಕೆ ಚಿತ್ರಗಳನ್ನು ರಚಿಸಲು ನಾನು ರಜಾ ತೆಗೆದುಕೊಂಡಿದ್ದೇನೆ. "

" ಹಾಗಾದರೆ ಬೆಳಿಗ್ಗೆ ಬಂದು ಬಿಡು - ಶ್ರೀಕಂತ, ನೀನೂ ಮ್ಯುಸಿಯಮ್ಮಿಗೆ ಹೋಗಿ ಬನ್ನಿ. "

" ಆಗಬಹುದು. "

ಎಂದೊಪ್ಪಿಕೊಂಡು ಪ್ರಭಾ ರೇಲ್ವೆ ನಿಲ್ದಾಣದ ಕಡೆ ಹೊರಟಳು. ಗೆಳೆಯರು ಬಸ್ ಹತ್ತಿ ಮನೆಗೆ ಬಂದರು.

೩

ಪ್ರಭಾದೇವಿಯ ಸತತ ಪ್ರಯತ್ನದಿಂದ ಶ್ರೀಕಂಠನಿಗೆ 'ಶಿವಾಜಿ ಪಾರ್ಕ್' ನಲ್ಲಿ ಮೂರು ರೂಮಿನ ಒಂದು ಫ್ಲ್ಯಾಟ್(Flat)' ನಾದತರಂಗ ' ದಲ್ಲಿ ದೊರಕಿತ್ತು. ಬಾಡಿಗೆ ಸ್ವಲ್ಪ ಹೆಚ್ಚಾಗಿದ್ದರೂ ಫ್ಲ್ಯಾಟಿಗೆ ಕೆಲವು ವಿಶೇಷ ಸೌಕರ್ಯಗಳಿದ್ದವು. 'ನಾದತರಂಗ' ದ ಎದುರು ವಿಶಾಲವಾದ ಬಯಲಿದ್ದುದರಿಂದ ಗಾಳಿ, ಬೆಳಕುಗಳಿಗೆ ಕೊರತೆಯಿರಲಿಲ್ಲ. ಮೂರೇ ಫರ್ಲಾಂಗ್ ದೂರದಲ್ಲಿ ದಾದರ್ ಬೀಚ್ (Dadar Beach) ಸಿಕ್ಕುತ್ತಿತ್ತು. ಎಲ್ಲಕ್ಕೂ ಅತಿಶಯವಾಗಿ ಆ ಮನೆ ರಾಜೂ ಮನೆಗೆ ಸಮೀಪವಾಗಿತ್ತು. ಶ್ರೀಕಂಠನ ಮನೆಗೆ ಸ್ವಲ್ಪ ದೂರದಲ್ಲಿಯೇ ಬಸ್ಸಿನ ನಿಲ್ದಾಣವಿದ್ದುದರಿಂದ ಪ್ರಭಾದೇವಿ ಬಂದು ಹೋಗುವುದಕ್ಕೂ ಅನುಕೂಲವಾಗಿತ್ತು.

'ನಾದತರಂಗ'ದ ಮಾಲಿಕ ಪಂಡಿತ ಭಾವೆ ಒಂದುಕಾಲದಲ್ಲಿ ಮುಂಬಯಿ ಸಂಗೀತ ಸಾಮ್ರಾಜ್ಯದ ಅನಭಿಷಿಕ್ತ ಪ್ರಭುವಾಗಿದ್ದ. ಪಂಡಿತ ವಿಷ್ಣುದಿಗಂಬರ ಅವರ ಶಿಷ್ಯಕೋಟಿಗೆ ಸೇರಿದ್ದ. ಭಾವೆ ಸಂಗೀತ ವಿದ್ವನ್ಮಂಡಲಿಯಲ್ಲಿ ಯಾವತ್ತೂ ಸ್ಥಾನಮಾನ ಗಳಿಸಲಿಲ್ಲ. ಅವನ ವಿದ್ಯಾಸಂಪತ್ತು ಕೆಲವು ಚೀಸುಗಳಿಗೂ, ಮರಾಠಿ ಅಭಂಗ, ಲಾವಣಿ, ಗೌಲನ್, ಭಾವಗೀತೆಗಳಿಗೆ ಅಡಕವಾಗಿತ್ತು. ಬಾಲಗಂಧರ್ವರ ನಾಟಕ ಮಂಡಳಿಯಲ್ಲಿ ಸಣ್ಣ ಪುಟ್ಟ ಸ್ತ್ರೀ ಪಾತ್ರಗಳನ್ನಭಿನಯಿಸುತ್ತಿದ್ದ ಭಾವೇಗೆ ಒಂದು ದಿನ ಶುಕ್ರಮಹಾದೆಸೆ ಒಕ್ಕರಿಸಿತು.

ಗಂಧರ್ವರ ನಾಟಕಾಭಿಮಾನಿಗಳಾದ ಎಚ್. ಎಂ. ವಿ. ( H· M· V· His Master's Voice ) ಕಂಪೆನಿಯ ಹಿಂಡೆಯವರು ಭಾವೆಯನ್ನು ತಮ್ಮ ಸ್ಟೂಡಿಯೋಕ್ಕೆ ಕರೆದೊಯ್ದು ' ಉಪವನಸೆ ಗಾಥ ಕೋಕಿಲ ' ಭಾವಗೀತೆಯನ್ನು ರಿಕಾರ್ಡ್ ಮಾಡಿಕೊಂಡರು. ಒಂದೇ ತಿಂಗಳಲ್ಲಿ ಉಪವನದ ಕೋಕಿಲೆ ಮನೆಗಳಲ್ಲಿ, ಹೊಟೇಲುಗಳಲ್ಲಿ, ಸಿನೀಮಾ ಮಂದಿರಗಳಲ್ಲಿ, ರೇಡಿಯೋದಲ್ಲಿ, ಸಾರ್ವಜನಿಕ ಸಭೆಗಳಲ್ಲಿ ಹಾಡತೊಡಗಿತು. ಭಾವೆಯ ಕಂಠ ಮಾಧುರ್ಯ, ಗ್ರಾಮಫೋನ್ ರಿಕಾರ್ಡಿನ ಯಂತ್ರಸಾಧನದೊಂದಿಗೆ ಸಮರಸವಾಗಿದ್ದುದೇ ಮೂಲ ಕಾರಣ. ಉಪವನದ ಕೋಕಿಲೆಗೆ ಸಿಕ್ಕಿದ್ದ ಪ್ರೋತ್ಸಾಹ ಕಂಡು ಹಿಂಡೆ

ಯವರು ಭಾವೆಯ ಹತ್ತು ರಿಕಾರ್ಡುಗಳನ್ನು ಪ್ರಕಟ ಮಾಡಿದರು. ಭಾವೆಯ ಗ್ರಾಮಫೋನ್ ಗೀತೆಗಳು ಎಲ್ಲರ ಬಾಯಲ್ಲಿಯೂ ಕುಣಿಯಲಾರಂಭಿಸಿದವು. ವಿಕ್ಟೋರಿಯಾ, ಟ್ಯಾಕ್ಸಿ, ಬಸ್ ಕಂಡಕ್ಟರುಗಳ ಬಾಯಲ್ಲಿಯೂ ರಿಕಾರ್ಡಿನ ಗೀತೆಗಳು ಗುಂಯ್‌ಗುಡಲಾರಂಭಿಸಿದವು. ಭಾವೆಯ ಭವಿಷ್ಯ ಭದ್ರವಾಯಿತು. ಆಲ್ ಇಂಡಿಯಾ ರೇಡಿಯೋದಲ್ಲಿ ಅವನಿಗೆ ತಿಂಗಳಿಗೆ ಎರಡು ಮೂರು ಕಛೇರಿಗಳು ಕಟ್ಟಿಟ್ಟ ಮುಡಿಪು. 'ಗಣೇಶ ಚತುರ್ಥಿ'ಯ ಸಂದರ್ಭದಲ್ಲಿ ಎರಡು ತಿಂಗಳೂ ಭಾವೆಗೆ ಹಣದ ಸುರಿಮಳೆಯಾಗುತ್ತಿತ್ತು.

ಕಾಸಿನ ಬೆಲೆಯನ್ನು ಚೆನ್ನಾಗಿ ಬಲ್ಲ ಭಾವೆ ಹಣ ಪೋಲು ಮಾಡಲಿಲ್ಲ. ಅವನೇನೂ ಸಂಯಮಶೀಲನಾಗಿ, ವೈರಾಗ್ಯ ಮನೋವೃತ್ತಿಯುಳ್ಳವನಾಗಿರಲಿಲ್ಲ. ಸಂಗೀತಗಾರರಲ್ಲಿ ಅವಶ್ಯಕವಾಗಿ ಇರಬೇಕಾದ ಅನೇಕ ಸದ್ಗುಣ ( ? )ಗಳು ಅವನಲ್ಲಿ ಮನೆಮಾಡಿಕೊಂಡಿದ್ದವು. ಆದರೆ 'ಜೈಸಿ' ಗೆ ಬಿಡಿಕಾಸು ಖರ್ಚು ಮಾಡದೆ, ಸಕಲ ಭೋಗ ಭಾಗ್ಯವನ್ನೂ ಅನುಭವಿಸುವ ರಹಸ್ಯ ಭಾವೆಗೆ ಅರ್ಥವಾಗಿದ್ದಂತೆ ಯಾರಿಗೂ ಅರ್ಥವಾಗಿರಲಿಲ್ಲ. ಒಂದು ಬೀಡಿ ಕಟ್ಟಿಗೂ ಭಾವೆ ಕೈಯಿಂದ ಖರ್ಚು ಮಾಡುತ್ತಿರಲಿಲ್ಲ.

ಸಂಪಾದಿಸಿದ ಹಣದಲ್ಲಿ ಭಾವೆ ಶಿವಾಜಿ ಪಾರ್ಕಿನಲ್ಲಿ ಎರಡು ಭವ್ಯವಾದ ಬಂಗಲೆಗಳನ್ನು ಕಟ್ಟಿಸಿದ – ನಾದತರಂಗ, ಸಂಗೀತ ತರಂಗ. ಸಂಗೀತ ತರಂಗದ ಒಂದು ಫ್ಲ್ಯಾಟಿನಲ್ಲಿ ತಾನು ವಾಸವಾಗಿದ್ದು ಉಳಿದ ಫ್ಲ್ಯಾಟುಗಳನ್ನೂ, ನಾದತರಂಗವನ್ನೂ ಬಾಡಿಗೆಗೆ ಕೊಟ್ಟಿದ್ದ. ತಿಂಗಳು ತಿಂಗಳಿಗೆ ಕ್ರಮವಾಗಿ ಬರುತ್ತಿದ್ದ ಸಾವಿರರೂಪಾಯಿ ಬಾಡಿಗೆ ಹಣದಲ್ಲಿ ಸುಖಜೀವನ ಮಾಡಿಕೊಂಡು ಭಾವೆ ಕಾಲ ತಳ್ಳುತ್ತಿದ್ದ.

ಫ್ಲ್ಯಾಟಿನ ಬಾಡಿಗೆ ನೂರು ರೂಪಾಯಿಗೆ ಭಾವೆಯನ್ನು ಒಪ್ಪಿಸಬೇಕಾದರೆ ಶ್ರೀಕಂಠನಿಗೂ, ಪ್ರಭಾದೇವಿಗೂ ಸಾಕುಸಾಕಾಗಿ ಹೋಯಿತು. ಭಾವೆ ಬಣ್ಣಬಣ್ಣದ ಮಾತುಗಳನ್ನಾಡುವನೇ ವಿನಾ ಬಾಡಿಗೆ ಕಡಿಮೆ ಮಾಡಲೊಲ್ಲ. ಪ್ರಭಾ ಅವನನ್ನು ಮರಾಟಿಯಲ್ಲಿಯೇ ಮಾತನಾಡಿಸಿ, ಬಾಯಿತುಂಬ ಹೊಗಳಿ ಇತರ ಗವಯ್‌ಗಳನ್ನು ಅವನೆದುರಿಗೆ ಬಯ್ದು ಫ್ಲ್ಯಾಟ್ ಗಿಟ್ಟಿಸಿದ್ದಳು.

ಶ್ರೀಕಂಠನ ಫ್ಲ್ಯಾಟು 'ನಾದತರಂಗ' ದ ಎರಡನೆಯ ಅಂತಸ್ಥಿನಲ್ಲಿತ್ತು. ಫ್ಲ್ಯಾಟ್ ಪ್ರವೇಶ ಮಾಡಿದೊಡನೆಯೇ ಕಾಣುತ್ತಿದ್ದುದು ಒಂದು ಓಣಿ.

ಓಣಿಯ ಎಡಗಡೆ ಶೌಚಗೃಹ, ಸ್ನಾನಗೃಹ, ಅಡಿಗೆಯ ಶಾಲೆಗಳಿದ್ದವು. ಬಲಕ್ಕೆ ಕೆಲಸಕ್ಕೆ ಬಾರದ ವಸ್ತುಗಳನ್ನು ತುಂಬುವದೊಂದು ಕತ್ತಲೆ ಕೋಣೆ. ಓಣಿ ಬಲಮುಗ್ಗುಲಿಗೂ ಹಾಯುತ್ತಿತ್ತು. ಬಲಮುಗ್ಗುಲಿನ ಓಣಿಯ ಬದಿಗೆ ಒಂದು ವಿಶಾಲವಾದ ಹಜಾರ, ಒಂದು ಕೋಣೆ.

ಶ್ರೀಕಂಠ ಹಜಾರವನ್ನು ತನ್ನ 'ಸ್ಟುಡಿಯೋ' ಮಾಡಿಕೊಂಡು, ಪಕ್ಕದ ಕೋಣೆಯನ್ನು ತನ್ನ ಶಯ್ಯಾಗೃಹ ಮಾಡಿಕೊಂಡ. ಸ್ನಾನಗೃಹ, ಅಡಿಗೆಯ ಶಾಲೆಗಳಲ್ಲಿ 'ಗ್ಯಾಸ್ ಸರಕ್ಯೂಟ್' ಇದ್ದುದಲ್ಲದೆ, ಮನೆಯ ಬಾಗಿಲಿಗೆ 'ಕರೆ ಗಂಟೆ'ಯೂ (Calling bell) ಇತ್ತು. 'ನಾದತರಂಗ'ದಲ್ಲಿದ್ದ ಎಲ್ಲಾ ಫ್ಲ್ಯಾಟಿನವರ ಅನುಕೂಲಕ್ಕಾಗಿ ಒಂದು ಫೋನ್ ಇತ್ತು.

ಶ್ರೀಕಂಠನ ಫ್ಲ್ಯಾಟಿಗನುಗುಣವಾದ ಫರ್ನೀಚರು, ಶಿಲ್ಪ, ಚಿತ್ರಗೆಲಸಕ್ಕೆ ಅವಶ್ಯಕವಾಗಿದ್ದ ಸಾಮಾನುಗಳನ್ನು ಕೊಳ್ಳಲು ಪ್ರಭಾ ನೆರವಾಗಿದ್ದಳು. ಸಮೀಪದಲ್ಲಿದ್ದ 'ಶ್ರೀಕೃಷ್ಣಾ ಬೋರ್ಡಿಂಗ್ ಹೋಮ್' ನಿಂದ ಊಟ ಕಳಿಸುವುದಕ್ಕೂ, ನಾದತರಂಗದ ಹಿಂದೆಯೇ ಇದ್ದ ಇರಾನಿ ರೆಸ್ಟುರಾದಿಂದ ಚಹ, ಬ್ರೆಡ್ಡು, ಬಿಸ್ಕತ್ತು ಕಳಿಸುವುದಕ್ಕೂ ಅವಳೇ ಏರ್ಪಾಟು ಮಾಡಿದ್ದಳು.

ಹೊಸ ಮನೆಗೆ ಬಂದ ಹುರುಪು ಶ್ರೀಕಂಠನ ನಿರ್ವಿಣ್ಣತೆಯನ್ನು ಕೆಲವು ದಿನ ನಿವಾರಿಸಿತ್ತು. ರಾಮನಾಥಯ್ಯ, ಮಾದಯ್ಯ, ಇನ್‌ಸ್ಟಿಟ್ಯೂಟ್ ಸೂಪರಿಂಟೆಂಡೆಂಟರು, ಥಾಂಪ್ಸನ್ ಸಾಹೇಬರು, ಯಾಲಕ್ಕಪ್ಪಾಚಾರ್ಯರಿಗೆ ಕಾಗದ ಬರೆದು, ತನ್ನ ಸ್ಥಿತಿಗತಿಯನ್ನು ವಿವರಿಸಿದ್ದ. ಯಾಲಕ್ಕಪ್ಪಾಚಾರ್ಯರಲ್ಲಿ ಶೇಖರವಾಗಿದ್ದ ಹಣವೂ ಕೈಗೆ ಸಕಾಲದಲ್ಲಿ ಬಂದಿತು.

ಕೈತುಂಬ ಕೆಲಸವಿದ್ದರೂ ರಾಜು ಪ್ರತಿನಿತ್ಯ ಬಂದು ಶ್ರೀಕಂಠನನ್ನು ನೋಡಿ ಹೋಗುತ್ತಿದ್ದ. ಒಂದೊಂದು ದಿನ ಸಂಜೆಯನ್ನು ಇಬ್ಬರೂ ಬೀಚಿನಲ್ಲಿ ಕಳೆಯುತ್ತಿದ್ದರು. ಶ್ರೀಕಂಠನ ಯೋಗಕ್ಷೇಮದ ಪೂರ್ಣ ಜವಾಬುದಾರಿಯನ್ನು ಪ್ರಭಾ ತನ್ನ ಮೇಲೆ ಹಾಕಿಕೊಂಡಿದ್ದಳು. ಶ್ರೀಕಂಠ ಕೆಲಸದಲ್ಲಿ ಮೈಮರೆತಿದ್ದರೆ ತಾನೇ ಹೋಗಿ ಚಹಾ ತಂದುಕೊಡುವಳು. ಹೊಟೇಲ್ ಮಾಣಿ ತಂದಿಟ್ಟಿದ್ದ ಊಟ ತಣ್ಣಗಾಗಿದ್ದರೆ ತಾನೇ ಸ್ಟೊವ್ ಹೊತ್ತಿಸಿ, ಅವುಗಳನ್ನು ಬಿಸಿಮಾಡಿ ಶ್ರೀಕಂಠನಿಗೆ ಉಣಬಡಿಸುತ್ತಿದ್ದಳು.

ತನ್ನ 'ಸರಸ್ವತಿ' ವಿಗ್ರಹವನ್ನು ಮುಗಿಸಬೇಕೆಂದು ಶ್ರೀಕಂಠನ ಮನಸ್ಸಿ

ನಲ್ಲಿ ಆತುರವಿತ್ತು. ಆಗಾಗ್ಗೆ ಅದರ ಮೇಲುಮುಸುಕು ತೆಗೆದು ಸ್ವಲ್ಪ ತಿದ್ದು ತ್ತಿದ್ದ. ಆದರೆ ಹಳೆಯ ನೆನಪು ಉಮ್ಮಳಿಸಿ ಬಂದು ಅವನ ಕ್ರಿಯಾಶಕ್ತಿಯನ್ನು ಕುಂಠಿತಗೊಳಿಸುತ್ತಿತ್ತು.

ನೂರಾರು ಹೊಸ ಕೃತಿಗಳ ರೂಪರೇಷೆ ಸ್ಥೂಲವಾಗಿ ತಲೆಯಲ್ಲಿ ಮೂಡಿ ದ್ದರೂ ಶ್ರೀಕಂಠ ಯಾವದಕ್ಕೂ ಕೈಯಿಟ್ಟಿರಲಿಲ್ಲ. ಈ ಬಗೆಯ ನಿರರ್ಥಕ ಕಾಲಯಾಪನೆ ಶ್ರೀಕಂಠನ ಮಾನಸಿಕ ಆರೋಗ್ಯಕ್ಕೆ ಸಾಧಕವಾದುದಲ್ಲವೆಂದು ರಾಜು ಚಿಂತಿಸುತ್ತಿದ್ದ.

ಒಂದು ದಿನ ಶ್ರೀಕಂಠ ಮನೆಯಲ್ಲಿ ಒಬ್ಬನೇ ಕುಳಿತು ಪ್ರಭಾ ತಂದು ಕೊಟ್ಟಿದ್ದ 'ಬರ್ಲಿಂಗಟನ್ ಮ್ಯಾಗಜಿನ್ (Barlington Magazine) ಸಂಪುಟ ಗಳನ್ನು ನೋಡುತ್ತಿದ್ದಾಗ ರಾಜು ಕೈಯಲ್ಲಿ ಒಂದು ವಹಿ ಹೊತ್ತುಕೊಂಡು ಬಂದ. ಸ್ವಲ್ಪ ಹೊತ್ತು ಲೋಕಾಭಿರಾಮವಾಗಿ ಮಾತು ಸಾಗಿದ ಮೇಲೆ ರಾಜು ತನ್ನ ವಹಿ ಬಿಚ್ಚಿ ಅದರಲ್ಲಿದ್ದ ಫೋಟೋಗಳನ್ನೂ, ಮುದ್ರಣವಾಗಿದ್ದ ತ್ರಿವರ್ಣ ಚಿತ್ರಗಳನ್ನೂ ಶ್ರೀಕಂಠನ ಮುಂದೆ ಹರಹಿ,

"ಲೆನಿನ್, ಸ್ಟಾಲಿನ್ನರ ಚಿತ್ರಗಳನ್ನು ನೋಡಿರುವೆಯಾ ಶ್ರೀಕಂಠ?" ಎಂದು ಕೇಳಿದ.

"ನೋಡದೆ ಉಂಟೇ ? — ಇವುಗಳನ್ನೇಕೆ ತಂದಿರುವೆ ?"

"ಲೆನಿನ್, ಸ್ಟಾಲಿನ್ನರ ಎರಡು ಮೂರ್ತಿಗಳನ್ನು ನೀನು ನನಗೆ ಮಾಡಿ ಕೊಡಬೇಕು."

"ಅವುಗಳನ್ನು ತೆಗೆದುಕೊಂಡು ನೀನೇನು ಮಾಡುತ್ತೀ ರಾಜೂ."

"ಪಾರ್ಟಿ ಆಫೀಸಿಗೆ ಅರ್ಪಿಸಬೇಕೆಂದಿದ್ದೇನೆ."

"ಪಾರ್ಟಿ ಆಫೀಸು - ಯಾವ ಪಾರ್ಟಿ ಆಫೀಸು."

"ಕಮ್ಯುನಿಸ್ಟ ಪಾರ್ಟಿ ಆಫೀಸು."

"ನೀನು ಕಮ್ಯುನಿಸ್ಟೇ ?"

"ಹೌದು."

"ಯಾವಾಗಿನಿಂದ ?"

"ಮುಂಬಯಿಗೆ ಬಂದ ಮೇಲೆ."

"ಮೈಸೂರು ಸರ್ಕಾರ ನಿನಗೆ ಕಾಲಕ್ಷೇಪ ಕೊಡುತ್ತಿದೆ."

" ಅದಕ್ಕೇನು ? ಕಾಲಕ್ಷೇಪ ಪಡೆಯುವ ಅಧಿಕಾರ ನನಗಿಲ್ಲವೇ ? "

" ಇಲ್ಲವೆಂದವರು ಯಾರು ? ನೀನು ಕಮ್ಯುನಿಸ್ಟ್ ಆಗಿರುವ ವಿಷಯ ಸರ್ಕಾರಕ್ಕೆ ತಿಳಿದರೆ ತೊಂದರೆಯಾಗುವುದಿಲ್ಲವೇ ? "

" ಕಾಲಕ್ಷೇಪ ನಿಂತು ಹೋದರೆ ನಾನು ದುಃಖಪಡುವುದಿಲ್ಲ. "

" ನೀನು ಕಮ್ಯುನಿಸ್ಟ್ ಆಗಿರುವ ವಿಷಯ ಪ್ರಭಾದೇವಿಗೆ ಗೊತ್ತೇ ? "

ರಾಜು ನಕ್ಕು

" ನನ್ನನ್ನು ಕಮ್ಯುನಿಸ್ಟ್ ಪಾರ್ಟಿಗೆ ಸೇರಿಸಿದವಳೇ ಅವಳು " ಎಂದ.

" ಅವಳೂ ಕಮ್ಯುನಿಸ್ಟೇ ? "

" ಕಮ್ಯುನಿಸ್ಟರೆಂದರೆ ಅಷ್ಟು ಭಯವಾಗುತ್ತದೆಯೇ ? "

" ಭಯದ ಪ್ರಶ್ನೆಯಲ್ಲ - ನಾವು ಕಲಾವಿದರು. ನಮಗೂ ಕಮ್ಯುನಿಸಮ್ಮಿಗೂ ಏನು ಸಂಬಂಧ ? "

" ಸರ್ವಸಮತೆಯನ್ನು ಕಮ್ಯುನಿಸಂ ಬೋಧಿಸುತ್ತಿದೆ. ಮನುಷ್ಯ ಮನುಷ್ಯನಿಗೆ, ಸ್ತ್ರೀ ಪುರುಷರಿಗೆ ಇರುವ ಕೃತ್ರಿಮ ಭೇದವನ್ನು ಕಮ್ಯುನಿಸಂ ತೊರೆದು ಹಾಕಲೆತ್ನಿಸುತ್ತಿದೆ. ಸರ್ವಸಮತಾವಾದಿಯಾದ ಕಲಾವಿದ ಕಮ್ಯುನಿಸ್ಟ್ ಆಗದೆ ಇನ್ನು ಯಾರು ಆಗಬೇಕು ? "

" ಕಲಾವಿದ ತನ್ನ ಕಲೆಗಲ್ಲದೆ ಬೇರೆ ಯಾವದಕ್ಕೂ ಮನಸ್ಸು ಕೊಡಬಾರದು — ಲೌಕಿಕ ಸೌಖ್ಯಕ್ಕೂ ಅವನಿಗೂ ಬಾಂಧವ್ಯವಿಲ್ಲವೆಂದು ನೀನೇ ಹೇಳುತ್ತಿದ್ದೆ. "

" ಹೌದು – ಕಮ್ಯುನಿಸಂ ನನ್ನ ವಾದವನ್ನೇ ಸಮರ್ಥಿಸುತ್ತದೆ. ಕಲಾವಿದ ಸೌಖ್ಯಾಭಿಲಾಷಿಯಾಗಬಾರದು – ಲೋಕಸೇವೆಗೆ ತನ್ನ ಸಮಸ್ತ ಶಕ್ತಿ, ಪ್ರಭಾವವನ್ನು ಮೀಸಲಾಗಿಡಬೇಕೆಂದೂ ಅದೂ ಬೋಧಿಸುತ್ತಿದೆ. "

" ಈ ವಿಷಯ ನನಗೇನೂ ಗೊತ್ತಿಲ್ಲ ರಾಜು. ಗೊತ್ತಿಲ್ಲದ ವಿಷಯದ ಬಗ್ಗೆ ಅಭಿಪ್ರಾಯ ವ್ಯಕ್ತ ಮಾಡುವುದಕ್ಕೆ ನಾನೊಲ್ಲೆ. "

" ಇಂದಲ್ಲ ನಾಳೆ ನೀನು ಕಮ್ಯುನಿಸಂ ಪರಿಚಯ ಮಾಡಿಕೊಳ್ಳಬೇಕು ಶ್ರೀಕಂಠ. ಪಾರ್ಟಿಯ ಮುಖಂಡರ ಗುರುತು ಮಾಡಿಕೊಳ್ಳಬೇಕು. ಜಗತ್ತಿನ ಮುಖವನ್ನೇ ಕಮ್ಯುನಿಸಂ ಬದಲಾಯಿಸುತ್ತಿರುವಾಗ ಅದರ ವಿಚಾರ ಧೋರಣೆಯನ್ನರಿಯಬೇಕಾದುದು ಪ್ರತಿಯೊಬ್ಬ ಪುರೋಗಾಮಿಯ ಕರ್ತವ್ಯ. "

" ಹಾಗೇ ಆಗಲಪ್ಪಾ – ನೀನು ಆಗಾಗ್ಗೆ ಕಮ್ಯುನಿಸಂ ವಿಷಯ ನನಗೆ ಹೇಳುತ್ತಿರು. "

" ಇಲ್ಲಿ ನೋಡು - ನಿನಗಾಗಿ ಈ ಪುಸ್ತಕ " ಕಮ್ಯುನಿಷ್ಟ ಮ್ಯಾನಿ ಫೆಸ್ಟೋ " ( Communist Manifesto ) ತಂದಿದ್ದೇನೆ. ಪುರಸತ್ತಾದಾಗ ಓದಿ ನೋಡು. ಅನಂತರ ಈ ವಿಷಯ ಚರ್ಚಿಸೋಣ. "

ರಾಜೂಗೆ ಬೇಸರನಾಗಬಾರದೆಂದು ಶ್ರೀಕಂಠ ಒಪ್ಪಿಕೊಂಡ.

" ಲೆನಿನ್, ಸ್ಟಾಲಿನ್ನರ ಮೂರ್ತಿಗಳನ್ನು ಯಾವಾಗ ಮಾಡಿಕೊಡುವೆ?"

" ಒಂದೆರಡು ತಿಂಗಳು ಅವಕಾಶ ಕೊಡು. "

" ಹಾಗೇ ಆಗಲಿ – ಮೇಡೇ ( May Day ) ಹೊತ್ತಿಗೆ ಸಿದ್ಧವಾದರಾಯಿತು. " ಪೀಪಲ್ಸ್ ವಾಯ್ಸ್ " ( People's Voice ) ಪತ್ರಿಕೆ ಮೇಡೇ ವಿಶೇಷಾಂಕ ಪ್ರಕಟಿಸುತ್ತದೆ. ಅದರಲ್ಲಿ ನಿನ್ನ ಶಿಲ್ಪಗಳ ಪ್ರತಿಚಿತ್ರ ಬರಬೇಕೆಂದು ನನ್ನ ಆಸೆ. "

" ಭವನಕ್ಕೆ ಗಾಂಧೀಜಿಯವರ ಪ್ರತಿಮೆ ಮಾಡಿಕೊಡಬೇಕಾಗಿದೆಯಲ್ಲ ರಾಜು. ಅದು ಮುಗಿಯುವವರೆಗೆ ಇದಕ್ಕೆ ಹೇಗೆ ಕೈಯಿಕ್ಕಲಿ ? "

" ಅದನ್ನೊಪ್ಪಿಕೊಂಡೆಯಾ ? "

" ಒಪ್ಪಿಕೊಂಡೆ. "

ಆ ಬಗ್ಗೆ ರಾಜೂ ಯಾವ ಉತ್ಸಾಹವನ್ನೂ ವ್ಯಕ್ತ ಮಾಡಲಿಲ್ಲ. ಅವನ ಅನ್ಯಮನಸ್ಕತೆ ಶ್ರೀಕಂಠನಿಗೆ ಕಳವಳವನ್ನುಂಟು ಮಾಡಿತು.

" ಏಕೆ ? ಒಪ್ಪಿಕೊಳ್ಳಬಾರದಾಗಿತ್ತೇ ? "

" ಭವನದ ಗುಂಪಿನ ಜತೆ ನೀನು ಹೆಚ್ಚು ಸೇರದಿದ್ದರೆ ಒಳ್ಳೆಯದು. "

" ಅಂದು ಪ್ರಭಾದೇವಿಯ ಜತೆ ನಾನು ಭವನಕ್ಕೆ ಹೋಗಿ ಬಂದುದಕ್ಕೆ ನೀನೇ ಸಂತೋಷ ವ್ಯಕ್ತಗೊಳಿಸಿದೆ. "

" ಹೌದು – ನಿನ್ನ ಮನಸ್ಸು ವ್ಯಾಕುಲಗೊಂಡಿತ್ತು. ಭವನಕ್ಕೆ ಹೋಗಿ ಬಂದಮೇಲೆ ಅದು ತುಸು ಹರ್ಷಗೊಂಡಿತು – ಅದಕ್ಕಾಗಿ ಸಂತೋಷಿಸಿದೆ. "

" ಭವನದವರು ಮಾಡುತ್ತಿರುವ ಅಪರಾಧವೇನು ? "

" ಅದೊಂದು ಶುದ್ಧ ಬೂರ್ಜ್ವಾ ಸಂಸ್ಥೆ. "

" ಬೂರ್ಜ್ವಾ ಅಂದರೇನು ? "

" ಕಮ್ಯುನಿಸ್ಟ್ ಶಬ್ದಕೋಶದಲ್ಲಿ ಬುಜ್ವಾ ಎಂದರೆ ಸಂಪ್ರದಾಯಪ್ರಿಯ, ಪ್ರತಿಗಾಮಿ, ಮಾನವ ವಿರೋಧಿ, ಬಂಡವಳಿಗರ ಬಾಲಂಗೋಟಿ ಎಂದರ್ಥ. "

" ನಮ್ಮ ಪ್ರಾಚೀನ ಸಂಸ್ಕೃತಿಯನ್ನು ಕಾಯ್ದುಕೊಳ್ಳುವುದು ಬೂಜ್ವಾ ತನವೇ ? "

" ಕಮ್ಯುನಿಸ್ಟ್ ತತ್ತ್ವ ಎಂದರೆ ಪುರೋಗಾಮಿ ತತ್ತ್ವ. ಅದು ಬೆಳೆಯ ಬೇಕಾದರೆ ಬೂಜ್ವಾ ಸಂಸ್ಕೃತಿ ನಾಶವಾಗಬೇಕು. ಸಾಮಾನ್ಯ ಮನುಷ್ಯನ ಅರಿವಿಗೆ ಸಿಲುಕದ ತತ್ತ್ವ, ದರ್ಶನ, ಕಲೆ, ವಿದ್ಯೆ ಎಲ್ಲವೂ ಮೋಸ. ಶ್ರೀಮಂ ತರು, ಬಂಡವಾಳಶಾಹಿಗಳು, ರಾಜ ಮಹಾರಾಜರು ಜನರ ಅಜ್ಞಾನದ ಮೇಲೆ ಮಾಡಿದ ತಾಂಡವ ನೃತ್ಯ. ಕಮ್ಯುನಿಸ್ಟ್ ಬೆಲೆ ಕೊಡುವುದು ನಿನ್ನೆಗಲ್ಲ ಇಂದಿಗೆ. ಪ್ರತಿಗಾಮಿ ಬೂಜ್ವಾ ನೀತಿಯ ವಿರುದ್ಧ ಕಮ್ಯುನಿಸಂ ಸತತ ಹೋರಾಟ ನಡೆ ಸಿದೆ. " *

---

* Progressive ideology serves the interests of the revolutionary forces in society. The ideology is Marxism- Leninism. This represents the greatest ideological weapon of the Communist party and the working classes in the socialist revolutionary transformation of society. Contemporary bourgeois ideology on the contrary, represents a reactionary force. It serves the interests of the bourgeois in its class war against the working class and socialism. The distinctive features of bourgeois idealogy are denial of science : idealism, clericalism, and obsecurantism : propoganda in favour of chauvinism : racialism : cosmopolitanism. The victory of the working class and the triumph of socialism will destroy the soil in which the boaurgeois ideology is nourished. The influence of bourgeois ideology is disappearing, not in its own accord or spontaneously, but as a result of the relentless battle carried on against it. "

—" Small Dictionary of Philosophy " (U. S- S. R.)

“ ನೀನು ಬೂಜ್ವಾ - ಕಮ್ಯುನಿಸಂ ಎರಡು ಶಬ್ದಗಳನ್ನು ಧಾರಾಳವಾಗಿ ಉಪಯೋಗಿಸುತ್ತಿರುವೆಯಲ್ಲದೆ ಅವುಗಳ ಅರ್ಥ ವಿವರಿಸಿಲ್ಲ. ಯಾವದನ್ನು ನೀನು ಬೂಜ್ವಾ ಎನ್ನುವೆಯೋ ಆ ನೀತಿಯಿಂದ ಲೋಕಕ್ಕಾಗಿರುವ ಅನ್ಯಾಯ ವೇನು – ಯಾವದನ್ನು ನೀನು ಕಮ್ಯುನಿಸಂ ಎಂದು ಕರೆಯುತ್ತಿರುವೆಯೋ ಅದರಿಂದ ಆಗಿರುವ, ಮುಂದೆ ಆಗುವ ಮಹೋಪಕಾರವೇನು ವಿವರವಾಗಿ ತಿಳಿಸಬೇಕು. ”

“ ಇವತ್ತಿಗೆ ಇಷ್ಟೇ ಸಾಕು ಶ್ರೀಕಂಠ. ಸದ್ಯ ನಾನು ಶಾಲೆಗೆ ಹೋಗ ಬೇಕಾಗಿದೆ. ಇನ್ನೊಮ್ಮೆ ಎಲ್ಲವನ್ನೂ ಸ್ಪಷ್ಟವಾಗಿ ವಿವರಿಸುತ್ತೇನೆ - ಆ ವೇಳೆಗೆ ನೀನು ‘ ಕಮ್ಯುನಿಸ್ಟ್ ಮ್ಯಾನಿಫೆಸ್ಟೋ ’ ಓದಿದ್ದರೆ ನಾನು ಹೇಳುವುದು ಸ್ಪಷ್ಟವಾಗುತ್ತದೆ. ”

“ ಹಾಗೇ ಆಗಲಿ. ”

ರಾಜು ಹೊರಟು ಹೋದ ಮೇಲೆ ಶ್ರೀಕಂಠ ವಿಚಾರ ಮಾಡತೊಡಗಿದ. ಅವನ ವಿಚಾರ ಶಕ್ತಿಗೆ ಯಾರೋ ಪ್ರಬಲವಾದ ಪೆಟ್ಟುಕೊಟ್ಟಂತಾಗಿತ್ತು. ಅವನ ನಂಬಿಕೆಗಳನ್ನು ಯಾವದೋ ಶಕ್ತಿ ಹಿಡಿದಲುಗಿಸಿತ್ತು.

‘ ಇದು ವರೆಗೆ ನಾನು ನಂಬಿದ್ದು, ಆರಾಧಿಸಿದ್ದು, ಅಭ್ಯಾಸ ಮಾಡಿದ್ದು ಎಲ್ಲವೂ ಬುಜ್ವಾನೇ ? ’

ಎನ್ನುವ ಪ್ರಶ್ನೆ ಅವನನ್ನು ಕಾಡತೊಡಗಿತು.

ರಾಜೂ ವಿಚಾರಸರಣಿ ಶ್ರೀಕಂಠನ ಹೃದಯದಲ್ಲಿ ಭಯವನ್ನು ಬಿತ್ತಿತ್ತು.

‘ ಇವನೇ ಬೆಂಗಳೂರಿನಲ್ಲಿ ನಾನು ಕಂಡ ರಾಜುವೇ ? ’

‘ ಎಷ್ಟು ವ್ಯತ್ಯಾಸ ! ’

‘ ಸರ್ವ ಜೀವಕೋಟಿಯನ್ನು ಪ್ರೀತಿಸುತ್ತಿದ್ದ ಆ ರಾಜುವೇ ಇಂದು ಬೂಜ್ವಾಗಳ ವಿನಾಶ ಬಯಸುತ್ತಿದ್ದಾನೆಯೇ ? ’

‘ ಮಾನವ ದ್ವೇಷವೇ ಕಮ್ಯುನಿಸಂ ಧೋರಣೆಯೇ ? ’

ಎಂಬ ಸಮಸ್ಯೆಗಳು ಅವನನ್ನು ಕಾಡತೊಡಗಿದವು. ರಾಜೂ ಹೇಳಿದಂತೆ ‘ ಕಮ್ಯುನಿಸ್ಟ್ ಮ್ಯಾನಿಫೆಸ್ಟೋ ’ ಓದುವುದು ಅನಿವಾರ್ಯವಾಯಿತು.

ಕಮ್ಯುನಿಸ್ಟರ ಕೈಪಿಡಿಯಾಗಿದ್ದ ‘ ಮಾನಿಫೆಸ್ಟೋ ’ ಶ್ರೀಕಂಠ ಮೂರು ನಾಲ್ಕು ಬಾರಿ ಓದಿದ. ಅದರ ಚರ್ವಿತ ಚರ್ವಣ, ವಕ್ರವಾದ, ವರ್ಗದ್ವೇಷ,

ಅಸೀಮ ಕ್ರೌರ್ಯ ಅವನ ಹೃದಯವನ್ನು ಝಲ್ಲೆನಿಸಿತು.

'ಇದನ್ನು ರಾಜೂ ಒಪ್ಪಿಕೊಂಡಿರುವನೇ ?'

'ಪ್ರಭಾದೇವಿ ಒಪ್ಪಿಕೊಂಡಿರುವರೇ' ಎಂದು ಯೋಚಿಸತೊಡಗಿದ.

ಮಾರನೆಯ ದಿನ ಪ್ರಭಾ ಬಂದಾಗ ಶ್ರೀಕಂಠನೇ ಮಾತು ತೆಗೆದು

"ನಿನ್ನೆ ರಾಜು ನನ್ನ ಕೈಯಲ್ಲಿ 'ಕಮ್ಯುನಿಸ್ಟ್ ಮ್ಯಾನಿಫೆಸ್ಟೋ' ಇಟ್ಟು ಹೋದ" ಎಂದು ಹೇಳಿದ

"ತಿಳಿಯಿತು. ನೀವು ಲೆನಿನ್, ಸ್ಟಾಲಿನ್ನರ ಪ್ರತಿಮೆಗಳನ್ನು ಮಾಡಿಕೊಡಲೊಪ್ಪಿದುದಕ್ಕೆ ಧನ್ಯವಾದಗಳು. 'ಮ್ಯಾನಿಫೆಸ್ಟೋ' ಓದಿದಿರಾ ?"

"ಓದಿದೆ. ನನಗೇನೂ ಅರ್ಥವಾಗಲಿಲ್ಲ. ಪ್ರಭಾದೇವಿ - ನಾನು ಹಳ್ಳಿಯ ಹುಡುಗ. ಇಂಗ್ಲಿಷ್ ಹೆಚ್ಚು ಕಲಿತವನಲ್ಲ. ರಾಜಕೀಯ ನನಗೇನೂ ತಿಳಿಯದು. 'ಮ್ಯಾನಿಫೆಸ್ಟೋ' ಅಂಥ ಕಬ್ಬಿಣದ ಕಡಲೆ ಕೊಟ್ಟರೆ ನನ್ನ ಹಲ್ಲಿನಲ್ಲಿ ನುರಿಯುವುದೇ ?"

"ನೀವು ಹೇಳುವುದು ನಿಜ. ಅದರ ಹಿನ್ನೆಲೆಯನ್ನರಿಯಬೇಕು. ರಷ್ಯಾದ ಕ್ರಾಂತಿ, ಕಮ್ಯುನಿಸ್ಟ್ ಪಾರ್ಟಿಯ ಇತಿಹಾಸ, ಸ್ಟಾಲಿನ್ ರಷ್ಯಾದಲ್ಲಿ ಮಾಡಿರುವ ಮಹತ್ಕಾರ್ಯಗಳನ್ನರ್ಥ ಮಾಡಿಕೊಳ್ಳಬೇಕು. ಇದರ ಜೊತೆಯಲ್ಲಿ ಕಾರ್ಲ್ ಮಾರ್ಕ್ಸ್ ಮತ್ತು ಏಂಜಲ್ಸ್ ಇವರ ಕೃತಿಗಳ ಪರಿಚಯಮಾಡಿಕೊಳ್ಳಬೇಕು."

"ಹಾಗಾದರೆ ನಾನು ಶಿಲ್ಪ ಮಾಡುವುದನ್ನು ಬಿಟ್ಟು ಈ ಸಾಹಿತ್ಯ ಓದುವುದಕ್ಕೆ ಆರಂಭಿಸಬೇಕು."

"ಅಗತ್ಯವಿಲ್ಲ. ಕಮ್ಯುನಿಸ್ಟ್ ಸಾಹಿತ್ಯದ ಪರಿಚಯ ನಾನು ಮಾಡಿಕೊಡುತ್ತೇನೆ. ಲೆನಿನ್, ಸ್ಟಾಲಿನ್ನರ ಶಿಲ್ಪ ಆರಂಭಿಸುವುದಕ್ಕೆ ಮುಂಚೆ ನೀವು ಇವುಗಳನ್ನು ತಿಳಿದಿದ್ದರೆ ಒಳ್ಳೆಯದು."

"ಆಗಬಹುದು. ಎಂದಿನಿಂದ ನನ್ನ ಪಾಠ ಆರಂಭಿಸುವಿರಿ."

"ಇಂದಿನಿಂದಲೇ— ಮ್ಯಾನಿಫೆಸ್ಟೋ ಬಗ್ಗೆ ನಿಮ್ಮ ಅಭಿಪ್ರಾಯವೇನು?"

"ಮ್ಯಾನಿಫೆಸ್ಟೋ 'ವರ್ಗ ಸಮರ' ವನ್ನು ಕುರಿತು ಬಹಳ ಪ್ರಸ್ತಾಪ ಮಾಡಿದೆ. ವರ್ಗಸಮರ ಅನಿವಾರ್ಯವೇ ?"

"ಅನಿವಾರ್ಯ. ಕಾರ್ಮಿಕರಿಗೂ, ಬಂಡವಾಳಿಗರಿಗೂ - ಬೆಕ್ಕಿಗೂ ಇಲಿಗೂ ಮೈತ್ರಿ ಸಾಧ್ಯವೇ? ಬಂಡವಾಳಿಗರ ವರ್ಗ ನಾಶ ಮಾಡಿದ ಹೊರತೂ ಕಾರ್ಮಿ

ಕರು ಬದುಕಲು ಸಾಧ್ಯವಿಲ್ಲ. ”

“ ಬಂಡವಳಿಗರೆಲ್ಲಾ ರಾಕ್ಷಸರೇ ! ”

“ ಅದರಲ್ಲಿ ಸಂದೇಹವೇನು ? ”

“ ನನ್ನ ಅಭ್ಯುದಯಕ್ಕೆಲ್ಲಾ ಬಂಡವಳಿಗರೇ ಕಾರಣರಾಗಿರುವರಲ್ಲ. ಯಾಲಕ್ಕಪ್ಪಾಚಾರ್ಯರೂ, ಥಾಂಪ್ಸನ್ನರೂ ನನ್ನ ಕೈ ಹಿಡಿಯದಿದ್ದರೆ ನಾನು ಈವರೆಗೆ ಬರುತ್ತಿದ್ದೆನೇ ? ”

“ ಇದು ಒಬ್ಬಿಬ್ಬ ಬಂಡವಳಿಗರಿಗೆ ಸಂಬಂಧಪಟ್ಟ ಪ್ರಶ್ನೆಯಲ್ಲ. ಬಂಡವಾಳ ತತ್ತ್ವಕ್ಕೆ ಸಂಬಂಧಿಸಿದುದು. ಹತ್ತು ಜನದ ಸಂಪತ್ತು ಒಬ್ಬನಲ್ಲಿ ಸಂಗ್ರಹವಾದರಲ್ಲವೇ ಒಬ್ಬ ಶ್ರೀಮಂತನಾಗುವುದು — ಬಂಡವಳಿಗನಾಗುವುದು. ”

“ ಹೌದು - ಆದರೆ ಆ ಹತ್ತು ಜನಕ್ಕೆ ಅವನು ಕೂಲಿ ಕೊಟ್ಟಿರುತ್ತಾನೆ— ಪಾಲು ಕೊಟ್ಟಿರುತ್ತಾನೆ. ”

“ ದುಡಿಯುವವರು ಅವರು, ತಿನ್ನುವವನು ಅವನು. ”

“ ಅವನು ಸಾವಿರಾರು ರೂಪಾಯಿ, ಲಕ್ಷಾಂತರ ರೂಪಾಯಿ ಹಾಕದಿದ್ದರೆ ಅವರು ಎಲ್ಲಿರುತ್ತಿದ್ದರು. ”

“ ಆದಕ್ಕೆ ಬಂಡವಳಿಗರ ದಾಕ್ಷಿಣ್ಯವಿಲ್ಲದೆ ಈ ಸಮಸ್ಯೆಯನ್ನು ಬಗೆ ಹರಿಸುವ ವಿಧಾನವನ್ನು ಕಮ್ಯುನಿಸಂ ಬೋಧಿಸುತ್ತಿದೆ. ”

“ ಆ ವಿಧಾನ ಯಾವದು ? ”

“ ಸಮಸ್ತ ಖಾಸಗೀ ಸೊತ್ತು ವ್ಯಾಪಾರ, ವಾಣಿಜ್ಯ, ಕೈಗಾರಿಕೆ ರಾಷ್ಟ್ರದ ಸಂಪತ್ತಾಗಿರಬೇಕು. ”

“ ಅಂದರೆ ಬಂಡವಳಿಗನ ಸ್ಥಾನದಲ್ಲಿ ರಾಷ್ಟ್ರ ನಿಲ್ಲುತ್ತದೆ. ಈಗ ಒಬ್ಬ ಕಿತ್ತುಕೊಂಡು ತಿನ್ನುತ್ತಾನೆ - ಆಗ ಹಲವರು ಕಿತ್ತುಕೊಂಡು ತಿನ್ನುತ್ತಾರೆ. ರಾಮ ಬೇಡವೆಂದು ರಾವಣನ ಅಧಿಕಾರ ಒಪ್ಪಿಕೊಂಡಂತಾಗುತ್ತದೆ. ”

“ ಹಾಗಲ್ಲ. ಸಂಪತ್ತಿನ ರಾಷ್ಟ್ರೀಕರಣವಾದರೆ ಸುಲಿಗೆಯ ಪ್ರಶ್ನೆಯೇ ಏಳುವುದಿಲ್ಲ. ಬಂಡವಾಳ ನಮ್ಮದು – ದುಡಿಯುವವರು ನಾವು – ತಿನ್ನುವವರು ನಾವು. ”

“ ಯಾವ ರಾಷ್ಟ್ರದಲ್ಲಿ ಈ ವಿಧಾನ ಸಫಲವಾಗಿದೆ ಪ್ರಭಾದೇವಿ. ”

" ರಷ್ಯಾ ದೇಶದಲ್ಲಿ. "

" ಅಲ್ಲಿ ಎಲ್ಲರಿಗೂ ಸಮಾನ ಸಂಪತ್ತು, ಸಮಾನ ಹಕ್ಕು ಬಾಧ್ಯತೆ ಇದೆಯೋ ? "

" ಇದೆ. "

ಶ್ರೀಕಂಠ ಗಹಗಹಿಸಿ ನಗುತ್ತಾ

" ಟ್ರಾಟ್ಸ್ಕಿ ಮೊದಲಾದವರನ್ನು ನಿರ್ಮೂಲ ಮಾಡಿ ಸ್ಟಾಲಿನ್ ಅಧಿಕಾರಕ್ಕೆ ಬಂದನೆಂದು ನಾನೇ ಓದಿರುವೆನಲ್ಲಾ ಪ್ರಭಾದೇವಿ. ಕಮ್ಯುನಿಸ್ಟ್ ಪಾರ್ಟಿಯ ಒಳಗುಂಪಿನ ( Polit Bureau ) ಸದಸ್ಯರು ರಾಜಾಧಿರಾಜರಿಗಿಂತಲೂ ಹೆಚ್ಚಿನ ವೈಭವದಲ್ಲಿ ಮೆರೆಯುತ್ತಿದ್ದಾರೆಂದೂ ಸಾಮಾನ್ಯ ಜನರು ಚಳಿ ತಡೆಯಲಾರದೆ ಮಾಸ್ಕೋ ಬೀದಿಗಳಲ್ಲಿ ಸಾಯುತ್ತಿದ್ದಾರೆಂದೂ ನಾನೇ ಓದಿದ್ದೇನೆ. "

" ಅದೆಲ್ಲಾ ಅಮೇರಿಕಾದವರ ಅಪಪ್ರಚಾರ. "

" ಹೋಗಲಿ. ಅಮೇರಿಕಾದವರ ಅಭಿಪ್ರಾಯ ನಮಗೆ ಬೇಕಿಲ್ಲ. ರಷ್ಯಾ ನಾಲ್ಕು ದಿಕ್ಕಿಗೂ ಕಬ್ಬಿಣದ ತೆರೆಗಳನ್ನು (Iron Curtain) ಎಳೆದು ಕುಳಿತಿದೆಯಂತೆ - ಒಳಕ್ಕೆ ಯಾರನ್ನೂ ಸೇರಿಸುವದಿಲ್ಲವಂತೆ - ರಷ್ಯಾ ಪ್ರಭುತ್ವ ಪೋಲೀಸ ಪ್ರಭುತ್ವವಾಗಿದೆಯೆಂದು ನಮ್ಮವರೇ ಹೇಳುತ್ತಿರುವರಲ್ಲ. "

" ಅವರೆಲ್ಲಾ ಅಮೇರಿಕಾದ ಎಜಂಟರು. ರಷ್ಯಾ ಸಿಕ್ಕಿದರನ್ನು ಒಳಗೆ ಸೇರಿಸುವುದಿಲ್ಲ ನಿಜ. ಅವರು ಗೂಢಚಾರವೃತ್ತಿ ಕೈಕೊಂಡು ರಷ್ಯಾದ ಭದ್ರತೆಗೇ ಸೀರುತಿದ್ದುತ್ತಾರೆ. "

ಜನತೆಯ ಸಂಪೂರ್ಣ ಸಹಕಾರ ಪಡೆದು, ಜನತೆಯದೇ ಆಗಿರುವ ಸರ್ಕಾರ ಹತ್ತುಮಂದಿ ಗೂಢಚಾರಿಗೆ ಹೆದರಬೇಕೇ ? ಇದು ನಮ್ಮ ಮಠಾಧಿಪತಿಗಳ ' ಮಡಿ ' ಯನ್ನು ಜ್ಞಾಪಕಕ್ಕೆ ತರುತ್ತದೆ. "

" ಹಾಗೆಂದರೇನು ? "

" ಸ್ವಾಮಿಗಳ ದೇವರಮನೆ ' ಮಡಿ ' ಯ ಕೋಟೆ. ಅಲ್ಲಿ ಯಾರೂ ಪ್ರವೇಶಿಸುವಂತಿಲ್ಲ. ಸ್ವಾಮಿಗಳ ಅತ್ಯಾಚಾರ, ಅನಾಚಾರಕ್ಕೆ ಈ ಮಡಿ ಮನೆಯೇ ದಿವ್ಯಕ್ಷೇತ್ರ. "

" ನಿಮ್ಮ ಹೋಲಿಕೆ ಸಮಂಜಸವಾದುದಲ್ಲ ಶ್ರೀಕಾಂತ್. "

" ಹೋಗಲಿ - ನನ್ನ ಮನಸ್ಸಿಗೊಂದು ಬಲವಾದ ಸಂಶಯಬಂದಿದೆ. ಅದನ್ನು ವಿವರಿಸಲೇ ? "

" ಅವಶ್ಯಕವಾಗಿ ವಿವರಿಸಿ. "

" ನೀವೂ ರಾಜೂ ರಷ್ಯಾದ ಮೇಲ್ಪಂಕ್ತಿಯನ್ನೇ ಎತ್ತಿಹಿಡಿದು, ಅದರ ಆದರ್ಶಗಳನ್ನೇ ಮೆಚ್ಚುತ್ತಿರುವುದೇಕೆ ? "

" ರಷ್ಯಾ ಅನುಸರಿಸುತ್ತಿರುವ ಮಾರ್ಗವೊಂದರಿಂದಲೇ ಜಗತ್ತಿನಲ್ಲಿ ಶಾಂತಿ, ಸೌಖ್ಯ, ಸಮತೆ ಸ್ಥಾಪನೆಯಾಗಲು ಸಾಧ್ಯವೆಂದು ನಮಗೆ ಮನವರಿಕೆ ಯಾಗಿದೆ. "

" ಭಾರತದ ಸಂಸ್ಕೃತಿಯಿಂದ ಶಾಂತಿ, ಸೌಖ್ಯ, ಸಮತೆ ಸ್ಥಾಪನೆಯಾ ಗಲು ಸಾಧ್ಯವಿಲ್ಲವೇ ? "

" ಇಂದಿನ ಭಾರತ ರಷ್ಯಾಗಳನ್ನು ಹೋಲಿಸಿ ನೋಡಿ. ಸಾವಿರಾರು ವರ್ಷಗಳ ಸಂಸ್ಕೃತಿಯಿಂದ ನಾವು ಸಾಧಿಸಿರುವುದೇನು - ಅನೈಕ ಮತ್ಯ, ದಾರಿದ್ರ್ಯ , ಶೋಷಣೆ, ಅಸಮತೆ. ಮಹಾಕ್ರಾಂತಿಯ ಮುನ್ನ ರಷ್ಯಾ ಯಾವ ದೆಸೆಯಲ್ಲಿತ್ತೋ ನಾವಿಂದೂ ಅದೇ ದೆಸೆಯಲ್ಲಿದ್ದೇವೆ. "

" ನಮ್ಮ ಹೀನಸ್ಥಿತಿಗೆ ನಮ್ಮ ಸಂಸ್ಕೃತಿ ಕಾರಣವೇ ? "

" ನಿಸ್ಸಂದೇಹವಾಗಿ ! "

" ಗಾಂಧೀಜಿಯವರ ನಾಯಕತ್ವದಲ್ಲಿ ನಮ್ಮ ಸಂಸ್ಕೃತಿಯನ್ನು ನಾವು ಆಚರಣೆಗೆ ತಂದುದರಿಂದಲೇ ಅಲ್ಲವೇ ನಮಗೆ ಸ್ವಾತಂತ್ರ್ಯವನ್ನು ಅಹಿಂಸಾ ಮಾರ್ಗದಲ್ಲಿ ಸಾಧಿಸಿಕೊಂಡಂತೆ ಜಗತ್ತಿನಲ್ಲಿ ಯಾವ ರಾಷ್ಟ್ರವಾದರೂ ಸಾಧಿಸಿ ದೆಯೇ ? ರಷ್ಯಾದ ಕ್ರಾಂತಿಯಿಂದ ರಕ್ತದ ಹೊಳೆ ಹರಿಯಿತು. ಅಲ್ಲಿ ಒಂದು ವರ್ಗ ಅಧಿಕಾರಕ್ಕೆ ಬಂದಿತು - ಆ ವರ್ಗ ಪ್ರತಿರೋಧಿಗಳನ್ನು ನಿರ್ದಾಕ್ಷಿಣ್ಯದಿಂದ ಶೂಲಕ್ಕೇರಿಸಿದರು. ನಾಳೆ, ಇನ್ನೊಂದು ವರ್ಗ ಅಧಿಕಾರಕ್ಕೆ ಬರುತ್ತದೆ - ಅವರೂ ತಮ್ಮ ವಿರೋಧಿಗಳನ್ನು ಶೂಲಕ್ಕೇರಿಸುತ್ತಾರೆ. ರಕ್ತದಲ್ಲಿ ಕೈತೊಳೆ ಯದೆ, ಸಹಸ್ರಾರು ಜನರ ಆಹುತಿ ತೆಗೆದುಕೊಳ್ಳದೆ ರಷ್ಯಾದಲ್ಲಿ ಅಧಿಕಾರಕ್ಕೆ ಬರುವುದು ದುಸ್ಸಾಧ್ಯವಾಗಿದೆ. ಈ ಮೇಲ್ಪಂಕ್ತಿಯನ್ನು ನಾವು ಅನುಸರಿಸು ವುದು ಸೂಕ್ತವೇ ? "

" ಮಾರ್ಕ್ಸ್‌ವಾದ, ಲೆನಿನ್‌ವಾದಗಳ ಬಗ್ಗೆ ತಿಳಿಯಲು ನೀವು ಉತ್ಸುಕ

ರಾಗಿರುವಂತೆ ಕಾಣುವುದಿಲ್ಲ."

ಉತ್ಸುಕನಾಗಿದ್ದೇನೆ - ಹಾಗೇ ನನ್ನ ದೇಶದ ಬಗ್ಗೆಯೂ ತಿಳಿಯಲು ಉತ್ಸುಕನಾಗಿದ್ದೇನೆ. ನೀವು ನನಗೆ ರಷ್ಯಾ ಪರಿಚಯ ಮಾಡಿಕೊಡುವುದರ ಜತೆಗೆ ಭಾರತದ ಪರಿಚಯವನ್ನು ಮಾಡಿಕೊಡುತ್ತ ಬನ್ನಿ."

"ಭಾರತದ ಪ್ರಾಚೀನ ಧರ್ಮಗ್ರಂಥಗಳನ್ನೆಲ್ಲಾ ನಾನು ಓದಬೇಕಾಗುತ್ತದೆ."

"ನೀವು ಅವುಗಳನ್ನೆಲ್ಲಾ ಓದಿರುವಿರೆಂದು ಭಾವಿಸಿದ್ದೆ."

"ಇಲ್ಲ."

"ಭಾರತದ ಧರ್ಮ ಕಾವ್ಯಗ್ರಂಥಗಳನ್ನು ಓದದೆಯೇ ಭಾರತವನ್ನು ತಿರಸ್ಕಾರಮಾಡುವಿರಾ?"

ಪ್ರಭಾದೇವಿಯ ಸ್ವಾಭಿಮಾನಕ್ಕೆ ಶ್ರೀಕಂಠನ ಕಟುಟೀಕೆ ಬಲವಾದ ಪೆಟ್ಟುಕೊಟ್ಟಿತು. ಅವಳ ಮುಖ ವಿವರ್ಣದಾದುದನ್ನು ಕಂಡು

"ನಿಮ್ಮ ಮನಸ್ಸು ನೋಯಿಸಿದ್ದರೆ ಕ್ಷಮಿಸಿ." ಎಂದ.

"ಇಲ್ಲ ಶ್ರೀಕಾಂತ್. ನೀವು ಹೇಳಿದುದು ನಿಜ. ನಾವು ಭಾರತೀಯರಾದರೂ ನಮಗೆ ಭಾರತದ ಬಗ್ಗೆ ಏನೂ ಗೊತ್ತಿಲ್ಲ. ತುಲನಾತ್ಮಕ ದೃಷ್ಟಿಯಿಂದಲಾದರೂ ನಾವು ಭಾರತದ ಇತಿಹಾಸ, ಸಾಹಿತ್ಯ, ಧರ್ಮ, ಜನಜೀವನವನ್ನರಿಯುವುದೊಳ್ಳೆಯದು."

"ಎಲ್ಲಾ ಕಮ್ಯುನಿಷ್ಟರೂ ನಿಮ್ಮಷ್ಟೇ ಉದಾರಮತಿಗಳಾಗಿದ್ದರೆ ಕಮ್ಯುನಿಸಂ ಸುಲಭವಾಗಿ ಹರಡುತ್ತದೆ."

ಎಂದು ಸವಿಮಾತನ್ನಾಡಿ ಪ್ರಭಾದೇವಿಯ ಮನಸ್ಸಿನ ದುಗುಡವನ್ನು ನಿವಾರಿಸಲೆತ್ನಿಸಿದ.

## ೪

ಬಾಪೂ, ಮೂರ್ತಿಯನ್ನು ಕಡೆಯುವ ಸಂದರ್ಭದಲ್ಲಿ ಶ್ರೀಕಂಠ 'ಬಾಪೂ ಸಾಹಿತ್ಯ'ವನ್ನೆಲ್ಲಾ ಪರಾಮರ್ಶಿಸಬೇಕಾಯಿತು. ಭವನದ ಶುಕ್ಲಾಜಿ ಅವನಿಗೆ ಎಲ್ಲ ಗ್ರಂಥಗಳನ್ನು ಶೇಖರಿಸಿಕೊಟ್ಟಿದ್ದರು. ಶಿಲ್ಪ ರಚನೆಗೆ ಅಗತ್ಯವಾಗಿ

ಬೇಕಾಗಿದ್ದ ನೂರಾರು ಭಾವಚಿತ್ರಗಳನ್ನೂ ಒದಗಿಸಿದ್ದರು.

ಮೂರು ತಿಂಗಳ ಸತತ ಶ್ರಮದಿಂದ ಶ್ರೀಕಂಠ ಬಾಪೂ ಮೂರ್ತಿಯನ್ನು ಸಿದ್ಧಗೊಳಿಸಿದ. ಭಾರತದ ವಿಭೂತಿ ಪುರುಷನ ಮೂರ್ತಿಯನ್ನು ಕಡೆದೆನಲ್ಲಾ ಎನ್ನುವ ಸಾತ್ವಿಕ ತೃಪ್ತಿ ಶ್ರೀಕಂಠನ ಹೃದಯಕ್ಕೆ ಅಪೂರ್ವ ಆನಂದವನ್ನಿತ್ತಿತ್ತು.

ಮೂರ್ತಿ ಮುಗಿದಿದ್ದರೂ ಅದನ್ನು ಭವನಕ್ಕೆ ಒಯ್ದು ಕೊಡಲು ಶ್ರೀಕಂಠನಿಗೆ ಧೈರ್ಯವಾಗಲಿಲ್ಲ. ಪ್ರತಿನಿತ್ಯ ಅದರ ಮುಂದೆ ಕುಳಿತು ನೂರಾರು ಓರೆಕೋರೆಗಳನ್ನು ತಿದ್ದುವನು. ಬಗೆ ಬಗೆಯ ಕತ್ತಲೆ ಬೆಳಕನ್ನು ಮೂರ್ತಿಯ ಮುಖದ ಮೇಲೆ ಮೂಡಿಸಿ ಭಾವ ಪ್ರದರ್ಶನದಲ್ಲಿ ಆಗುತ್ತಿದ್ದ ಸೂಕ್ಷ್ಮ ಮಾರ್ಪಾಟನ್ನು ಗಮನಿಸುವನು. ಎಷ್ಟು ತಿದ್ದಿದರೂ ಸಾಲದು.

' ಮೋಹನದಾಸ ಕರಮಚಂದ ಗಾಂಧಿ – ವೈಷ್ಣವ ಶಿರೋಮಣಿಯಾದ ತಾಯಿಯ ಮಡಿಲಲ್ಲಿ ಬೆಳೆದ ಕಂದ.'

'ವಿಲಾಯತಿಯಲ್ಲಿಯೂ ಸನ್ಯಾಸಿ - ಅಪೇಯಪಾನ ಮಾಡುವುದಿಲ್ಲ - ಅಭಕ್ಷ್ಯಭೋಜನ ಮಾಡುವುದಿಲ್ಲ - ಪರಸ್ತ್ರೀ ಸಹವಾಸ ಮಾಡುವುದಿಲ್ಲ. ಎಂದು ತಾಯಿಗೆ ಕೊಟ್ಟಿದ್ದ ಪ್ರಮಾಣ ವಚನದ ಪರಿಪಾಲನೆ.

'ಬ್ಯಾರಿಸ್ಟರ್ ಗಾಂಧಿ – ದಕ್ಷಿಣ ಆಫ್ರಿಕಾದ ಬಿಳಿಯರ ಪದಾಘಾತಕ್ಕೆ ಸಿಕ್ಕಿ ತೊಳಲಿದ ಜೀವ. ಭಾರತೀಯರ ಭೀಕರ ಪರಿಸ್ಥಿತಿಯನ್ನು ಕಂಡುದರ ಪರಿಣಾಮ.

' ದಕ್ಷಿಣ ಆಫ್ರಿಕಾದಲ್ಲಿ ಬ್ಯಾರಿಸ್ಟರ್ ಗಾಂಧಿ ನಡೆಸಿದ ಹೋರಾಟ.

' ಮಾತೃಭೂಮಿಗೆ - ದಾಸ್ಯಭೂಮಿಗೆ ಪುನರಾಗಮನ.

' ಜಲಿಯನ್‌ವಾಲಾಬಾಗ್ ಹತ್ಯಾಕಾಂಡ.

' ಕಾಂಗ್ರೆಸ್ ಸಂಸ್ಥೆಯ ಪುನರುಜ್ಜೀವನ.

' ಭಾರತ ಸ್ವಾತಂತ್ರ್ಯ ಚಳುವಳಿ - ಕಾಯಿದೆ ಭಂಗ - ಸತ್ಯಾಗ್ರಹ.

' ಮಹಾತ್ಮಾ ಗಾಂಧಿಯ ಅವತಾರ

' ಉಪ್ಪಿನ ಸತ್ಯಾಗ್ರಹ - ದಂಡೀಯಾತ್ರೆ - ವೀರ ನಿರ್ಧಾರ.

' ವಿಲಾಯತಿಯಲ್ಲಿ ದುಂಡು ಮೇಜಿನ ಪರಿಷತ್ತುಗಳು.

' ಕಾರಾಗೃಹವಾಸ —

' ಸುಖೇ ದುಃಖೇ ಸಮೇಕೃತ್ವಾ
ಲಾಭಾ ಲಾಭೌ ಜಯಾ ಜಯೌ ||

' ಗೀತಾಭಕ್ತ ಗಾಂಧಿ – ರಾಮಕಿಂಕರ ಗಾಂಧಿ

' ರಘುಪತಿ ರಾಘವ ರಾಜಾರಾಮ್
ಪತಿತಪಾವನ ಸೀತಾರಾಮ್
ಈಶ್ವರ ಅಲ್ಲಾ ತೇರಾ ನಾಮ್
ಸಬಕೋ ಸನ್ಮತಿ ದೇ ಭಗವಾನ್ ||

' ೧೯೪೭ ರ ಪ್ರಚಂಡ ಕ್ರಾಂತಿ

೧೯೪೭ —
ಕತ್ತಲೆ ಹರಿಯಿತು
ಬೆಳಗು ಮೂಡಿತು
ಶತಮಾನಗಳ ದಾಸ್ಯವಳಿಯಿತು
ಭಾರತ - ಭವ್ಯ ಭಾರತ - ಸ್ವತಂತ್ರವಾಯಿತು.

ಮತಾಂಧನ ಗುಂಡಿನೇಟು –
' ರಾಷ್ಟ್ರಪಿತನ ಉದ್ಗಾರ ' ಹಾ ರಾಮ್ ! "

ಬಾಪೂಜೀವನದ ಮಹತ್ತ್ವದ ಸನ್ನಿವೇಶಗಳು, ಘಟನೆಗಳು ಶ್ರೀಕಂಠನ ಚಿತ್ತಫಲಕದ ಮೇಲೆ ತೆರೆತೆರೆಯಾಗಿ ಮೂಡಿದವು.

ನನ್ನಿಯೇ —
ನಲ್ಮೆಯೇ —
ನಿರ್ಧಾರವೇ —
ಆತ್ಮಾರ್ಪಣವೇ —

ಯಾವದು ಬಾಪು ಜೀವನದ ಹೆಗ್ಗುರುತು ? ಸತ್ಯದಲ್ಲಿ ಅಚಲವಾದ ನಂಬಿಕೆ - ಭಕ್ತಿ; ಅದನ್ನು ಕಾರ್ಯೋನ್ಮುಖ ಮಾಡುವ ನಿರ್ಧಾರ - ಕೃತು ಶಕ್ತಿ; ಸತ್ಯಕ್ಕೆ ಕರುಣಾಮೃತದ ಅಭಿಷೇಕ; ಎಲ್ಲವೂ ಯಾರಿಗಾಗಿ - ಮಾನವತ್ವಕ್ಕಾಗಿ - ಈಶ್ವರನಿಗಾಗಿ - ' ಸರ್ವಂ ಶ್ರೀಕೃಷ್ಣಾರ್ಪಣಮಸ್ತು. '

ತನ್ನ ಕಲಾಕೃತಿಯನ್ನು ದಿಟ್ಟಿಸಿ ನೋಡುತ್ತ ಶ್ರೀಕಂಠ ತನ್ನನ್ನೇ ಕೇಳಿಕೊಳ್ಳುವನು

' ಬಾಪೂ ಜೀವನ ಬೆಳಗಿದ ನಾಲ್ಕು ನಂದಾದೀಪಗಳೂ ನನ್ನ ಶಿಲ್ಪದಲ್ಲಿ ಮೂರ್ತೀಭವಿಸಿವೆಯೇ ? '

ತನ್ನ ಮೂರ್ತಿಯನ್ನು ನೋಡುತ್ತಿದ್ದಂತೆ ಶ್ರೀಕಂಠನ ಕಣ್ಣಲ್ಲಿ ಧಾರೆ ಇಳಿಯುತ್ತಿತ್ತು.

ಲೋಕದ ಮಾಲಿನ್ಯ ತೊಳೆಯುವುದಕ್ಕೆ ತಾಯಿ ಜಾಹ್ನವಿ ಆಗಸದಿಂದಿಳಿದು ಬಂದಳು ಇಂದವಳು ಶಿಲ್ಪಿಯ ಕಣ್ಣುಗಳಿಂದ ಇಳಿಯುತ್ತಿದ್ದಾಳೆ.

' ಬಾಪೂ ಜೀವನದ ಮಹೋನ್ನತಿಯ ಒಂದು ಅಂಶವನ್ನಾದರೂ ನನ್ನ ಶಿಲ್ಪ ಪ್ರತಿಬಿಂಬಿಸುತ್ತಿದೆಯೇ ?'

ಶಿಲ್ಪ ನೋಡಿದ ಚಂದ್ರಶೇಖರ ಶುಕ್ಲರು ವಿಸ್ಮಯಗೊಂಡು ' ಇದು ದಿವ್ಯ ಕೃತಿ ' ಎಂದರು.

ಬಾಪೂ ಬಗ್ಗೆ ಹೆಚ್ಚು ಪ್ರೇಮ, ಗೌರವ ತಳೆಯದಿದ್ದ ರಾಜು ಕೂಡ ಶಿಲ್ಪದ ತಂತ್ರ ಕೌಶಲ್ಯಕ್ಕೆ ಬೆರಗಾಗಿದ್ದ.

ಬಾಪೂ ಶಿಲ್ಪ ಪ್ರಭಾದೇವಿಯ ಕಮ್ಯೂನಿಸಂಪ್ರೇರಿತ 'ನಿರೀಶ್ವರ ಭಾವನೆ' ಯನ್ನು ಹಿಡಿದಲುಗಿಸಿತ್ತು.

' ಇದನ್ನು ಮನುಷ್ಯ ಮಾಡಲು ಸಾಧ್ಯವೇ ? '

ಎಂದವಳು ಪ್ರಶ್ನೆ ಮಾಡಿಕೊಂಡಿದ್ದಳು.

ಶಿಲ್ಪಿಯ ಹೃದಯದಲ್ಲಿ ಮಾತ್ರ ಕಳವಳ. ಹಿತವರ ಪ್ರಿಯ ವಚನಗಳಿಂದ ಸಂತೋಷವಾಗಿತ್ತು. ಆದರ ಜತೆಯಲ್ಲಿಯೇ ಮೂಕವೇದನೆ - ಒಂದು ಬಗೆಯ ಸುಪ್ತ ನೋವು - ಪೆಟ್ಟು ತಿಂದ ಉಗುರು ಮಿಡಿಯುವಂತೆ ಹೃದಯದಲ್ಲಿ ಅಸ್ಪಷ್ಟ ಚೀತ್ಕಾರ.

' ನೀನು ದೊಡ್ಡ ಶಿಲ್ಪಿಯಾಗುವೆ. '

ಸ್ವರ್ಣ ತಳೆದಿದ್ದ ನಂಬಿಕೆ ವಿಫಲವಾಗಿರಲಿಲ್ಲ. ಶ್ರೀಕಂಠ ನಿರ್ಮಿಸಿದ್ದ ಬಾಪೂ ಮೂರ್ತಿ, ಅವನಿಗೆ ಶಿಲ್ಪಸಾಮ್ರಾಜ್ಯದಲ್ಲಿ ಭದ್ರಸ್ಥಾನ ದೊರಕಿಸಿಕೊಡಲು ಸಿದ್ಧವಾಗಿತ್ತು.

' ಶ್ರೀಕಂಠ ದೊಡ್ಡ ಶಿಲ್ಪಿಯಾಗಿದ್ದ. '

ಆದರೆ ಶಿಲ್ಪಿಯ ಅಡಿಪಾಯ ಬಿರುಕು ಬಿಟ್ಟಂತಾಗಿತ್ತು.

' ಸ್ವರ್ಣ - ಅವಳು ಇಂದು ಜೀವಂತಳಾಗಿದ್ದರೆ! ನನ್ನ ಬಾಪೂಮೂರ್ತಿ

ಯನ್ನು ನೋಡಿದ್ದರೆ..........' ಎಂದುಕೊಂಡ.

ಸ್ವರ್ಣ ಕಣ್ಮರೆಯಾಗಿದ್ದಾಳೆ. ಒಮ್ಮೆ ಹೋದವಳು ಮರಳಿ ಬಾರದ ಲೋಕ ಸೇರಿದ್ದಾಳೆ – ಇದು ಸತ್ಯ – ಕಠೋರ ಸತ್ಯ !!

ಆದರೆ........ಅವಳೆಡೆಯಲ್ಲಿ ಪ್ರಭಾ ಬಂದಿರುವಳೇ ?

ಸ್ವರ್ಣನೇ ಪ್ರಭಾದೇವಿಯನ್ನು ಕಳಿಸಿದ್ದಾಳೆಯೇ ?

೫

ಶ್ರೀಕಂಠ ನಾಲ್ಕು ದಿವಸ ವಿಶ್ರಾಂತಿ ಪಡೆಯಲೂ ರಾಜು ಅವಕಾಶ ಕೊಡಲಿಲ್ಲ. ಮೇ ಡೇ (May Day) ಸಮೀಪಿಸುತ್ತಿತ್ತು. ಮೇ ಡೇ ವೇಳೆಗೆ ಲೆನಿನ್, ಸ್ಟಾಲಿನ್ನರ ಮೂರ್ತಿಗಳನ್ನು ಮಾಡಿಸಿ ತಂದುಕೊಡುವುದಾಗಿ ರಾಜೂ ಮಾತುಕೊಟ್ಟಿದ್ದ. ರಾಜೂ ಮಾತು ಉಳಿಸದಿದ್ದರೆ ಅವನು ಕಾಮ್ರೇಡುಗಳ ಕಣ್ಣಲ್ಲಿ ಬಹು ಸಣ್ಣವನಾಗುವ ಸಂಭವವಿತ್ತು.

ನಡುನೀರಿನಲ್ಲಿ ಗೆಳೆಯನ ಕೈಬಿಡಲು ಶ್ರೀಕಂಠ ಹಿಂಜರಿದು ಲೆನಿನ್, ಸ್ಟಾಲಿನ್ನರ ಮೂರ್ತಿಗಳನ್ನು ಕಡೆಯಲು ಕುಳಿತ.

ಪ್ರಭಾದೇವಿ ರಷ್ಯಾದ ಇತಿಹಾಸ, ಜಾರಶಾಹಿ, ರಸಪುಟಿನ್ನನ ಅತ್ಯಾಚಾರ, ಲೆನಿನ್ನನ ಆಗಮನ, ರಷ್ಯಾದ ಮಹಾಕ್ರಾಂತಿ, ಸ್ಟಾಲಿನ್ನನ ಏಳಿಗೆಗಳ ಬಗ್ಗೆ ವಿಸ್ತೃತ ಪರಿಚಯ ಮಾಡಿಕೊಟ್ಟಿದ್ದರೂ ಅವು ಶ್ರೀಕಂಠನ ರಕ್ತಗತವಾಗಿರಲಿಲ್ಲ. ಯಾವ ಸ್ಫೂರ್ತಿ, ಉತ್ಸಾಹ, ಆನಂದ ಅವನ ಕೈಯಲ್ಲ ಬಾಪು ಮೂರ್ತಿಯನ್ನು ಕಡೆಯಿಸಿದವೋ ಅವು ದೂರನಿಂತು ಶಿಲ್ಪಿಯ ಸ್ವಪ್ರಯತ್ನವನ್ನೀಕ್ಷಿಸುತ್ತಿದ್ದವು.

ಕರ್ತವ್ಯನಿರ್ವಹಣ ದೃಷ್ಟಿಯಿಂದ ಶ್ರೀಕಂಠ ಮೂರ್ತಿಗಳನ್ನು ಕಡೆಯುತ್ತಲಿದ್ದ. ಲೆನಿನ್ ಸ್ಟಾಲಿನ್ನರ ಮುಖಚರ್ಯೆಗಳೂ ಸ್ಪಷ್ಟವಾಗಿ, ತದ್ರೂಪವಾಗಿ ಮೂಡಿದ್ದವು. ಲೆನಿನ್ ಪ್ರಯಾಸದಿಂದ– ಸ್ವಪ್ರಯತ್ನದಿಂದ ನೂತನ ರಷ್ಯಾ ಸಾಮ್ರಾಜ್ಯವನ್ನು ಕಟ್ಟಿದ್ದ - ಶ್ರೀಕಂಠನೂ ಪ್ರಯತ್ನ, ಪ್ರಯಾಸಗಳಿಂದಲೇ ಲೆನಿನ್ನನ ಸ್ವರೂಪ ಸಾಮ್ರಾಜ್ಯವನ್ನು ನಿರ್ಮಿಸುತ್ತಿದ್ದ.

ಮನಸ್ಸಿಲ್ಲದೆ ಯಾವದೋ ' ಕಾಟಾಚಾರ ' ದ ಕೆಲಸ ಮಾಡುತ್ತಿದ್ದ

ಬೇಸರ ತಲೆದೋರಿ ಆಗಾಗ್ಗೆ ಶ್ರೀಕಂಠನನ್ನು ಸ್ತಬ್ಧಮಾಡುತ್ತಿತ್ತು. ಈ ಬಗೆಯ ಅನುಭಾವ ಕಲಾವಿದರಿಗೆ ಸಹಜವಾದುದೆಂದು ಭಾವಿಸಿದ್ದ ಪ್ರಭಾದೇವಿ ಶ್ರೀಕಂಠನನ್ನು ದಾದರ್ ಬೀಚಿಗೆ ಸರೆದೊಯ್ಯುತ್ತಿದ್ದಳು.

ಬೀಚಿನ ಒಂದತ್ತ ಭೋರ್ಗರೆಯುತ್ತಿದ್ದ ಜಲಪ್ರವಾಹ - ಇನ್ನೊಂದತ್ತ ಕ್ಷಣಿಕ ತೃಪ್ತಿಯನ್ನು ಬಯಸುತ್ತಿದ್ದ ಮಾನವ ಪ್ರವಾಹ. ಒಂದರ ಚಲನೆ ಮೃತ್ಯುವಿನಿಂದ ಅಮೃತತ್ವಕ್ಕೆ; ಇನ್ನೊಂದರ ಚಲನೆ ಅಮೃತತ್ವದಿಂದ ಮೃತ್ಯುವಿಗೆ. ಸಾಗರದ ಭೋರ್ಗರೆಯುನ್ನು ಗೌಣವೆನಿಸುತ್ತಿದ್ದ ಮಾನವ ಹೃದಯದ ಆಕ್ರಂದನ.

ಕಣ್ಣಿಗೆ ಕಾಣಿಸುತ್ತಿದ್ದುದು, ಕಿವಿಗೆ ಕೇಳಿಸುತ್ತಿದ್ದುದು ಭಯಂಕರವೆನಿಸಿತ್ತು.

ಕಣ್ಣಿಗೆ ಕಾಣಿಸದೆ ಕಿವಿಗೆ ಕೇಳಿಸದೆ ಇದ್ದುದು ಸುಕುಮಾರವಾಗಿದ್ದಿತೇ?

ಮರಳು ಹಾಸಿನ ಮೇಲೆ ನಡೆಯುತ್ತಿದ್ದ ಜೀವನ - ನಾಟಕವನ್ನೇ ನೋಡುತ್ತ ಶ್ರೀಕಂಠ ಮೌನವಾಗಿ ಕುಳಿತ. ಶಿಲ್ಪಿಯ 'ಅಂತರ್ಮುಖತೆ' ಗೆ ಸ್ವಲ್ಪ ವಿರಾಮ ದೊರೆಯಲೆಂದೇ ಪ್ರಭಾ ಅವನನ್ನಲ್ಲಿಗೆ ಕರೆತಂದಿದ್ದಳು. ಇಲ್ಲಿಯೂ ಅದೇ ಚಿತ್ತವೃತ್ತಿ ಪ್ರಕಟವಾದುದನ್ನು ಕಂಡು ತುಸು ಬೇಸರದಿಂದ

"ಏನು ಯೋಚಿಸುತ್ತಿರುವಿರಿ ಶ್ರೀಕಾಂತ್" ಎಂದಳು.

"ಹೀಗೇ – ಏನೂ ಇಲ್ಲ – ಅಲ್ಲಿ ನೋಡಿ, ಏಕಾಂಗಿಯಾಗಿ ಬಂದ ಆಲೆಯನ್ನು ಸೇರಲು, ಮತ್ತೊಂದು ಆಲೆ ಅಟ್ಟಿಸಿಕೊಂಡು ಬರುತ್ತಿದೆ. ಇತ್ತ ನೋಡಿ, ಒಂದೇ ಆಡಿಕೊಳ್ಳುತ್ತ ಕುಳಿತಿದ್ದ ಮಗುವಿನ ಜತೆ ಆಡಲು ಮತ್ತೊಂದು ಮಗು ಬರುತ್ತಿದೆ. ಸಖ್ಯ ಜೀವನವೇ ನಿಸರ್ಗದ ಉಸಿರಲ್ಲವೇ? ತಂಗಾಳಿಯಿದ್ದಲ್ಲಿ ಚಂದ್ರ, ಮಳೆಯಿದ್ದಲ್ಲಿ ಮಿಂಚು, ಪ್ರಿಯನಿದ್ದಲ್ಲಿ ಪ್ರೇಯಸಿ, ಪುಷ್ಪವಿದ್ದಲ್ಲಿ ಸುಗಂಧವಿದ್ದೇ ತೀರಬೇಕು."

"ಹೌದು."

"ಮಾನವನೂ ಹಾಗೇ ಸಖ್ಯಜೀವಿ. ಅವನನ್ನು ಶಾಂತಿಯ ಅಂತಿಮ ಗುರಿಗೆ ಕರೆದೊಯ್ಯಲು ಸಖ್ಯವೇ ವಾಹಕ.... ಪುಷ್ಪಕ ವಿಮಾನ."

"ಹೌದು."

"ಇದೆಲ್ಲವೂ ನಿಮಗೆ 'ಬೂಜ್ವಾ' ಭಾವನೆಗಳೆಂದೆನಿಸುವುದಲ್ಲವೇ?"

ಉತ್ತರ ಹೇಳುವುದು ಪ್ರಭಾದೇವಿಗೆ ಕಷ್ಟಕ್ಕಿಟ್ಟುಕೊಂಡಿತು.

"ನನ್ನ ಭಾವನೆಗಳೂ ಹಾಗೇ ಇವೆ ಶ್ರೀಕಾಂತ್"

"ಹೇಗೆ ಸಾಧ್ಯ ಪ್ರಭಾದೇವಿ. ಕ್ರಾಂತಿಗೂ ಶಾಂತಿಗೂ ಸಖ್ಯ ಸಾಧ್ಯವೇ? ಒಂದು ಪ್ರಳಯ ಹೇತು - ಇನ್ನೊಂದು ಪರಿವರ್ತನೆಯ ಸಂಕೇತ."

"ನಾನು ಕಮ್ಯುನಿಸ್ಟ್ ಪಕ್ಷ ಸೇರಿದರೂ ನನ್ನ ಮಾನವ್ಯ ಉಳಿಸಿಕೊಂಡಿದ್ದೇನೆ."

"ನಿಮ್ಮ ಪಾರ್ಟಿಯಲ್ಲಿ ಅದು ಹೇಗೆ ಸಾಧ್ಯ ಪ್ರಭಾದೇವಿ. ಪಾರ್ಟಿಯ ಮಹಾ ಯಂತ್ರದ ಒಂದು ಮೊಳೆ, ಒಂದು ಚಕ್ರ, ಒಂದು ದೂಲ ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಲು ಸಾಧ್ಯವೇ? ನ್ಯಾಯ, ಮತ, ಧರ್ಮದ ಅಸ್ತಿಭಾರದ ಮೇಲೆ ಮಾನವ್ಯ ನಿಂತಿದೆ. ಕಮ್ಯುನಿಸ್ಟ್ ಮ್ಯಾನಿಫೆಸ್ಟೋ ಸ್ಪಷ್ಟವಾಗಿ ಅವುಗಳು ಬೂಜ್ವಾಗಳ ಸ್ವಾರ್ಥ ಸಾಧನಗಳೆಂದು ನಿರಾಕರಿಸಿದೆಯಲ್ಲಾ?" *

"ಮ್ಯಾನಿಫೆಸ್ಟೋ ವ್ಯಕ್ತ ಮಾಡಿರುವ ಅಭಿಪ್ರಾಯಗಳನ್ನು ಕುರಿತು ನೀವು ಸ್ವಲ್ಪ ಆಳವಾಗಿ ಯೋಚಿಸಿದರೆ ಮಾರ್ಕ್ಸ್ ಸತ್ಯವನ್ನೇ ಹೇಳಿರುವನೆಂದು ಒಪ್ಪಿಕೊಳ್ಳುವಿರಿ. ನ್ಯಾಯ - ಮತ - ಧರ್ಮ ಇವು ಯಾರ ಪಾಲಿಗಿವೆ? ಬಡವನಿಗೆ ನ್ಯಾಯ ಸಿಕ್ಕುತ್ತದೆಯೇ? – ಮತ ಅವನನ್ನು ಮನುಷ್ಯನೆಂದು ಪರಿಗಣಿಸುತ್ತದೆಯೇ? – ಧರ್ಮ ಅವನನ್ನು ಪಶುವೃತ್ತಿಗೆ ತಳ್ಳಿಲ್ಲವೇ?"

"ಮನುಷ್ಯ ಮಾಡುವ ಅಪರಾಧಗಳಿಗೆ ನ್ಯಾಯ, ಮತ, ಧರ್ಮಗಳಿಗೆ ಶಿಕ್ಷೆ ಮಾಡಬೇಕೇನು? ನಾನು ಕಳ್ಳತನ ಮಾಡಿದರೆ ಕೋರ್ಟಿನಲ್ಲಿರುವ ಮ್ಯಾಜಿಸ್ಟ್ರೇಟರಿಗೆ ದಂಡ ವಿಧಿಸುವುದು ಸರಿಯೇ?"

* The Proletarian is without any property; his relation to his wife and children has no longer anything in common with the beaurgeous family relations; modern industrial labour, modern subjection to capital, the same in England and France, in America and in Germany, has stripped him of every trace of national character. Law, morality, religion are to him so many beaurgeois prejudices, behind which lurk in ambush just as many beaurgeous interests."

—Communist Manifesto (page 38) Indian Edition

" ಹಾಗಲ್ಲ – ಮಾರ್ಕ್ಸ್‌ನ ವಾದಸರಣಿಯನ್ನು ನೀವು ಚೆನ್ನಾಗಿ ಅನುಸರಿಸಿಲ್ಲ. ಜಗತ್ತಿನ ಆದಿಯಲ್ಲಿ ಶ್ರೀಮಂತ ಬಡವ, ಬಂಡವಳಿಗ ಶ್ರಮಜೀವಿ ಎನ್ನುವ ವರ್ಗಗಳಿರಲಿಲ್ಲ. ನಾಗರಿಕತೆ ಬೆಳೆಯುತ್ತ ಬುದ್ಧಿಜೀವಿಗಳು ಶ್ರಮಜೀವಿಗಳನ್ನು ತುಳಿಯುತ್ತ ಬಂದು, ಅವರ ಪ್ರೇತಗಳ ಮೇಲೆ ಅರಮನೆಗಳನ್ನು ಕಟ್ಟಿಕೊಂಡರು. ಉಳ್ಳವರು, ಉಳ್ಳದಿರುವವರು, ಬಲಿಷ್ಠರು, ದುರ್ಬಲರು, ಆಳುವವರು, ಆಳಿಸಿಕೊಳ್ಳುವವರು ಎನ್ನುವ ವರ್ಗಗಳು ಏರ್ಪಟ್ಟವು. ಇದರ ಮೂಲ ಖಾಸಗಿ ಆಸ್ತಿ ( Private Property ) ಎಂದು ಮಾರ್ಕ್ಸ್ ಅಭಿಪ್ರಾಯ ಪಡುತ್ತಾನೆ. ಯಾವಾಗ ವ್ಯಕ್ತಿ ಇತರರನ್ನು ಸುಲಿದು ಲಕ್ಷಾಂತರ ಸಹಸ್ರ ರೂಪಾಯಿ ಸಂಪಾದಿಸುತ್ತಾನೋ ಅವನು ಅದನ್ನು ರಕ್ಷಿಸಿಕೊಳ್ಳಬೇಕು. ಅವನ ರಕ್ಷಣೆಗೆ ಪೋಲೀಸ್ ಪಡೆ ಹುಟ್ಟಿಕೊಳ್ಳುತ್ತದೆ. ಅವನ ಆಸ್ತಿಯ ಮೇಲೆ ಕೈಮಾಡಿದವರನ್ನು ಶಿಕ್ಷಿಸಲು ನ್ಯಾಯಾಸ್ಥಾನಗಳು ಹುಟ್ಟಿಕೊಳ್ಳುತ್ತವೆ. ಬಂಡವಳಿಗನ ಮಾರ್ಗವೇ ಸರಿ ಎಂದು ಹೇಳಲು ಮಠಗಳು, ಮತಗಳು ಹುಟ್ಟಿಕೊಳ್ಳುತ್ತವೆ. ಇವೆಲ್ಲಾ ಬುಜ್ವಾಗಳ ಶನಿಸಂತಾನಗಳಲ್ಲವೇ ? "

" ಯಾರೂ ಖಾಸಗಿ ಆಸ್ತಿಗೆ ಹಕ್ಕುದಾರರಾಗಿರಬಾರದೆಂದಲ್ಲವೇ ನಿಮ್ಮ ವಾದ ? "

" ಹೌದು. "

" ನಿಮ್ಮ ಪಾರ್ಟಿ ಆಫೀಸಿನಲ್ಲಿ ಟೈಪ್‌ರೈಟರ್, ಸೈಕ್ಲೊಸ್ಟೈಲ್ ಯಂತ್ರ, ವೈರ್ ರಿಕಾರ್ಡಿಂಗ್ ಯಂತ್ರಗಳಿವೆ. ಅವುಗಳನ್ನು ನಾನು ಹೊತ್ತುಕೊಂಡು ಹೋದರೆ ನಿಮ್ಮ ಪಾರ್ಟಿಯವರು ಸುಮ್ಮನಿರುವರೋ, ಪೋಲೀಸಿಗೆ ದೂರು ಕೊಡುವರೋ ? "

" ವ್ಯಕ್ತಿ ಅಥವಾ ಸಂಸ್ಥೆಯ ಅಗತ್ಯವನ್ನು ಪೂರೈಸುವ ವಸ್ತುವನ್ನು ನಾವು ಖಾಸಗಿ ಆಸ್ತಿ (Private property) ಎಂದು ಭಾವಿಸುವುದಿಲ್ಲ. ಒಂದು ರೀತಿಯಲ್ಲಿ ಅವು ಸಾರ್ವಜನಿಕ ಸ್ವತ್ತುಗಳೇ. "

" ಅಂದರೆ ಕಮ್ಯುನಿಸ್ಟರ ಖಾಸಗಿ ಸ್ವತ್ತುಗಳು ರಕ್ಷಣಾರ್ಹವಾದವು; ಇತರರ ಖಾಸಗಿ ಸ್ವತ್ತುಗಳು ಬುಜ್ವಾಗಳ ಸುಲಿಗೆಯ ಫಲಗಳೆಂದಲ್ಲವೇ ನಿಮ್ಮ ಅಭಿಪ್ರಾಯ. "

" ನೀವು ತಪ್ಪು ವಾದ ಮಾಡುತ್ತಿರುವಿರಿ ಶ್ರೀಕಾಂತ್. "

"ಅದು ಹೋಗಲಿ. ಮತ ಜನತೆಯ ಅಫೀಮು ( Religion is the opium of the people ) ಎಂದು ಲೆನಿನ್ ಹೇಳಿದ್ದಾನೆ. ಮತವೆಂದರೇನು?"

"ಮೂರ್ತಿಪೂಜೆ."

"ಮೂರ್ತಿಪೂಜೆ ಅಜ್ಞಾನ ಬೆಳಸುವುದಕ್ಕೆ ಕಾರಣವಾಗುತ್ತದೆಂದಲ್ಲವೇ ಲೆನಿನ್ ಅಭಿಪ್ರಾಯ."

"ಹೌದು."

"ನೀವು – ಅಂದರೆ ಕಮ್ಯುನಿಸ್ಟರು ಮೂರ್ತಿಭಂಜಕರು."

"ಹೌದು."

"ನೀವು ಕೆಂಪು ಬಾವುಟ, ಲೆನಿನ್, ಸ್ಟಾಲಿನ್, ಮಾರ್ಕ್ಸ್ ಇವರ ಪೂಜೆ ಮಾಡುವುದೇಕೆ ?"

"ನಾವು ವ್ಯಕ್ತಿ ಪೂಜೆ ಮಾಡುವುದಿಲ್ಲ. ಕೆಂಪು ಬಾವುಟ, ಲೆನಿನ್, ಸ್ಟಾಲಿನ್, ಮಾರ್ಕ್ಸ್ ಜನತೆಯ ಕ್ರಾಂತಿಯ ಸಂಕೇತಗಳೆಂದು ಪೂಜಿಸುತ್ತೇವೆ."

"ನಾವು ಗಣಪತಿಯ ಮುಖದಲ್ಲಿ ಕಂಡುಬರುವ ಆನೆಯ ರೂಪವನ್ನೂ, ನರಸಿಂಹನ ಮುಖದಲ್ಲಿ ಕಂಡುಬರುವ ಸಿಂಹದ ರೂಪವನ್ನೂ, ಕೃಷ್ಣನ ಮುಖದಲ್ಲಿ ಕಂಡುಬರುವ ಶಿಶುರೂಪವನ್ನೂ ಪೂಜಿಸುತ್ತೇವೆಂದು ಭಾವಿಸಿರುವಿರಾ ?– ಗಣಪತಿ ಬುದ್ಧಿಶಕ್ತಿಯ ಸಂಕೇತವಾಗಿದ್ದಾನೆ, ನರಸಿಂಹ ಅಜೇಯ್ಯ ರಾಕ್ಷಸ ಶಕ್ತಿಯ ವಿರುದ್ಧ ಸೆಣಸಿ ವಿಜಯ ಗಳಿಸಬಲ್ಲ ಮಾನವ ಶಕ್ತಿಯ ಸಂಕೇತವಾಗಿದ್ದಾನೆ, ಕೃಷ್ಣ ಮಾನವನಲ್ಲಿ ಅನಂತವಾಗಿರುವ ಶಿಶುವಿನ ಋಜುತ್ವದ ಸಂಕೇತವಾಗಿದ್ದಾನೆ. ನಮ್ಮ ಮತ, ಧರ್ಮಗಳು ಕೂಡ ಒಂದು ಉನ್ನತ ತತ್ತ್ವದ ಸಂಕೇತವಾಗಿಯೇ ಇದೆ. ಜನಸಾಮಾನ್ಯರಿಗೆ ತತ್ತ್ವ ಚೆನ್ನಾಗಿ ಮನದಟ್ಟವಾಗಲೆಂದು ಅವುಗಳಿಗೆ ನಾಮ, ರೂಪಗಳನ್ನು ನಿರ್ದೇಶಿಸಲಾಗಿದೆ."

ವಾದ ಮುಂದರಿಸಲು ಪ್ರಭಾದೇವಿ ಉತ್ಸಾಹ ತೋರಿಸಲಿಲ್ಲ. ಸದಾ ಶಿಲ್ಪಧ್ಯಾನಾಸಕ್ತನಾಗಿದ್ದ ಶ್ರೀಕಂಠ ಕೆಲ ನಿಮಿಷಗಳಾದರೂ ವಿಶ್ರಾಂತಿ ಪಡೆಯಲಿ ಎಂದವಳು ಬಯಸಿದ್ದಳು. ಆದರೆ ಅವಳ ಇಚ್ಛೆಗೆ ವಿರುದ್ಧವಾಗಿ ವಾದ ವೆದ್ದಿತ್ತು. ಮಾತು ಬದಲಾಯಿಸಲು ಪ್ರಭಾದೇವಿ

"ಕೈಯಲ್ಲಿರುವ ಮೂರ್ತಿಗಳನ್ನು ಮುಗಿಸಿದ ಮೇಲೆ ಮುಂದೆ ಏನು

ಮಾಡಬೇಕೆಂದಿರುವಿರಿ ? ”

“ ಇನ್ನೂ ನಿರ್ಧರಿಸಿಲ್ಲ. ಸರಸ್ವತಿಯ ಮೂರ್ತಿ ಕಡೆಯುವ ಇಚ್ಛೆ ಇದೆ. ದೊಡ್ಡ ಪ್ರಮಾಣದಲ್ಲಿ ಯಾವದಾದರೂ ಮೂರ್ತಿ ಮಾಡಲು ಮನಸ್ಸು ತವಕ ಪಡುತ್ತಿದೆ. ”

“ ಈಚೆಗೆ ಚಿತ್ರಕಲಾಭ್ಯಾಸ ನಿಲ್ಲಿಸಿ ಬಿಟ್ಟಿರುವಿರಿ ? ”

“ ಪುರಸತ್ತೆಲ್ಲಿಂದ ತರಲಿ. ನನ್ನ ಗುರು ರಾಜು ಕೈಗೆ ಸಿಕ್ಕುವುದೇ ಕಷ್ಟ ವಾಗಿದೆ. ಒಂದೆ ಊರಿನಲ್ಲಿದ್ದರೂ ಒಬ್ಬರನ್ನೊಬ್ಬರು ವಾರಕ್ಕೊಮ್ಮೆ ಕೂಡ ಕಾಣಲಾಗುವುದಿಲ್ಲ. ”

ರಾತ್ರಿ ಬೆಳೆಯುತ್ತಿತ್ತು. ಸಮುದ್ರ ತೀರಕ್ಕೆ ವಿಹಾರಾರ್ಥವಾಗಿ ಬಂದಿದ್ದ ವರು ತೆರಳುತ್ತಿದ್ದರು. ಶ್ರೀಕಂಠ ಎದ್ದು ನಿಂತು

“ ನಿನಗೂ ಹೊತ್ತಾಗುತ್ತದೆ. ಇನ್ನು ಹೊರಡೋಣ. ”

ಎಂದು ಹೇಳಿದ.

ದಾದರ್ ರೈಲ್ವೆ ನಿಲ್ದಾಣಕ್ಕೆ ಇಬ್ಬರೂ ಬಂದರು. ಲೋಕಲ್ ಟ್ರೈನ್ ಬರುವುದಕ್ಕೆ ಹತ್ತು ನಿಮಿಷಗಳ ಕಾಲ ಉಳಿದಿತ್ತು. ಶ್ರೀಕಂಠ, ಪ್ರಭಾ ನಿಲ್ದಾ ಣದ ಚಹಾ ಅಂಗಡಿಯಲ್ಲಿ ಚಹಾ ತೆಗೆದುಕೊಂಡರು.

ರೈಲು ಬರಲು ಶ್ರೀಕಂಠ ಪ್ರಭಾದೇವಿಯನ್ನು ಗಾಡಿ ಹತ್ತಿಸಿ ತಾನು ಹಿಂದುಳಿದ. ಎಲೆಕ್ಟ್ರಿಕ್ ಟ್ರೈನ್ ಕ್ಷಣಮಾತ್ರದಲ್ಲಿ ಕಣ್ಮರೆಯಾಯಿತು.

ಶ್ರೀಕಂಠ ಕಾಲೆಳೆದುಕೊಂಡು ಮನೆ ಬಂದು ಸೇರಿದ. ಅಪೂರ್ಣವಾಗಿದ್ದ ಲೆನಿನ್, ಸ್ಟಾಲಿನ್ನರ ರುಂಡಗಳು ಪ್ರೇತವನದ ಕಳೇಬರಗಳ ರುಂಡಗಳಂತೆ ದಿಟ್ಟಿಸಿ ನೋಡುತ್ತಿದ್ದವು.

ಶೂನ್ಯತೆ — ಎಲ್ಲೆಲ್ಲಿಯೂ ಶೂನ್ಯ.

ಕತ್ತಲು — ಕಾಳರಾತ್ರಿಯನ್ನು ಮೀರಿಸುವ ಕತ್ತಲು.

ಶಿಲ್ಪದ ಕೆಲಸ ಮುಂದುವರಿಸಲು ಶ್ರೀಕಂಠ ಇಚ್ಛೆಪಡಲಿಲ್ಲ. ಲೆನಿನ್, ಸ್ಟಾಲಿನ್ನರ ಮುಖಗಳ ಮೇಲೆ ಒದ್ದೆಯ ಬಟ್ಟೆಯ ತೆರೆ ಹಾಕಿ ಕುಳಿತ.

ಅವನ ಮನಸ್ಸಿನಲ್ಲಿ ಏನೋ ಬಯಕೆ – ಅಶಾಂತಿ – ಆವೇಗ. ಬೇಕು ಬೇಕು ಎಂದು ಮನಸ್ಸು ಮೊರೆಯುತ್ತಿದ್ದರೂ ‘ ಇದು ಬೇಕು ’ ಎಂದು ಹೇಳ ಲಾರ.

ಮಾನವ ಸ್ನೇಹಜೀವಿ.
ಮಾನವ ಪ್ರೇಮಜೀವಿ.
ಮಾನವ ಸಖ್ಯಜೀವಿ.

ಕ್ರಾಂತಿಕನ್ಯೆ ಪ್ರಭಾದೇವಿಯ ಹೃದಯದಲ್ಲಿ ಸ್ನೇಹ - ಪ್ರೇಮ - ಸಖ್ಯಗಳಿಗೆ ಎಡೆಯಿಲ್ಲವೇ ?

'ಇಲ್ಲದಿದ್ದರೆ ಅವಳಿಂತು ಸಹಾನುಭೂತಿ ತೋರುತ್ತಿದ್ದಳೇ? ನನ್ನ ಹಿತ-ಪ್ರಗತಿ - ಉತ್ಕರ್ಷವೇ ತನ್ನ ಸರ್ವಸ್ವವೆಂದು ಭಾವಿಸುತ್ತಿದ್ದಳೇ?— ಶಾಲೆಗೆ ಹೋಗುವುದನ್ನೂ ಬಿಟ್ಟು ತನ್ನ ನೆರವಿಗೆ ನಿಲ್ಲುತ್ತಿದ್ದಳೇ? '

ಪ್ರಭಾದೇವಿ ಶ್ರೀಕಂಠನಿಗೆ ದೊಡ್ಡ ಸಮಸ್ಯೆಯಾದಳು. ಅವಳ ವೃತ್ತಿಯಲ್ಲಿ ಸ್ವಾತಂತ್ರ್ಯವಿತ್ತು, ಸ್ವಚ್ಛಂದತೆಯಿರಲಿಲ್ಲ; ಮಾತಿನಲ್ಲಿ ಮಾರ್ದವವಿತ್ತು, ಸಲಿಗೆಯಿರಲಿಲ್ಲ; ನುಡಿಯಲ್ಲಿ ಅನುಕಂಪವಿತ್ತು, ಸವಿಯಿರಲಿಲ್ಲ.

ಗಂಟೆಕಟ್ಟಳೆ ವಾದ ಮಾಡಿದ್ದರೂ ಪ್ರಭಾದೇವಿ ತನ್ನ ಅಂತರಂಗವನ್ನು ಬಿಚ್ಚಿಟ್ಟಿರಲಿಲ್ಲ. ಒಂದು ದಿನವೂ ತನ್ನ ವೈಯಕ್ತಿಕ ಕಷ್ಟ ಸುಖವನ್ನು ಹೇಳಿಕೊಂಡಿರಲಿಲ್ಲ.

' ಇದೇನು ಕೇವಲ ಶಿಷ್ಯತೆಯ ಸ್ನೇಹವೇ ?
' ಪ್ರಭಾದೇವಿ ನನ್ನನ್ನು ಕೇವಲ ಕಲಾವಿದನನ್ನಾಗಿ ಕಾಣುತ್ತಿರುವಳೇ ?
' ಕಲಾವಿದನೂ ಮನುಷ್ಯನಲ್ಲವೇ - ಅವನಿಗೂ ಹಸಿವು ತೃಷೆಗಳಿಲ್ಲವೇ?
' ಕಮ್ಯುನಿಸಂ ಪ್ರಭಾದೇವಿಯನ್ನು ಒಂದು ಯಂತ್ರ ಮಾಡಿದೆಯೇ ? '
ಎಂದು ರಾತ್ರಿಯೆಲ್ಲಾ ಒಂದೇ ಸಮನಾಗಿ ಯೋಚಿಸಿದ.

## ೬

ಎರಡು ವಾರಗಳು ಕಳೆಯುವುದರಲ್ಲಿ ಶ್ರೀಕಂಠನ ಶಿಲ್ಪಗಳು ನಿರ್ದಿಷ್ಟ ಸ್ವರೂಪ ತಳೆದಿದ್ದವು. ನಯಗೆಲಸ ಉಳಿದಿದ್ದರೂ, ಶಿಲ್ಪಿಗಳಲ್ಲಿ ರೂಪ ಲಕ್ಷಣಗಳು ಸ್ಪಷ್ಟವಾಗಿ ಮೂಡಿದ್ದವು. ನೋಡಿದವರು ಅವುಗಳನ್ನು ಕೂಡಲೇ ಲೆನಿನ್ ಸ್ಟಾಲಿನ್ ಎಂದು ಗುರುತಿಸಬಹುದಾಗಿತ್ತು.

ಒಂದು ಬೆಳಿಗ್ಗೆ ಶ್ರೀಕಂಠ ತನ್ನ ಕೆಲಸದಲ್ಲಿ ನಿಮಗ್ನನಾಗಿದ್ದಾಗ ರಾಜೂ

ಧಾವಿಸಿ ಬಂದ. ರಾಜುವನ್ನು ಕಂಡೊಡನೆಯೇ ಶ್ರೀಕಂಠ ತನ್ನ ಮರದ ಉಳಿ ಕೆಳಗಿಟ್ಟು ಅವನನ್ನು ಬಂದು ಅಪ್ಪಿಕೊಂಡು

" ಎಷ್ಟು ದಿವಸವಾಯಿತು ನಿನ್ನನ್ನು ನೋಡಿ ರಾಜು " ಎಂದ.

" ಇತ್ತ ಬರುವುದಕ್ಕೆ ಪುರಸತ್ತೇ ಆಗಲಿಲ್ಲಪ್ಪಾ. ಶಾಲೆ, ಪಾರ್ಟಿಯ ಕೆಲಸ ಎರಡೂ ನನ್ನ ಜೀವ ಹಿಂಡುತ್ತಿವೆ. "

" ಏನು ಸಮಾಚಾರ. ನಿನ್ನನ್ನು ನೋಡಿದರೆ ಯಾವದೋ ವಿಶೇಷ ಸುದ್ದಿಯನ್ನು ತಂದಿರುವಂತಿದೆ. "

" ಹೌದು - ಈ ಸಂಜೆ ಸಹಸ್ರಬುದ್ಧೆ ಮತ್ತು ಫಡ್ಕೆ ನಿನ್ನ ಶಿಲ್ಪಗಳನ್ನು ನೋಡುವುದಕ್ಕೆ ಬರುತ್ತಾರೆ. ಅದನ್ನು ಮೊದಲೇ ತಿಳಿಸಿ ಹೋಗಲು ಬಂದೆ. "

" ಅವರು ಯಾರು ? "

" ಸಹಸ್ರಬುದ್ಧೆ ಪಾರ್ಟಿಯ ಸೆಕ್ರೆಟರಿ. ಫಡ್ಕೆ ಪೋಲಿಟ್ ಬ್ಯುರೋ ಸದಸ್ಯರು. ಇಬ್ಬರೂ ಪಾರ್ಟಿಯ ಆಧಾರಸ್ತಂಭಗಳು. "

" ಈಚೆಗೆ ಒಳ್ಳೆಯ ಪ್ರಭಾವಶಾಲಿಗಳಾದ ಸ್ನೇಹಿತರು ನಿನಗೆ ದೊರಕಿದ್ದರೆಂದ ಹಾಗಾಯಿತು. "

" ಅಯ್ಯೋ ಅವರನ್ನು ಸ್ನೇಹಿತರೆಂದು ಕರೆಯಲೇ ? "

" ಇನ್ನೇನೆಂದು ಕರೆಯುವೆ - ಶತ್ರುಗಳೆಂದು ಕರಯುವೆಯಾ ? "

" ಹಾಗಲ್ಲ - ಅವರು ತುಂಬ ದೊಡ್ಡವರು. "

" ಕಮ್ಯುನಿಸ್ಟ್ ಪಾರ್ಟಿಯಲ್ಲಿಯೂ - ವರ್ಗರಹಿತ ಪಾರ್ಟಿಯಲ್ಲಿಯೂ ದೊಡ್ಡವರು ಚಿಕ್ಕವರು ಎನ್ನುವ ಭೇದಗಳಿವೆಯೇನು ? "

" ಈಚೆಗೆ ನೀನು ಬಹಳ ಕೆಣಕು ಮಾತು ಕಲಿತುಬಿಟ್ಟೆ ಶ್ರೀಕಂಠ. "

" ಹೋಗಲಿ - ಸ್ವಲ್ಪ ಕುಳಿತುಕೋ - ಚಹಾಕ್ಕೆ ಹೇಳಿ ಬರುತ್ತೇನೆ. "

" ನನಗೂ ಸ್ವಲ್ಪವೂ ಪುರಸತ್ತಿಲ್ಲ ಶ್ರೀಕಂಠ. ನಾನು ಈ ಕೂಡಲೆ ಹೋಗಬೇಕಾಗಿದೆ. ಸಂಜೆ ಬಂದಾಗ ಚಹಾ ಕೊಡುವಿಯಂತೆ. ಈಗ ಹೋಗಲು ಅಪ್ಪಣೆ ಕೊಡು. "

" ಅಪ್ಪಣೆ ತೆಗೆದುಕೊಂಡೇ ಇರುವೆಯಲ್ಲಾ ! "

" ಸಂಜೆ ಆರರ ಒಳಗೆ ಬರುತ್ತೇವೆ. "

" ಹಾಗೇ ಆಗಬಹುದು. "

" ಇನ್ನೂ ಪ್ರಭಾ ಬರಲಿಲ್ಲವೇ ? "

" ಇಲ್ಲ - ಬರುವ ಹೊತ್ತು. "

" ಶಿಲ್ಪಗಳು ಮುಗಿಯಲು ಇನ್ನೂ ಎಷ್ಟು ದಿನ ಬೇಕಾಗಬಹುದು. ? "

" ಇನ್ನೊಂದು ವಾರದ ಕೆಲಸವಿವೆ. "

" ಮುಂದಿನ ವಾರ ನೀನು ಅವುಗಳನ್ನು ಮುಗಿಸಿಕೊಟ್ಟರೆ ಪಾರ್ಟಿ ಪತ್ರಿಕೆಯ ಮೇ ಡೇ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಲು ಅನುಕೂಲವಾಗುತ್ತದೆ. "

" ಆಗಬಹುದು. "

ರಾಜೂ ಹೆಚ್ಚು ಕಾಲ ನಿಲ್ಲದೆ ಅಲ್ಲಿಂದ ಹೊರಟು ಹೋದ. 'ರಾಜೂ ಕೂಡ ಎಷ್ಟು ವ್ಯವಹಾರಿಕವಾಗಿ ವರ್ತಿಸುತ್ತಿದ್ದಾನೆ' ಎಂದು ಶ್ರೀಕಂಠ ಮುಮ್ಮಲ ಮರುಗಿದ. ಪ್ರಭಾದೇವಿ ಬಂದುದನ್ನೂ ಅವನು ಗಮನಿಸಲಿಲ್ಲ.

ಶ್ರೀಕಂಠನ ಮನಸ್ಸು ವ್ಯಗ್ರವಾಗಿರುವುದನ್ನು ಕಂಡುಕೊಳ್ಳಲು ಪ್ರಭಾದೇವಿಗೆ ಬಹಳ ಹೊತ್ತು ಬೇಕಾಗಿರಲಿಲ್ಲ.

" ಏನೋ ಯೋಚಿಸುತ್ತ ಕುಳಿತಿರುವಿರಲ್ಲ " ಎಂದಳು.

" ಈಗ ತಾನೆ ರಾಜು ಬಂದು ಹೋದ ಪ್ರಭಾದೇವಿ. "

" ಏನು ಹೇಳಿದರು. "

" ಸಂಜೆ ಸಹಸ್ರಬುದ್ಧೆ, ಫಡ್ಕೆ ಶಿಲ್ಪಗಳನ್ನು ನೋಡಲು ಬರುವರಂತೆ. "

" ಬಹಳ ಸಂತೋಷ. ಅದಕ್ಕೇಕೆ ನೀವು ಚಿಂತಿಸಬೇಕು ? "

" ರಾಜೂ ಕ್ಷಣ ಕಾಲವೂ ನಿಲ್ಲಲಿಲ್ಲ. ಚಹಾ ಕೂಡ ಕುಡಿಯಲಿಲ್ಲ. ತನ್ನ ಕರ್ತವ್ಯ ಮುಗಿಸಿದವನೇ ಹೊರಟು ಹೋದ. "

" ಅದಕ್ಕಷ್ಟು ಚಿಂತೆ ಮಾಡಬೇಕೇ ? ಮಾತು ಕತೆಯ ಮಿತಿಯನ್ನೂ ದಾಟಿದುದಲ್ಲವೇ ನಿಮ್ಮ ಮೈತ್ರಿ. "

" ಹೌದು. ನನ್ನ ಹೃದಯ ಸಂಗ ಬಯಸುತ್ತದೆ ಪ್ರಭಾದೇವಿ. ರಾಜೂ—ನೀವು - ನೀವಿಬ್ಬರೇ ನನ್ನ ಅಂತರಂಗದ ಗೆಳೆಯ ಗೆಳತಿಯರು. ನೀವೂ ನನ್ನನ್ನು ದೂರ ಮಾಡಿದರೆ ನನಗೆ ಯಾರು ದಿಕ್ಕು ? "

" ಅವರಾಗಲಿ ನಾನಾಗಲಿ ನಿಮ್ಮನ್ನು ದೂರ ಮಾಡುವ ಸಂಭವವಿಲ್ಲವೆಂದು ನಾನು ಆಶ್ವಾಸನ ಕೊಡಬಲ್ಲೆ. ಈ ಶಿಲ್ಪಗಳನ್ನು ನೀವು ಬೇಗ ಮುಗಿಸಿ

ದರೆ ನನ್ನ ಮನಸ್ಸಿಗೆ ತುಂಬ ಸಂತೋಷವಾಗುತ್ತದೆ. ”

“ ನಿಜವೇ ? ”

“ ನಿಜ ಶ್ರೀಕಾಂತ್. ”

“ ಒಂದು ವಾರದಲ್ಲಿ ಮುಗಿಸುತ್ತೇನೆಂದು ಹೇಳಿದ್ದೆ – ವಾರವೂ ಬೇಡ, ಮೂರೇ ದಿವಸಗಳಲ್ಲಿ ಮುಗಿಸಿಕೊಡುತ್ತೇನೆ. ”

“ ವೃಥಾ ಆಯಾಸ ಮಾಡಿಕೊಳ್ಳಬೇಡಿ. ”

“ ಕಲಾವಿದನಿಗೆ ಆಲಸ್ಯವೇ ಆಯಾಸ. ಕೆಲಸ ಮಾಡುವ ಮನೋಧರ್ಮ ಕೂಡಿಬಂದರೆ ಅವನು ಪರಮ ಸುಖಿ. ”

“ ಈಗ ಮನೋಧರ್ಮ ಕೂಡಿತು. ”

“ ಕೂಡಿತು........ನಿಮ್ಮಿಂದ........ ”

“ ನನ್ನಿಂದಲೇ ! ”

“ ಹೌದು – ನಿಮ್ಮಿಂದ. ನಿಮ್ಮ ಅಂತಃಕರಣವೇ ನನ್ನ ಕೃತಿಗಳ ಕ್ರತುಶಕ್ತಿ. ”

“ ಬಹಳ ದೊಡ್ಡ ಮಾತಾಯಿತು. ”

“ ನಾನು ಖಂಡಿತವಾಗಿ ಸುಳ್ಳು ಹೇಳುತ್ತಿಲ್ಲ. ನನ್ನ ಕೃತಿಗಳನ್ನು ಲಕ್ಷ ಜನ ಮೆಚ್ಚುವುದು ಒಂದು ತೂಕವಾದರೆ, ನೀವೂ ರಾಜೂ ಮೆಚ್ಚುವುದೇ ಒಂದು ತೂಕ........ಈ ಎರಡು ಮೂರ್ತಿಗಳು ನಿಮ್ಮ ಮನಸ್ಸಿಗೆ ಬಂದವೇ ?”

“ ರಷ್ಯಾ ಶಿಲ್ಪಿಗಳು ಮಾಡಿರುವ ಅನೇಕ ಕೃತಿಗಳ ಪ್ರತಿಚಿತ್ರಗಳನ್ನು ನಾನು ನೋಡಿದ್ದೇನೆ. ನಿಮ್ಮ ಕೃತಿ ಅವುಗಳಿಗೆ ಯಾವ ಭಾಗದಲ್ಲಿಯೂ ಕಡಿಮೆಯಾಗಿಲ್ಲ. ಪಾರ್ಟಿಯ ಜನ ಸಂತುಷ್ಟರಾಗುತ್ತಾರೆ. ”

“ ನಿಮ್ಮ ಮಾತು ಕೇಳಿ ನನ್ನ ಆಯಾಸವೆಲ್ಲಾ ಪರಿಹಾರವಾಯಿತು ಪ್ರಭಾದೇವಿ. ”

ಕಲಾವಿದನ ಏಕಾಗ್ರಚಿತ್ತತೆ ಯಾವ ಪವಾಡವನ್ನು ಸಾಧಿಸಬಹುದೆಂಬುದನ್ನು ಪ್ರಭಾದೇವಿ ಅಂದು ಕಂಡುಕೊಂಡಳು. ಶಿಲ್ಪಗಳ ಮುಂದೆ ಐದು ತಾಸುಗಳು ಶ್ರೀಕಂಠ ಕುಳಿತು ನಾಲ್ಕಾರು ದಿನಗಳಲ್ಲಿ ಮುಗಿಸಲಾಗದಷ್ಟು ಕೆಲಸ ಮುಗಿಸಿದ್ದ.

ಶ್ರೀಕಂಠನ ದೇಹಕ್ಕೆ ತುಂಬ ಶ್ರಮವಾಗಿತ್ತು. ಅವನ ಕಣ್ಣುಗಳು ಕೆಂಪ

ಗಾಗಿದ್ದವು. ಪೀಠ ಬಿಟ್ಟು ಎದ್ದು

"ಪ್ರಭಾದೇವಿ, ನಾನು ಸ್ನಾನಮಾಡಿ ಬರುತ್ತೇನೆ. ನಿಮ್ಮ ಪಾರ್ಟಿಯವರು ಬಂದರೆ ಕುಳಿತುಕೊಳ್ಳಲು ಹೇಳಿ"

ಎಂದವನೇ ಟವಲು, ಸೋಪು ತೆಗೆದುಕೊಂಡು ಸ್ನಾನಗೃಹಕ್ಕೆ ಹೋದ.

ಶ್ರೀಕಂಠ ಸ್ನಾನ ಮುಗಿಸಿ ಬರುವಷ್ಟರಲ್ಲಿ ಪ್ರಭಾದೇವಿ ಹಜಾರವನ್ನು ಅಚ್ಚುಗಟ್ಟು ಮಾಡಿ, ಮೇಜು, ಕುರ್ಚಿಗಳನ್ನು ಅಣಿಯಾಗಿಟ್ಟು, ಎರಡು ತುಂಡು ರೊಟ್ಟಿ, ಚಹಾ ತಂದಿಟ್ಟಿದ್ದಳು.

ಸ್ನಾನ ಮುಗಿಸಿಕೊಂಡು, ಬಂದ ಶ್ರೀಕಂಠ ಹಜಾರದ ವ್ಯವಸ್ಥೆ ನೋಡಿ "ನೀವೇಕೆ ತೊಂದರೆ ತೆಗೆದುಕೊಂಡಿರಿ ಪ್ರಭಾದೇವಿ" ಎಂದು ಕೇಳಿದ.

ಪ್ರಭಾ ಅವನಿಗೆ ಉತ್ತರಕೊಡಲಿಲ್ಲ. ಬಲವಂತ ಮಾಡಿ ಅವನು ರೊಟ್ಟಿ, ಚಹಾ ಸ್ವೀಕರಿಸುವಂತೆ ಮಾಡಿದಳು.

"ನನ್ನ ಕೃತಿಗಳನ್ನು ನಿಮ್ಮ ಪಾರ್ಟಿ ಮುಖಂಡರು ಒಪ್ಪಿಕೊಳ್ಳಬಹುದಲ್ಲವೇ ?"

"ಒಪ್ಪಿಕೊಳ್ಳದಿದ್ದರೆ ಅವರನ್ನು ರೂಕ್ಷರವರ್ಗಕ್ಕೆ ಸೇರಿಸಬೇಕಾಗುತ್ತದೆ."

"ಪ್ರಭಾದೇವಿ, ನನ್ನದೊಂದು ಕೋರಿಕೆ ಇದೆ – ನಡೆಸಿಕೊಡುವಿರಾ ?"

"ಅವಶ್ಯಕವಾಗಿ ಆಗಲಿ - ಹೇಳಿ."

"ಕಲಾವಿದ ತನ್ನ ಕೃತಿಗಳನ್ನು ಎರಡು ವಿಭಾಗಮಾಡುತ್ತಾನೆ. ಒಂದು ಲೋಕಕ್ಕಾಗಿ ಮಾಡುವ ಕೃತಿಗಳು. ಇದರಲ್ಲಿಯೂ ಎರಡು ಭಾಗ ಮಾಡಬಹುದು - ಲೋಕದ ಮೆಚ್ಚುಗೆ ಪಡೆಯಲು ಅವನು ಮಾಡುವ ಕೃತಿಗಳು, ಲೋಕ ಕಲ್ಯಾಣವಾಗಲೆಂದು ಅವನು ಮಾಡುವ ಕೃತಿಗಳು. ಎರಡು ಕಲಾವಿದ ತನ್ನ ಆತ್ಮಸಂತೋಷಕ್ಕಾಗಿ ಮಾಡುವ ಕೃತಿಗಳು. ಈ ವರೆಗೆ ನಾನು ಮಾಡಿರುವ ಕೃತಿಗಳೆಲ್ಲಾ ಮೊದಲನೆಯ ವರ್ಗಕ್ಕೆ ಸೇರಿದವು. ಎರಡನೆಯ ವರ್ಗಕ್ಕೆ ಸೇರುವ ಒಂದೆರಡು ಕೃತಿಗಳನ್ನು ಮಾಡಲು ಮನಸ್ಸು ತವಕಪಡುತ್ತಿದೆ."

"ಅದಕ್ಕೆ ನಾನು ಹೇಗೆ ನೆರವು ನೀಡಬಲ್ಲೆ."

"ನೀವು ಪೋಸ (Pose) ಮಾಡಲೊಪ್ಪಿಕೊಳ್ಳಬೇಕು."

" ನಾನೇ ! "

" ಹೌದು ನೀವೇ ! ಪ್ರತಿಯೊಬ್ಬ ಮನುಷ್ಯನ ಜೀವನದಲ್ಲಿಯೂ ಒಂದು ಸಂಧಿಕಾಲ ಬರುತ್ತದೆ. ಭಿನ್ನವೂ ಪರಸ್ಪರ ವಿರುದ್ಧವೂ ಆದ ತತ್ತ್ವಗಳನ್ನು ಅವನು ಗಮನಿಸುತ್ತಿರುವಂತೆ ಮನಸ್ಸಿನಲ್ಲಿ ಪ್ರಬಲ ಸಂಶಯವೇಳುತ್ತದೆ. ಇವುಗಳಲ್ಲಿ ಯಾವದು ಸತ್ಯವಾದುದು – ಯಾವದು ನ್ಯಾಯವಾದುದು - ಯಾವದು ನನ್ನ ಆತ್ಮಕಲ್ಯಾಣಕ್ಕೆ ಪೋಷಕವಾದುದು. ಪ್ರಾಚೀನವೇ, ಅರ್ವಾಚೀನವೇ - ಕಮ್ಯುನಿಸಮ್ಮೋ, ಗಾಂಧೀಯಿಸಮ್ಮೋ – ಕ್ರಾಂತಿಯೋ ಶಾಂತಿಯೋ ಎನ್ನುವ ದ್ವಂದ್ವರಾಜ್ಯದಲ್ಲಿ ಸಿಕ್ಕುಬಿದ್ದು ಅವನು ತೊಳಲಾಡುತ್ತಾನೆ. ವಿರಕ್ತಿ ಅನುರಕ್ತಿಗಳ ಮಧ್ಯೆಸಿಕ್ಕಿಕೊಂಡ ಸಿದ್ಧಾರ್ಥನೂ ಹೀಗೆ ತೊಳಲಾಡಿದುದು ನಿಮಗೆ ಗೊತ್ತೇ ಇದೆ. ನಾನೂ– ನೀವೂ ಇಬ್ಬರೂ ಈಗ ಈ ಪರಿಸ್ಥಿತಿಗೆ ಸಿಕ್ಕಿದ್ದೇವೆ. ನೀವು ಮಾಡೆಲ್ (Model) ಆಗಿ, ನಾನು ಶಿಲ್ಪಿಯಾದರೆ ಈ ಭಾವನೆಗೆ ಯೋಗ್ಯ ರೂಪಕೊಡಬಹುದೆಂದು ನನಗನಿಸುತ್ತಿದೆ. "

" ನಿಜ ಶ್ರೀಕಾಂತ್. ನಿಮ್ಮನ್ನು ಕಮ್ಯುನಿಸಮ್ಮಿಗೆ ಮತಾಂತರಗೊಳಿಸಲೆತ್ನಿಸಿದ ನಾನೇ ಮತಾಂತರಗೊಳ್ಳುತ್ತಿರುವಂತಿದೆ. ನಮ್ಮ ವಾದ ವಿವಾದದಿಂದ ನಿಮ್ಮ ಮನಸ್ಸಿನಲ್ಲಿ ಹೊಸ ಸಂಶಯಗಳು ಹುಟ್ಟಿಕೊಂಡಂತೆ ನನ್ನ ಮನಸ್ಸಿನಲ್ಲಿಯೂ ಸಂಶಯಗಳು ಹುಟ್ಟಿಕೊಂಡಿವೆ. ಮಾರ್ಕ್ಸ್ ಸೂಚಿಸಿರುವಂತೆ ನಮ್ಮ ಆರ್ಥಿಕ ಸಮಸ್ಯೆಗಳನ್ನು ಪರಿಹರಿಸಿಕೊಂಡರೆ ಎಲ್ಲ ಸಮಸ್ಯೆಗಳೂ ತಾವಾಗಿಯೇ ಪರಿಹಾರವಾಗುವವೆಂದು ಭಾವಿಸಿದ್ದೆ. ನನ್ನ ನಿರ್ಧಾರದ ಬುಡ ಅಷ್ಟು ಭದ್ರವಾದುದಲ್ಲವೆಂದು ಈಗ ತಿಳಿಯುತ್ತಿದೆ. ಕ್ರಾಂತಿಯಿಂದ ಕ್ರಾಂತಿ ಹುಟ್ಟುತ್ತದೆ. ಕ್ರಾಂತಿಯ ಪರಂಪರೆ ಅನಂತವಾಗಿ ಸಾಗಿದರೆ ಜಗತ್ತು ಉಳಿಯುವುದೇ ? ಕ್ರಾಂತಿ ಗಮ್ಯವೇ ವಿನಾ ಗುರಿಯಲ್ಲ. ಕ್ರಾಂತಿಯ ಗುರಿಯಾವದು ? ಕ್ರಾಂತಿಯೋ ಶಾಂತಿಯೋ ? ಕ್ರಾಂತಿಯಿಂದ ಶಾಂತಿಯನ್ನು ಸಾಧಿಸಲು ಸಾಧ್ಯವೇ ? ದ್ವೇಷದಿಂದ ಪ್ರೇಮವನ್ನು ದೊರಕಿಸಲು ಸಾಧ್ಯವೇ ? ದ್ವೇಷದ ಆಣಿಕಲ್ಲನ್ನವಲಂಬಿಸಿರುವ ಕಮ್ಯುನಿಸಂ ಚಿರಸ್ಥಾಯಿಯಾಗಿ ಉಳಿಯಬಲ್ಲುದೇ?"

" ರಷ್ಯಾದ ಕಮ್ಯುನಿಸಮ್ಮನ್ನು ಒಪ್ಪಿಕೊಂಡಿರುವ ರಾಷ್ಟ್ರಗಳಲ್ಲಿಯಾದರೂ ಶಾಂತಿ ನೆಲಸಿದೆಯೇ ? "

" ಎಲ್ಲಿಂದ ಬಂತು. ರಷ್ಯಾದಲ್ಲಿಯೇ ಶಾಂತಿಯಿಲ್ಲ. ಸ್ಟಾಲಿನ್ ಅಸೀಮ

ಕ್ರೌರ್ಯದಿಂದ ವಿರೋಧಶಕ್ತಿಗಳನ್ನಡಗಿಸಿದ್ದಾನೆ. ಅವನ ನಿಧನವಾದರೆ ರಷ್ಯಾ ರಣಕುಂಡವಾಗುತ್ತದೆ. ಯೂಗೋಸ್ಲಾವಿಯಾ ರಷ್ಯಾದಿಂದ ದೂರ ನಿಂತಿದೆ. ಹಂಗೇರಿ, ಜೆಕೋಸ್ಲೊವಾಕಿಯಾ ರಾಷ್ಟ್ರಗಳು ಸದ್ಯದಲ್ಲಿಯೇ ರಷ್ಯಾದಿಂದ ದೂರನಿಲ್ಲುತ್ತವೆ. ಚೀನಾ ಕಮ್ಯುನಿಸಂ ತತ್ತ್ವಗಳನ್ನು ಆಚರಣೆಗೆ ತಂದಿದ್ದರೂ ತಾನು ಕಮ್ಯುನಿಸ್ಟ ರಾಷ್ಟ್ರವಲ್ಲ ಎಂದು ಸಾರಿದೆ. ರಷ್ಯಾದ ಸರ್ವಾಧಿಕಾರವನ್ನು ಚೀನಾ ಒಪ್ಪಿಕೊಂಡಿಲ್ಲ."

"ಇಷ್ಟೆಲ್ಲ ತಿಳಿದೂ ನೀವು ಪಾರ್ಟಿಯಲ್ಲಿ ಹೇಗಿರುವಿರಿ ಪ್ರಭಾದೇವಿ?"

"ನಮ್ಮ ಪಾರ್ಟಿಯ ವಿಷಯ ನಿಮಗೆ ಸಾಕಷ್ಟು ಗೊತ್ತಿಲ್ಲ ಶ್ರೀಕಾಂತ್. ಪಾರ್ಟಿಯನ್ನು ಸೇರುವುದು ಎಷ್ಟು ಸುಲಭವೋ ಅದನ್ನು ಬಿಟ್ಟು ಹೊರಬರುವುದು ಅಷ್ಟು ಸುಲಭವಲ್ಲ - ಸಾಧ್ಯವೇ ಅಲ್ಲ. ಸೈನ್ಯ ನಿಯಮಗಳಿಗಿಂತಲೂ ಪಾರ್ಟಿ ನಿಯಮಗಳು ಕಠಿಣ. ಪಾರ್ಟಿ ಮುಖಂಡರ ಮಾತಿಗೆ ನಾವು ಪ್ರತಿ ಹೇಳಲು ಸಾಧ್ಯವೇ ಇಲ್ಲ. ಸ್ವಲ್ಪ ಭಿನ್ನಾಭಿಪ್ರಾಯ ವ್ಯಕ್ತಮಾಡಿದರೆ ಸಾಕು, ನಮ್ಮನ್ನು ನಾಶಮಾಡಿಬಿಡುತ್ತಾರೆ."

"ದೈಹಿಕವಾಗಿಯೇ?"

"ಹೌದು – ಅದಕ್ಕೂ ಹೆಚ್ಚಾಗಿ ಮಾನಸಿಕವಾಗಿ, ಕಮ್ಯುನಿಸ್ಟ್ ಪಾರ್ಟಿಯ ದೊಡ್ಡ ಆಯುಧವೆಂದರೆ ಅಪಪ್ರಚಾರ. ಪಾರ್ಟಿಗೆ ಯಾರು ಬೇಡವೋ ಅವರ ಮೇಲೆ ಬೂಜ್ವಾ, ರೈಟವಿಂಗ್ ಡೀವಿಯೇಷನಿಸ್ಟ್ (Right Wing deviationist), ಪ್ರತಿಗಾಮಿ, ಅಮೇರಿಕನ್ ಎಜಂಟ ಎಂಬ ನಿಂದಾ ಮಳೆ ಆರಂಭವಾಗುತ್ತದೆ. ವಿರೋಧಿಗೆ ಆತ್ಮಹತ್ಯೆಯೊಂದೇ ಪರಿಹಾರ ಮಾರ್ಗವಾಗುತ್ತದೆ. ಇದಕ್ಕೆ ನಾವು ವಿಶೇಷ ಹೆದರುತ್ತೇವೆ. ಪಾರ್ಟಿಯ ಬಗ್ಗೆ ನಮಗಿರುವ ಆಸ್ಥೆಗೆ ಅಭಿಮಾನಕ್ಕಿಂತಲೂ ಭಯವೇ ಮೂಲಕಾರಣವಾಗಿದೆ—ಸಹಸ್ರಬುದ್ಧೆ, ಫಡ್ಕೆಯವರ ಜತೆ ಮಾತನಾಡುವಾಗ ನೀವು ಸ್ವಲ್ಪ ಎಚ್ಚರಿಕೆಯಿಂದಿರುವುದು ಒಳ್ಳೆಯದು."

"ಅವರಿಗೆ ನಾನೇಕೆ ಹೆದರಬೇಕು. ನಾನು ನಿಮ್ಮ ಪಾರ್ಟಿ ಸದಸ್ಯನಲ್ಲ. ಅವರ ಸರ್ವಾಧಿಕಾರ ನಾನು ಒಪ್ಪಿಕೊಂಡಿಲ್ಲ."

"ನೀವು ಒಪ್ಪಿಕೊಂಡಿಲ್ಲ - ನಾವು ಒಪ್ಪಿಕೊಂಡಿದ್ದೇವೆ. ನಿಮ್ಮನ್ನು ತಿದ್ದಿ ಪಾರ್ಟಿಗೆ ಅಣಿಗೊಳಿಸುವಕೆಲಸ ನನಗೂ ರಾಜೂ ಅವರಿಗೂ ವಿಧಾಯ

ಕವಾಗಿದೆ. ನೀವು ಮಾತಿನಲ್ಲಿ ಎಚ್ಚರ ತಪ್ಪಿದರೆ ನಾವು ಕಷ್ಟಕ್ಕೆ ಸಿಕ್ಕಿಕೊಳ್ಳು ತ್ತೇವೆ.

ಶ್ರೀಕಂಠ ಬೆಕ್ಕಸ ಬೆರಗಾದ. ಅವನ ಹೃದಯಕ್ಕೆ ಯಾರೋ ಕಿಚ್ಚಿಕ್ಕಿ ದಂತಾಯಿತು. 'ಪ್ರಭಾ ತೋರಿಸಿದ ವಿಶ್ವಾಸ, ಸಹಾನುಭೂತಿ, ಕಲಾಪ್ರೇಮ ಎಲ್ಲವೂ ಪಾರ್ಟಿಗಾಗಿಯೇ ?' ಎನ್ನುವ ಚಿಂತೆ ಅವನನ್ನು ಕಾಡತೊಡಗಿತು.

"ಪಾರ್ಟಿಯ ಸಲುವಾಗಿ ನನ್ನ ಸ್ನೇಹ ಬೆಳಸಿದಿರಾ ಪ್ರಭಾದೇವಿ."

"ದಯೆಯಿಟ್ಟು ನನ್ನನ್ನು ತಪ್ಪು ತಿಳಿದುಕೊಳ್ಳಬೇಡಿ ಶ್ರೀಕಾಂತ್. ಪಾರ್ಟಿಗೆ ಸೇರಿಸುವ ಉದ್ದೇಶವಾಗಿಯೇ ನಾನು ನಿಮ್ಮ ಸ್ನೇಹ ಬೆಳೆಸಲಿಲ್ಲ. ನಿಮ್ಮ ಪರಿಚಯವಾಯಿತು. ಪ್ರಾಸಂಗಿಕವಾಗಿ ನಿಮ್ಮ ವಿಷಯ ಪಾರ್ಟಿ ಕಛೇ ಯಲ್ಲಿ ಬಂತು. ಆಗ ಸಹಸ್ರಬುದ್ಧೇ ಅವರು 'ಪಾರ್ಟಿಯ ಬುದ್ಧಿಜೀವಿ ವರ್ಗ (Intellectual front) ಬಲಗೊಳಿಸಬೇಕು. ಆದಷ್ಟು ಮಂದಿ ಸಾಹಿತಿಗಳು, ಸಂಗೀತಗಾರರು, ಪತ್ರಿಕೋದ್ಯಮಿಗಳು, ಚಿತ್ರಗಾರರು, ಶಿಲ್ಪಿಗಳು, ಕಾಲೇಜ್ ಪ್ರೊಫೆಸರುಗಳು, ವಿದ್ಯಾರ್ಥಿಗಳನ್ನು ಪಾರ್ಟಿಗೆ ಸೇರಿಸಿಕೊಳ್ಳಬೇಕು ಎಂದು ಹೇಳುತ್ತಾ ನಿಮಗೆ ಮಾರ್ಕ್ಸ್‌ವಾದದ ಪರಿಚಯ ಮಾಡಿಕೊಡಬೇಕೆಂದು ನನಗೆ ಆಜ್ಞೆಮಾಡಿದರು. ನಿಮ್ಮ ಸ್ನೇಹ ಆಕಾಂಕ್ಷೆ ನನ್ನಲ್ಲಿ ಉತ್ಕಟವಾಗಿದ್ದುದರಿಂದ ಪಾರ್ಟಿಯ ನಿರೂಪ ಅಪ್ರಿಯವಾಗಲಿಲ್ಲ."

"ಒಳ್ಳೆಯದು - ನನ್ನ ಪ್ರಾರ್ಥನೆಗೇನು ಉತ್ತರ ಹೇಳುವಿರಿ ?"

"ಆಗಬಹುದು. ಆದರೆ ನಾನು ಹೇಳಿಕೊಳ್ಳುವಂತಹ ರೂಪವತಿ ಯಲ್ಲ."

"ಹೂವಿನ ಸೊಗಸು ಮಾಲೆಗಾರನಿಗೆ ಗೊತ್ತಲ್ಲದೆ ಹೂವಿಗೇನು ಗೊತ್ತು ಪ್ರಭಾದೇವಿ."

ಪ್ರಭಾ ನಸುನಾಚಿದಳು. ಶ್ರೀಕಂಠ ಮುಗುಳ್ನಗೆ ನಗುತ್ತಾ

"ಕಮ್ಯುನಿಸ್ಟರೂ ನಾಚುತ್ತಾರೇನು ? ಆ ಬಗ್ಗೆ ಮಹರ್ಷಿ ಮಾರ್ಕ್ಸ್ ಏನು ಹೇಳುವನೋ ?" ಎಂದು ಪರಿಹಾಸ್ಯಮಾಡಿದ

ಆರು ಗಂಟೆ ಸಮೀಪಿಸುತ್ತ ಬಂದಿತ್ತು. ರಾಜು ತನ್ನ ಪಾರ್ಟಿಯ ಮುಖಂಡರೊಂದಿಗೆ ಪ್ರವೇಶಿಸಿ ಅವರಿಗೆ ಶ್ರೀಕಂಠನ ಪರಿಚಯಮಾಡಿಕೊಟ್ಟ.

ಸಹಸ್ರಬುದ್ಧೆ ಕುಳ್ಳನೆಯ ಗುಂಡು ಆಸಾಮಿ, ಮುಖದಮೇಲೆ ಸಿಡುಬಿನ

ಕಲೆಗಳು. ಕಣ್ಣಿಗೆ ದಪ್ಪ ಕನ್ನಡಕಗಳು. ಆತ ಧರಿಸಿದ್ದ ಜುಬ್ಬ ಪಾಯಿ ಜಾಮಾಗಳಿಗೆ ಅಗಸನ ಮನೆಯ ಪರಿಚಯವೇ ಇರಲಿಲ್ಲ. ತಲೆಯ ಮೇಲಿದ್ದ ಕುರುಚುಗೂದಲು ಮುಳ್ಳುಹಂದಿಯ ಮುಳ್ಳುಗಳಂತೆ ಸೆಟೆದು ನಿಂತಿದ್ದವು. ಮಿತಭಾಷಿಯಾದವನು ಹಾಸ್ಯಪ್ರವೃತ್ತಿಯನ್ನು ವಿಷದಂತೆ ಕಾಣುತ್ತಿದ್ದ.

ಫಡ್ಕೆಯೂ ನಿರಾಡಂಬರ ಮೂರ್ತಿ, ಶುಭ್ರವಾದ ಪಂಜೆ, ಕುತ್ತಿಗೆ ಮುಚ್ಚುವ ಕೋಟು ಅವನ ವೈಶಿಷ್ಟ್ಯಗಳಾಗಿದ್ದವು. ಅವನ ಮಾತಿನಲ್ಲಿ ಆಗಾಗ್ಗೆ ಕುಡಿಮಿಂಚಿನಂತೆ ನಗೆ ಚಿಮ್ಮುತ್ತಿತ್ತು ಆಳವಾದ ಮಾರ್ಕ್ಸ್‌ ಪಂಡಿತ ನೆಂದು ಪಾರ್ಟಿಯಲ್ಲಿ ಫಡ್ಕೆಗೆ ತುಂಬ ಗೌರವವಿತ್ತು.

ಸಹಸ್ರಬುದ್ಧೆ ಪಾಂಡಿತ್ಯ ದೊರಕಿಸಿಕೊಳ್ಳುವ ಗೋಜಿಗೆ ಹೋಗದವ. ಕಾನೂನು, ಕಾಯಿದೆ, ರಿಪೋರ್ಟುಗಳು, ಡಾಕ್ಯುಮೆಂಟುಗಳ ಬಗ್ಗೆ ಅವನಿಗೆ ಅನುಪಮ ಪರಿಜ್ಞಾನವಿತ್ತು. ಪಾರ್ಟಿಯ ವ್ಯವಸ್ಥೆ, ಸಿಸ್ತು, ಆಡಳಿತ ಭಾಗ ವೆಲ್ಲಾ ಸಹಸ್ರಬುದ್ಧೇಗೆ ಸೇರಿತ್ತು. ಪಾರ್ಟಿಯ ಸಿಸ್ತಿಗಾಗಿ ಏನನ್ನು ಬೇಕಾ ದರೂ ಮಾಡಲು ಸಹಸ್ರಬುದ್ಧೆ ಹೇಸುತ್ತಿರಲಿಲ್ಲ. ಪಾರ್ಟಿಯ ಸಾಮಾನ್ಯ ಸದಸ್ಯರಲ್ಲದೆ, ಪೋಲಿಟ್ ಬ್ಯೂರೋ ಸದಸ್ಯರು ಕೂಡ ಸಹಸ್ರಬುದ್ಧೇಗೆ ಗಡ ಗಡ ನಡಗುತ್ತಿದ್ದರು.

ಉಪಚಾರೋಕ್ತಿಗಳು, ಲೋಕಾಭಿರಾಮದ ಮಾತುಕತೆ ಒಂದೂ ಸಹಸ್ರ ಬುದ್ಧೇಗೆ ಬೇಕಿರಲಿಲ್ಲ. ತಾನು ಬಂದಿದ್ದ ಕೆಲಸ ಬೇಗ ಮುಗಿಸಿಕೊಂಡು ಹೋಗಬೇಕೆಂಬ ಆತುರ ಅವನಲ್ಲಿ ಒಡೆದು ಕಾಣುತ್ತಿತ್ತು.

"ನಿಮ್ಮ ಶಿಲ್ಪಗಳು ಎಲ್ಲಿಯ ವರೆಗೆ ಬಂದಿವೆ ಮಿ. ಶ್ರೀಕಂಠ ?"

"ಅವುಗಳನ್ನು ಪರಾಮರ್ಶಿಸುವಿರೇನು ?"

"ಅದಕ್ಕಾಗಿಯೇ ನಾವು ಬಂದಿರುವುದು."

ಶ್ರೀಕಂಠ ಮೂರ್ತಿಗಳ ಮೇಲೆ ಹೊದಿಸಲ್ಪಟ್ಟಿದ್ದ ಒದ್ದೆ ವಸ್ತ್ರಗಳನ್ನು ತೆಗೆದ. ಸಹಸ್ರಬುದ್ಧೆ, ಫಡ್ಕೆ ಇಬ್ಬರೂ ಅವುಗಳನ್ನು ಸೂಕ್ಷ್ಮವಾಗಿ ಪರಿಶೀಲಿ ಸಿದರು. ಫಡ್ಕೆ ಉತ್ಸಾಹದಿಂದ

"ಬಹಳ ಚೆನ್ನಾಗಿದೆ ಮಿ. ಶ್ರೀಕಂಠ್. ಇವುಗಳ ಜತೆಗೆ ಕಾರ್ಲ್ ಮಾರ್ಕ್ಸ್‌ನ ಮೂರ್ತಿಯನ್ನು ನೀವು ನಮಗೆ ಮಾಡಿಕೊಡಬೇಕು."

"ಆಗಲಿ."

" ಇವುಗಳನ್ನು ನಾವು ಪಾರ್ಟಿ ಕಛೇರಿಯಲ್ಲಿಟ್ಟುಕೊಳ್ಳುತ್ತೇವೆ. ಮತ್ತು ಇವುಗಳ ಪ್ರತಿಚಿತ್ರವನ್ನು ಪೀಪಲ್ಸ್ ವಾಯ್ಸ್‌ನಲ್ಲಿ ಪ್ರಕಟಿಸುತ್ತೇವೆ. "

"ಅವು ನಿಮ್ಮ ಸೊತ್ತು. ನೀವು ಹೇಗೆ ಬೇಕಾದರೂ ಉಪಯೋಗಿಸಿಕೊಳ್ಳ ಬಹುದು."

" ನೀವು ಭವನಕ್ಕೆ ಗಾಂಧೀಮೂರ್ತಿ ಮಾಡಿಕೊಟ್ಟಿರುವಿರಂತೆ ! "

" ಹೌದು ಕಾಮ್ರೇಡ – ಅವರು ಮುಂಬಯಿಗೆ ಬಂದ ಹೊಸದರಲ್ಲಿ ಆ ಕೆಲಸ ಒಪ್ಪಿಕೊಂಡರು. ಆಗ ಅವರಿಗೆ ನಮ್ಮ ಪರಿಚಯವಾಗಿರಲಿಲ್ಲ. "

ಎಂದು ಪ್ರಭಾದೇವಿ ಉತ್ತರವಿತ್ತಳು.

ಸಹಸ್ರಬುದ್ಧೆ ಮುಖ ಗಂಟು ಹಾಕಿಕೊಂಡು

" ಇನ್ನು ಮೇಲೆ ಭವನದಿಂದ ದೂರವಿರುವುದು ಒಳ್ಳೆಯದು ಮಿ. ಶ್ರೀಕಂಠ್. ಅವರೆಲ್ಲಾ ಪಕ್ಕಾ ಪ್ರತಿಗಾಮಿಗಳು " ಎಂದ.

ಅವನಿಗೆ ಉತ್ತರ ಕೊಡಬೇಕೆಂಬು ಶ್ರೀಕಂಠ ಹವಣಿಸುತ್ತಿರುವಲ್ಲಿ, ಪ್ರಭಾದೇವಿ ಕಣ್ಸನ್ನೆ ಮಾಡಿ ಸುಮ್ಮನಿರಲು ಸೂಚಿಸಿದಳು.

" ಮೂರ್ತಿಗಳನ್ನು ಯಾವಾಗ ನಮಗೆ ತಲುಪಿಸುವಿರಿ ? "

" ಮೂರು ನಾಲ್ಕು ದಿವಸಗಳ ಕೆಲಸವಿದೆ. ಕೆಲಸವೆಲ್ಲಾ ಮುಗಿದ ಮೇಲೆ ಪ್ಲಾಸ್ಟರ್ ಒಣಗಲು ಮೂರು ನಾಲ್ಕು ದಿವಸ ಬಿಡುವುದು ಒಳ್ಳೆಯದು. ಇನ್ನು ಎಂಟು ದಿವಸಕ್ಕೆ ತಲುಪಿಸಬಲ್ಲೆ. "

" ಹಾಗೇ ಮಾಡಿ "

ಎಂದು ಸಹಸ್ರಬುದ್ಧೆ ಮೇಲಕ್ಕೆದ್ದ.

ಶ್ರೀಕಂಠ ವಿನಯದಿಂದ

" ಸ್ವಲ್ಪ ಚಹಾ ತೆಗೆದುಕೊಳ್ಳಿ " ಎಂದ.

" ಆಗಬಹುದು. ಬೇಗ ತರಿಸಿ "

ಎಂದು ಸಹಸ್ರಬುದ್ಧೆ ತನ್ನ ಸಹಜ ಗಡಸು ಧ್ವನಿಯಲ್ಲಿ ನುಡಿದ.

ರಾಜು ಓಡಿಹೋಗಿ ಚಹಾ, ಖಾರದ ಬಿಸ್ಕತ್ತುಗಳನ್ನು ಇರಾನಿ ಹೊಟೇಲ್ ಹುಡುಗನ ಕೈಯಲ್ಲಿ ತೆಗೆಸಿಕೊಂಡು ಬಂದ.

ಚಹಾ ಕುಡಿದ ಕೂಡಲೆ ಸಹಸ್ರಬುದ್ಧೆ ಎದ್ದು ನಿಂತ. ಫಡ್ಕೆ ಶ್ರೀಕಂಠನ ಬಳಿ ಬಂದು ಅವನ ಕೈಕುಲುಕಿ

"ನಿಮ್ಮ ಕೃತಿಗಳನ್ನು ನೋಡಿ ತುಂಬ ಸಂತೋಷವಾಯಿತು ಮಿ. ಶ್ರೀಕಂಠ ಪಾರ್ಟಿಗೆ ನಿಮ್ಮಿಂದ ತುಂಬ ಉಪಕಾರವಾಗಿದೆ. ನಿಮ್ಮ ಶಿಲ್ಪಗಳನ್ನು ನಾವು ಎಂಬಾಸೀಯ ಮೂಲಕ ರಷ್ಯಾಕ್ಕೆ ಕಳುಹಿಸಿ ಕೊಡುತ್ತೇವೆ. ಪ್ರಾಯಶಃ ನಿಮಗೆ ಅಲ್ಲಿಂದ ಕರೆ ಬರಬಹುದು. ನಿಮ್ಮಂಥ ಉತ್ತಮ ಕಲಾವಿದರು ನಮ್ಮ ಜತೆಯಲ್ಲಿರುವುದು ಒಳ್ಳೆಯದು."

"ನಿಮ್ಮ ಕೆಲಸ ಮಾಡಿಕೊಟ್ಟಿರುವೆನಲ್ಲಾ !"

"ಹೌದು. ಪಾರ್ಟಿಯ ಒಳಗೆ ನೀವು ಬರಬೇಕೆಂದು ನಮ್ಮ ಆಕಾಂಕ್ಷೆ."

"ಆ ವಿಷಯ ಯೋಚಿಸಿ ತಿಳಿಸುತ್ತೇನೆ. ನನಗೆ ಸ್ವಲ್ಪ ಕಾಲಾವಕಾಶ ಕೊಡಿ" ಎಂದ.

ಸಹಸ್ರಬುದ್ಧೆ, ಫಡ್ಕೆ ರಾಜೂ ಜತೆಯಲ್ಲಿ ಹಿಂದಿರುಗಿದರು.

ಪ್ರಭಾ ಮೆಲ್ಲನೆ ಶ್ರೀಕಂಠನ ಬಳಿ ಸರಿದು

"ಪಾರ್ಟಿ ಮುಖಂಡರ ಬಗ್ಗೆ ನಿಮ್ಮ ಅಭಿಪ್ರಾಯವೇನು ?" ಎಂದು ಕೇಳಿದಳು.

ಶ್ರೀಕಂಠ ಅನುಮಾನಿಸುತ್ತ

"ಫಡ್ಕೆ ಒಳ್ಳೆಯ ಮನುಷ್ಯರ ಹಾಗೆ ಕಾಣುತ್ತಾರೆ. ಸಹಸ್ರಬುದ್ಧೆ ಸ್ಟಾಲಿನ್ನರ ಮರಿ ಎಂದು ಭಾವಿಸಿಕೊಂಡಿರುವಂತಿದೆ."

"ಹೌದು. ಸಹಸ್ರಬುದ್ಧೆ ಕಂಡರೆ ಯಾರಿಗೂ ಆಗುವುದಿಲ್ಲ. ಆದರೆ ಎಲ್ಲರೂ ಅವರಿಗೆ ಹೆದರುತ್ತಾರೆ."

"ಕಾರಣವೇನು ?"

"ಭಾರತದಲ್ಲಿ ಪಾರ್ಟಿಯನ್ನು ಕಟ್ಟಿದವರರೇ ಅವರು. ಮಾಸ್ಕೋದಲ್ಲಿರುವ ಮಹಾನಾಯಕರಿಗೆ ಸಹಸ್ರಬುದ್ಧೆಯವರ ಮಾತಿನಲ್ಲಿ ತುಂಬ ಗೌರವ. ಅವರಿಗೆ ಪ್ರತಿಯಾಡಿ ಯಾರೂ ಬದುಕುವಂತೆಯೇ ಇಲ್ಲ. ವಿರೋಧಿಗಳನ್ನು ನಿರ್ದಾಕ್ಷಿಣ್ಯವಾಗಿ ನಾಶಮಾಡಲು ಸಹಸ್ರಬುದ್ಧೆ ಸ್ವಲ್ಪವೂ ಹಿಂದೆ ಮುಂದೆ ನೋಡುವುದಿಲ್ಲ."

"ಕಮ್ಯುನಿಸ್ಟರಿಗೆ ಮನಸ್ಸಾಕ್ಷಿಯ (Conscience) ಅಗತ್ಯವಿಲ್ಲವಷ್ಟೆ."

"ಹೋಗಲಿ ಏಳಿ — ಬೀಚಿಗಾದರೂ ಹೋಗಿ ಬರೋಣ"

ಎಂದು ಶ್ರೀಕಂಠನನ್ನು ಹೊರಡಿಸಿದಳು.

## ೭

ಕಮ್ಯುನಿಸ್ಟ್ ಪ್ರಚಾರ ವೈಖರಿಯಿಂದ ಅಭೂತ್ತ ಮೂಲೆಯಲ್ಲಿದ್ದ ಶ್ರೀಕಂಠನ ಹೆಸರು ಮನೆಮನೆಯಲ್ಲಿಯೂ ಪ್ರಸಾರವಾಯಿತು. 'ಪೀಪಲ್ಸ್ ವಾಯ್ಸ್' ಪತ್ರಿಕೆಯ ಮೊದಲನೆಯ, ಕೊನೆಯ ಪುಟಗಳಲ್ಲಿ ದೊಡ್ಡ ಪ್ರಮಾಣದ ಲೆನಿನ್, ಸ್ಟಾಲಿನ್ ಶಿಲ್ಪಚಿತ್ರಗಳು ಪ್ರಕಟವಾಗಿದ್ದವು. ರಾಜೂ ತಿಳಿಸಿದ್ದ ವಿಷಯುಗಳ ಆಧಾರದ ಮೇಲೆ ಪತ್ರಿಕೆಯ ಕಲಾವಿಮರ್ಶಕರಾದ ಜೈಸಿಂಗ್ ದೊಡ್ಡ ಲೇಖನ ಬರೆದು ಶ್ರೀಕಂಠನನ್ನು 'ಅತ್ಯುತ್ಕೃಷ್ಟ ಜನಪದ ಶಿಲ್ಪಿ' ಎಂದು ಕರೆದಿದ್ದರು. ಪ್ರಾಚೀನ ಸಾಂಪ್ರದಾಯದಲ್ಲಿ ಬೆಳೆದು ಬಂದಿದ್ದ ಶಿಲ್ಪಿಗಳಾದ ಕಾಮ್ರೇಡ ಶ್ರೀಕಂಠ ಅವರು, ಪ್ರಾಚೀನತೆಯ ಪ್ರತಿಗಾಮಿಮಾರ್ಗ ನಿರಾಕರಿಸಿ ಪ್ರಗತಿಮಾರ್ಗಕ್ಕೆ ಬಂದಿರುವುದಾಗಿಯೂ, ಲೆನಿನ್ನರ ಉಪದೇಶದಿಂದ ಸ್ಫೂರ್ತಿ ಪಡೆದು ತಮ್ಮ ಶಿಲ್ಪ ಸಿದ್ಧಾಂತವನ್ನು ಮಾರ್ಪಡಿಸಿಕೊಂಡಿರುವುದಾಗಿಯೂ, ಕಮ್ಯುನಿಸಂನಿಂದಲೇ ಭಾರತದ ಮುಕ್ತಿಯೆಂದು ನಂಬಿರುವುದಾಗಿಯೂ ಲೇಖನದಲ್ಲಿ ಕಾಣಿಸಲಾಗಿತ್ತು.

ಲೇಖನ ನೋಡಿದ ಕೂಡಲೆ ಶ್ರೀಕಂಠ ಕಿಡಿಕಿಡಿಯಾದ. ರಾಜೂ ಕಡೆ ತಿರುಗಿ

"ಕಮ್ಯುನಿಸ್ಟರ ಹಾಗೆ ನಾಚಿಕೆಬಿಟ್ಟು ಸುಳ್ಳು ಹೇಳುವವರನ್ನು ನಾನೆಲ್ಲಿಯೂ ನೋಡಲಿಲ್ಲ ರಾಜು" ಎಂದ.

"ಏಕೆ ಶ್ರೀಕಂಠ – ಲೇಖನದಲ್ಲಿ ಸುಳ್ಳು ಯಾವದು ?"

"ಯಾವದೇ ? ೧) ನಾನು ಅತ್ಯುತ್ಕೃಷ್ಟ ಜನಪದ ಶಿಲ್ಪಿಯಲ್ಲ ೨) ನಾನು ಪ್ರಾಚೀನ ಮಾರ್ಗವನ್ನು ನಿರಾಕರಿಸಿಲ್ಲ. ೩) ಲೆನಿನ್ನರ ಉಪದೇಶದಿಂದ ಕಿಂಚಿತ್ತಾದ ಸ್ಫೂರ್ತಿಯನ್ನೂ ಪಡೆದಿಲ್ಲ. ೪) ನನ್ನ ಶಿಲ್ಪ ಸಿದ್ಧಾಂತವನ್ನು ಲೆನಿನ್ನರ ವಿಚಾರಕ್ಕನುಗುಣವಾಗಿ ಮಾರ್ಪಾಟು ಮಾಡಿಕೊಂಡಿಲ್ಲ. ೫) ಕಮ್ಯುನಿಸಂನಿಂದ ಭಾರತದ ಮುಕ್ತಿ ಎಂದು ನಂಬಿಲ್ಲ. – ಎಲ್ಲಕ್ಕೂ ಹೆಚ್ಚಾಗಿ ಈ ಬಗೆಯ ಪ್ರಚಾರವನ್ನು ನಾನು ಬಯಸಲಿಲ್ಲ. ನೀನು ಕೇಳಿದುದಕ್ಕಾಗಿ ನಾನು ಲೆನಿನ್, ಸ್ಟಾಲಿನ್ನರ ಮೂರ್ತಿಗಳನ್ನು ಮಾಡಿಕೊಟ್ಟೆನೇ ವಿನಾ ನಿಮ್ಮ ಪಾರ್ಟಿಯ ಮೇಲಣ ಅಭಿಮಾನದಿಂದಲೂ ಅಲ್ಲ - ಕಮ್ಯುನಿಸಂ ಬಗ್ಗೆ ಪ್ರೇಮ

ದಿಂದಲೂ ಅಲ್ಲ. "

"ಸರಿ – ಈಗೇನು ಮಾಡಬೇಕೆಂದಿರುವೆ ?"

"ಜೈಸಿಂಗರ ಲೇಖನಕ್ಕೆ ಉತ್ತರ ಬರೆದು ಕಳಿಸಬೇಕೆಂದಿದ್ದೇನೆ."

"ನಿನ್ನ ಉತ್ತರ 'ಪೀಪಲ್ಸ್ ವಾಯ್ಸ್' ನಲ್ಲಿ ಪ್ರಕಟವಾಗುವದಿಲ್ಲ."

"ಬೇರೆ ಪತ್ರಿಕೆಗೆ ಕಳಿಸುತ್ತೇನೆ."

"ಪರಿಣಾಮವೇನಾಗುತ್ತದೆ ಗೊತ್ತೋ ?"

"ಏನಾಗುತ್ತದೆ ?"

"ಕಮ್ಯುನಿಸ್ಟರು ನಿನ್ನನ್ನು ಹತ್ತಿರ ಸೇರಿಸುವುದಿಲ್ಲ – ನಿನ್ನನ್ನು ನಾಮಾವಶೇಷಮಾಡಲು ಯತ್ನಿಸುತ್ತಾರೆ."

"ಚಿಂತೆಯಿಲ್ಲ. ಭಾರತವೆಲ್ಲಾ ಇನ್ನೂ ಕಮ್ಯುನಿಸ್ಟಮಯವಾಗಿಲ್ಲವಲ್ಲ !"

"ಉಳಿದವರೂ ನಿನ್ನನ್ನು ಹತ್ತಿರ ಸೇರಿಸುವುದಿಲ್ಲ."

"ಏಕೆ ?"

"ನೀನು ಕಮ್ಯುನಿಸ್ಟ್ ಪಾರ್ಟಿಯಲ್ಲಿದ್ದವನೆಂದು. ಕಮ್ಯುನಿಸಂ ಸೋಂಕನ್ನು ಮೃತ್ಯುವಲ್ಲದೆ ಬೇರೆ ಯಾವದೂ ನಿವಾರಿಸಲಾರದು."

"ಒಳ್ಳೆಯ ಗ್ರಹಚಾರ ತಂದಿಟ್ಟೆಯಲ್ಲ ರಾಜೂ. ಈಗೇನು ಮಾಡಲಿ ಹೇಳು."

"ಮೌನವಾಗಿದ್ದು ಬಿಡುವುದೇ ಲೇಸು."

"ಕಮ್ಯುನಿಸ್ಟರು ಇಷ್ಟು ನೀಚರೆಂದು ನನಗೆ ಗೊತ್ತಿರಲಿಲ್ಲ."

"ನಾನೂ ಕಮ್ಯುನಿಸ್ಟೇ !"

"ಈ ಪಾರ್ಟಿ ನಿನ್ನ ಸಹಜ ಸ್ವಭಾವವನ್ನು ನಾಶಮಾಡುತ್ತಿದೆ ರಾಜೂ."

"ಶ್ರೀಕಂಠ, ಪಾರ್ಟಿಯ ಬಗ್ಗೆ ಅಪಶಬ್ದ ಕೇಳಲು ನನಗೆ ಇಚ್ಛೆಯಿಲ್ಲ."

"ಪಾರ್ಟಿಗಾಗಿ ನನ್ನ ಸ್ನೇಹ ತೊರೆಯಲು ಸಿದ್ಧವಾಗಿರುವೆಯಾ ?"

"ನಿನ್ನ ಸ್ನೇಹ ತೊರೆಯುವುದರಿಂದ ಪಾರ್ಟಿಗೆ ಅನುಕೂಲವಾಗುವ ಹಾಗಿದ್ದರೆ ಅದಕ್ಕೂ ಸಿದ್ಧವಾಗಿದ್ದೇನೆ."

"ರಾಜೂ.........ರಾಜೂ........"

ರಾಜೂ ಅಲ್ಲಿ ನಿಲ್ಲದೆ ಎದ್ದು ಹೊರಟು ಹೋದ.

ಶ್ರೀಕಂಠನ ತಲೆಯ ಮೇಲೆ ಆಕಾಶವೇ ಕಳಚಿ ಬಿದ್ದಂತಾಯಿತು. ತನ್ನ ರಾಜುವಿನ ಸ್ನೇಹ ಈ ರೀತಿ ಕೊನೆಗಾಣುವಂತಾಯಿತೇ ಎಂದು ವ್ಯಥೆಪಟ್ಟ. ಪ್ರಿಯವಸ್ತುವೊಂದನ್ನು ಕಳೆದುಕೊಂಡಂತೆ ಹಲುಬಿದ.

ಶ್ರೀಕಂಠನನ್ನು ಸಂತೈಸುವ ಭಾರ ಪ್ರಭಾದೇವಿ ಹೊತ್ತುಕೊಳ್ಳಬೇಕಾಯಿತು. ರಾಜುವಿಗೆ ವಿವೇಕ ಹೇಳಿ ಅವನನ್ನು ಕರೆತರುವ ಆಶ್ವಾಸನವಿತ್ತು ಪ್ರಭಾ ಶ್ರೀಕಂಠನ ಮನಸ್ಸಿನ ದುಗುಡ ಪರಿಹರಿಸಿದಳು.

ಕಮ್ಯುನಿಸಂ ಹಾಗೂ ಅದರ ಪಾರ್ಟಿ ಮಾನವನ ಸಹಜಗುಣಗಳನ್ನು ನೆಲಸಮಮಾಡಿ, ಅವನಲ್ಲಿ ಯಾವದೋ ಅವ್ಯಕ್ತ ತತ್ವಾಭಿಮಾನವನ್ನೂ ಅಸಹನೆ, ಅಸಂತೋಷಗಳನ್ನೂ ಮೂಡಿಸುತ್ತದೆ ಎನ್ನುವ ಶ್ರೀಕಂಠನ ಅಭಿಪ್ರಾಯ ದೃಢಪಟ್ಟಿತು.

ಮಾರನೆಯ ದಿನ ರಾಜು ಬರಲು ಶ್ರೀಕಂಠನ ಮನಸ್ಸು ಹಗುರವಾಯಿತು. ಗೆಳೆಯರು ಒಬ್ಬರನ್ನೊಬ್ಬರು ಅಪ್ಪಿಕೊಂಡು ಮಕ್ಕಳಂತೆ ಅತ್ತರು. ತಾನು ದುಡುಕಿ ಆಡಿದ ಮಾತನ್ನು ಮರೆಯಬೇಕೆಂದು ರಾಜು ಪ್ರಾರ್ಥಿಸಿಕೊಂಡ.

"ಈ ಅಲ್ಪ ವಿಷಯಕ್ಕಾಗಿ ನೀನು ಕ್ಷಮೆ ಕೇಳಬೇಕಾಗಿಲ್ಲ ರಾಜು. ಈ ಪಾರ್ಟಿ ನಿನ್ನ ಅಂತಃಕರಣದ ಮೇಲೆ ಬೀರುತ್ತಿರುವ ದುಷ್ಪರಿಣಾಮಕ್ಕಾಗಿ ನಾನು ಪರಿತಾಪಪಡುತ್ತಿದ್ದೇನೆ."

"ವ್ಯಾಘ್ರನ ಕೈಗೆ ಸಿಕ್ಕಿಕೊಂಡದ್ದಾಗಿದೆ. ಜೋಪಾನವಾಗಿ ಬಿಡಿಸಿಕೊಳ್ಳಬೇಕು. ಅವಸರಪಟ್ಟರೆ ವ್ಯೆಕ್ಕೈ ಹರಿದುಹೋಗುತ್ತದೆ."

"ಹೋಗಲಿ – ಆ ವಿಷಯ ಬಿಟ್ಟು ಬೇರೆ ಏನಾದರೂ ಮಾತನಾಡು."

"ನಿನಗೊಂದು ವಿಶೇಷ ಸುದ್ದಿ ಹೇಳಲು ಬಂದಿದ್ದೇನೆ."

"ಏನದು?"

"ಒಂದು ದೊಡ್ಡ ಆರ್ಡರ್ – ಲೈಫ್ ಸೈಜ್ (Life Size) ಮೂರ್ತಿಯೊಂದನ್ನು ಮಾಡಿಕೊಡಬೇಕು."

"ಲೆನಿನ್ ಸ್ಟಾಲಿನ್ನರದಲ್ಲವಷ್ಟೆ!"

"ಅಲ್ಲ ಮಾರಾಯಾ - ಸರ್ ಜರೀವಾಲಾ ಅವರದು."

"ಅವರು ಯಾರು?"

"ಜರೀವಾಲಾ ಯಾರು ಎಂದು ಕೇಳುವೆಯಲ್ಲ. ಅವರು ಈ ಊರಿನ ಪ್ರಸಿದ್ಧ ಶ್ರೀಮಂತರು. ಲಕ್ಷಾಂತರ ರೂಪಾಯಿಗಳನ್ನು ಸಾರ್ವಜನಿಕ ಸಂಸ್ಥೆಗಳಿಗೆ ದಾನವಾಗಿ ಕೊಟ್ಟಿದ್ದಾರೆ. ಅವರದು ದಾನದ ಸಲುವಾಗಿಯೇ 'ಜರೀವಾಲಾ ಚ್ಯಾರಿಟೀಸ್' (Jariwala Charitics) ಸಂಸ್ಥೆಯಿದೆ. ಅದರ ನೆರಳಿನಿಂದ ಸಹಸ್ರಾರು ಜನ ಬದುಕಿಹೋಗಿದ್ದಾರೆ. ಈಚೆಗೆ ಅವರು ಮಾಲಾಡಿನಲ್ಲಿ ಒಂದು 'ಪತಿತಾಶ್ರಮ, ತೆಗೆದು ಅದಕ್ಕೆ ಹದಿನಾಲ್ಕು ಲಕ್ಷ ರೂಪಾಯಿಗಳನ್ನಿತ್ತಿದ್ದಾರೆ. ಆಶ್ರಮದ ಕಟ್ಟಡ ಮುಗಿಯುತ್ತ ಬಂದಿದೆ. ನಾಲ್ಕೈದು ತಿಂಗಳಲ್ಲಿ ಆರಂಭೋತ್ಸವ ಇಟ್ಟುಕೊಳ್ಳಬೇಕೆಂದಿದ್ದಾರೆ. ಆ ಕಾಲಕ್ಕೆ ಆಶ್ರಮದ ಮುಂದೆ ಸರ್ ಜರೀವಾಲರ ದೇಹ ಪ್ರಮಾಣ ಮೂರ್ತಿಯನ್ನು ಕಂಚಿನಲ್ಲೋ ಅಮೃತಶಿಲೆಯಲ್ಲಿಯೋ ಕಡೆಯಿಸಿ ಸ್ಥಾಪಿಸಬೇಕೆಂದಿದ್ದಾರೆ."

"ಆಗಬಹುದು. ದುಡ್ಡೇನಾದರೂ ಬರುವ ಸಂಭವವಿದೆಯೋ ?"

"ಇಪ್ಪತ್ತು ಸಾವಿರ ರೂಪಾಯಿ ಕೊಡಿಸಿದರೆ ಸಾಕೋ ?"

"ನೀನು ಹಾಸ್ಯ ಮಾಡುತ್ತಿದ್ದೀ ರಾಜೂ."

"ನಾಳೆ ಬೆಳಿಗ್ಗೆ ಹತ್ತು ಗಂಟೆಗೆ ಭೇಟಿ ನಿಶ್ಚಯಿಸಿಕೊಂಡು ಬಂದಿದ್ದೇನೆ. ಶಿಲ್ಪ ಮಾಡುವುದಕ್ಕೆ ಆರ್ಡರೂ, ಮುಂಗಡ ಹಣ ಎರಡೂ ನಾಳೆ ನಿನ್ನ ಕೈಸೇರವುದು."

"ಮುಂಬಯಿ ತುಂಬ ಶಿಲ್ಪಿಗಳಿರುವಾಗ - ನನಗಿಂತಲೂ ಪ್ರಸಿದ್ಧರು ಇಂಗ್ಲೆಂಡ, ಫ್ರಾನ್ಸ್ ಇಟಲಿ ದೇಶಗಳಿಗೆ ಹೋಗಿ ಶಿಕ್ಷಣ ಪಡೆದು ಬಂದವರು- ನನಗೆ ಆರ್ಡರು ಹೇಗೆ ಸಿಕ್ಕುತ್ತದೆ ರಾಜೂ. ನೀನೆಲ್ಲೋ ಕನಸು ಕಾಣುತ್ತಿರುವೆ."

"ಇದರ ರಹಸ್ಯ ಹೇಳಿದರೆ ನೀನು ಅಸಮಾಧಾನಗೊಳ್ಳುವೆಯೇನೋ ?"

"ಇಲ್ಲಪ್ಪ - ಹೇಳು."

"ಜರೀವಾಲಾ ಅವರಿಗೆ ಒಬ್ಬಳೇ ಮಗಳು ತಾಜ್. ತಂದೆಯ ವಹಿವಾಟವನ್ನೆಲ್ಲಾ ಅವಳೇ ನೋಡಿಕೊಳ್ಳುತ್ತಾಳೆ. ತಾಜ್ ತುಂಬ ಸುಸಂಸ್ಕೃತೆ- ತಂದೆಯ ಜತೆ ಹಲವು ಬಾರಿ ವಿಲಾಯತಿ ಯಾತ್ರೆ ಮಾಡಿಬಂದಿದ್ದಾಳೆ. 'ಪೀಪಲ್ಸ್ ವಾಯ್ಸ್' ನಲ್ಲಿ ಪ್ರಕಟವಾದ ನಿನ್ನ ಎರಡು ಶಿಲ್ಪ ಚಿತ್ರಗಳು ಅವಳ ಗಮನ ಸೆಳೆದವು. ಬೇರೊಂದು ಕಂಪೆನಿಗೆ ತಂದೆಯ ಮೂರ್ತಿ ನಿರ್ಮಿ

ಸುವ ಕೆಲಸ ಒಪ್ಪಿಸಬೇಕೆಂದಿದ್ದವಳು ಮನಸ್ಸು ಬದಲಾಯಿಸಿ ನಿನಗೆ ಆ ಕೆಲಸ ಒಪ್ಪಿಸಲು ನಿರ್ಧರಿಸಿದಳು."

"ಕೋಟ್ಯಾಧೀಶ್ವರನ ಮಗಳು ಕಮ್ಯುನಿಸ್ಟ್ ಪತ್ರಿಕೆ 'ಪೀಪಲ್ಸ ವಾಯ್ಸ್' ಓದುತ್ತಾಳೆಯೇ ?"

"ಅದೇ ರಹಸ್ಯ - ನಮ್ಮಿಬ್ಬರಲ್ಲಿಯೇ ಇರಲಿ - ತಾಜ್‌ಗೆ ನಮ್ಮ ಪಾರ್ಟಿಯ ಬಗ್ಗೆ ಸಹಾನುಭೂತಿಯಿದೆ (Party sympathiser) ಪಾರ್ಟಿಗಾಗಿ ಆಕೆ ಲಕ್ಷಾಂತರ ರೂಪಾಯಿ ಹಣ ಕೊಟ್ಟಿದ್ದಾಳೆ."

"ಇಂಥ ವಿಚಿತ್ರ ಸುದ್ದಿ ನಾನು ಕೇಳಿಯೇ ಇಲ್ಲ ರಾಜೂ – ತಾಜ್ ಶ್ರೀಮಂತಿನಿ - ಬಂಡವಾಳಗಾರಳು - ಬುಜ್ವಾ ವರ್ಗಕ್ಕೆ ಸೇರಿದವಳು – ಅವಳು ಕಮ್ಯುನಿಸ್ಟ್ ಪಾರ್ಟಿಯ - ಸಿಂಪತೈಜರ್ - ಪಾರ್ಟಿಗಾಗಿ ಲಕ್ಷಾಂತರ ರೂಪಾಯಿ ಕೊಟ್ಟಿದ್ದಾಳೆ. ಹಾಗಾದರೆ ನಿಮ್ಮ ಪಾರ್ಟಿಯನ್ನು ನಡೆಸುತ್ತಿರುವವರು ಬಂಡವಾಳಗಾರರೇನು ?"

"ಅಲ್ಲ. ಕೆಲವು ಬಂಡವಾಳಗಾರರ ಸಹಾಯ ಆಗಾಗ್ಗೆ ದೊರಕುತ್ತದೆ.....ನಾಳೆ ಬೆಳಿಗ್ಗೆ ಒಂಬತ್ತು ಗಂಟೆಗೆ ನೀನು - ಸಿದ್ಧವಾಗಿದ್ದರೆ ನಾನು ಬಂದು ಕರೆದುಕೊಂಡು ಹೋಗುತ್ತೇನೆ."

ಅರೆ ಮೂಕನಂತಾಗಿದ್ದ ಶ್ರೀಕಂಠ ಆಗಲೆಂದು ಒಪ್ಪಿಕೊಂಡ.

ಶ್ರೀಕಂಠ ಜರೀವಾಲಾ ಅವರ ಮೂರ್ತಿ ಮಾಡುವ ವಿಷಯ ಕೇಳಿದ ಪ್ರಭಾದೇವಿ ಯಾವ ಭಾವವನ್ನು ವ್ಯಕ್ತಮಾಡಲಿಲ್ಲ. ಶ್ರೀಕಂಠ ನಿರುತ್ಸಾಹಿಯಾಗಬಾರದೆಂದು 'ಒಳ್ಳೆಯ ಆರ್ಡರು. ಕೈತುಂಬ ಹಣ ಬರುತ್ತದೆ. ಒಪ್ಪಿಕೊಳ್ಳಿ' ಎಂದು ಸೂಚಿಸಿದಳು.

"ಪ್ರಭಾದೇವಿಯ ಮನಸ್ಸಿನ ಶಾಂತಿಗೆ ಭಂಗ ಬಂದಿತ್ತು. ಯಾವದೋ ಭಯ ಅವಳ ಚಿತ್ತಸ್ಥೈರ್ಯವನ್ನು ಹಿಡಿದಲುಗಿಸಿತ್ತು. ತನ್ನ ಮಾನಸಿಕ ವೇದನೆಯನ್ನು ತೋರಗೊಡದೆ ಅದರ ಮೇಲೆ ಮುಗುಳ್ನಗೆಯ ಅವಕುಂಠನ ಹಾಕಿದಳು.

ಮಾರನೆಯ ದಿನ ಒಂಭತ್ತು ಗಂಟೆಗೇ ರಾಜು ಟ್ಯಾಕ್ಸಿ ತೆಗೆದುಕೊಂಡು ಶ್ರೀಕಂಠನ ಮನೆಗೆ ಬಂದ. ಶ್ರೀಕಂಠ ಕಾಲುಗಂಟೆಯಲ್ಲಿ ಸಿದ್ಧನಾಗಿ ಹೊರಡಲನುವಾದ.

ಟ್ಯಾಕ್ಸಿ ಇಬ್ಬರನ್ನೂ ಮಲಬಾರ್ ಹಿಲ್ ಮೇಲಿದ್ದ ಭವ್ಯವಾದ 'ಜರೀವಾಲಾ ಮ್ಯಾನ್‌ಷನ್ಸ್ ಗೆ' (Jarivala Mansions) ಕರೆತಂದಿತು. ವಿಶಾಲವಾದ ಕಾಂಪೌಂಡಿನಲ್ಲಿ ಮನಮೋಹಕವಾದ ಉದ್ಯಾನವನ ವಿರಾಜಿಸುತ್ತಿತ್ತು. ಮನೆಯ ಮುಂದೆ ವಿಶಾಲವಾದ ಹಸಿರುಹಾಸು.

ಜರೀವಾಲಾ ಅವರ ಮನೆ ಒಂದು ಅರಮನೆಯಾಗಿತ್ತು. ಮನೆಯ ಸಿಂಗಾರ, ರೂಮುಗಳ ಅಲಂಕಾರ, ನೆಲಕ್ಕೆ ಹಾಸಿದ್ದ ಅಪ್ರತಿಮ ಶಿಲೆ ಕಣ್ಣು ಕೋರೈಸುತ್ತಿದ್ದವು. ತಲೆಯಿಂದ ಕಾಲಿನ ವರೆಗೆ ಸಮವಸ್ತ್ರ ಧರಿಸಿದ್ದ ಒಬ್ಬ ಆಳು ಅತಿಥಿಗಳಿಗೆ ಸ್ವಾಗತ ಬಯಸಿ ಅವರನ್ನು ವೆರಾಂಡದ ಪಕ್ಕದಲ್ಲಿದ್ದ ಒಂದು ರೂಮಿನಲ್ಲಿ ಕುಳ್ಳಿರಿಸಿ, ರಾಜು ಕೊಟ್ಟ ಭೇಟಿ ಚೀಟಿ ( Visiting Card) ತೆಗೆದುಕೊಂಡು ಹೋದ.

ಹತ್ತು ಗಂಟೆ ಹೊಡೆಯುತ್ತಿರುವಂತೆ ಅದೇ ಆಳು ಹಿಂದಿರುಗಿ ಅತಿಥಿಗಳನ್ನು ಮಹಡಿಯ ಮೇಲೆ ಕರೆದೊಯ್ದ.

ಮಹಡಿಯ ಮೇಲಿದ್ದ ವೈಭವ ನೋಡಿ ಶ್ರೀಕಂಠ ಅವಾಕ್ಕಾದ. ಮಹಡಿಯ ಮೇಲಣ ದೊಡ್ಡ ಹಜಾರದ ನೆಲದ ಮೇಲೆ ಪರ್ಶಿಯಾ ರತ್ನಗಂಬಳಿಗಳು. ಗೋಡೆಗಳ ಮೇಲೆ ಇಂಗ್ಲೆಂಡ್, ಫ್ರಾನ್ಸ್, ಇಟಲಿಯ ತೈಲಚಿತ್ರಗಳು. ಅಲ್ಲಲ್ಲಿ ಸೊಗಸಾದ ಗ್ರೀಕ್ ಶಿಲ್ಪಗಳು.

ಹಜಾರದಲ್ಲಿ ಅತಿಥಿಗಳು ಕುಳಿತ ಒಂದೆರಡು ನಿಮಿಷಗಳಲ್ಲಿ ತಾಜ್ ಬಂದಳು. ಪರಿಚಯದ ಕೆಲಸ ಮುಗಿದ ಮೇಲೆ ತಾಜ್ ನಸುನಗುತ್ತಾ

"ನಿಮ್ಮ ಶಿಲ್ಪತಂತ್ರ ನನ್ನ ಮನಸ್ಸಿಗೆ ತುಂಬ ಹಿಡಿಸಿತು. ನಿಮ್ಮ ಕೈಯಲ್ಲಿಯೇ ನನ್ನ ಪೂಜ್ಯ ತಂದೆಯವರ ಶಿಲ್ಪ ಮಾಡಿಸಲು ನಿರ್ಧರಿಸಿದ್ದೇನೆ"

ಎಂದಳು. ಶ್ರೀಕಂಠ 'ತುಂಬ ಕೃತಜ್ಞನಾಗಿದ್ದೇನೆ' ಎಂದು ನುಡಿದ.

ಸಮವಸ್ತ್ರ ಧರಿಸಿದ್ದ ಇನ್ನೊಬ್ಬ ಆಳು ಚಹಾ ಟ್ರೇ, ಬಿಸ್ಕತ್ತು, ಕೇಕ್ಸ್ ತಂದು 'ಟೀಪಾಯ್' ಮೇಲಿಟ್ಟ. ತಾಜಳೇ ಕಪ್ಪುಗಳಿಗೆ ಚಹಾ ಬಗ್ಗಿಸಿ ಅತಿಥಿಗಳ ಕೈಗಿತ್ತಳು.

ಉಪಹಾರ ಮುಗಿದ ಮೇಲೆ ತಾಜ್

"ತಂದೆಯವರ ಶಿಲ್ಪ ಜೀವಪ್ರಮಾಣದ್ದಾಗಿರಬೇಕು."

"ಆಗಬಹುದು."

" ಮಾಡೆಲ್ ಎಷ್ಟು ದಿವಸಗಳಲ್ಲಿ ಸಿದ್ಧ ಮಾಡಲು ಸಾಧ್ಯ ? "

" ಸರ್ ಜರೀವಾಲಾ ಅವರನ್ನು ನಾನು ನೋಡಿಯೇ ಇಲ್ಲವಲ್ಲ. "

" ಅವರ ನೂರಾರು ಭಾವಚಿತ್ರಗಳಿವೆ. ಆಲ್ಬಮ್ (Album) ಗಳನ್ನು ಕೊಡುತ್ತೇನೆ. ಅದನ್ನು ನೋಡಿಕೊಂಡು ಮಾಡೆಲ್ (Model) ಸಿದ್ಧಪಡಿಸಿ."

" ಆಗಬಹುದು. ಸರ್ ಸಾಹೇಬರು ಸದ್ಯದಲ್ಲಿಯೇ ಬರುವ ಸಂಭವ ವಿಲ್ಲವೇ ? "

" ಇಲ್ಲ – ಈಗ ಸ್ವಿಟ್ಜರ್ಲೆಂಡಿನಲ್ಲಿದ್ದಾರೆ. ಮುಂದೆ ಬ್ಯೂರಾಪೆಸ್ಟ್, ಪ್ರಾನ್ಸ್, ವಿಯನ್ನಾ, ನ್ಯೂಯಾರ್ಕ್, ಪ್ಯಾರಿ, ಲಂಡನ್‌ಗಳಿಗೆ ಅವರು ಹೋಗಿ ಬರುತ್ತಾರೆ. ಆರೇಳು ತಿಂಗಳು ಅವರು ಹಿಂದಿರುಗುವ ಸಂಭವವಿಲ್ಲ. ಅವರನ್ನು ನೋಡದೆಯೇ ಶಿಲ್ಪ ರಚಿಸಲು ಸಾಧ್ಯವಿಲ್ಲವೇ ? "

" ಸಾಧ್ಯವಿದೆ. ಒಂದು ಬೆರಳಿನ ಪ್ರಮಾಣ ಮಾತ್ರದಿಂದಲೇ ಇಡಿಯ ಮೂರ್ತಿಯನ್ನು ರಚಿಸಬಹುದೆಂದು ನಮ್ಮ ಶಾಸ್ತ್ರಗ್ರಂಥಗಳು ಹೇಳಿವೆ. ಎದೆಯ ವರೆಗೆ ಮೂರ್ತಿ ಕಡೆಯುವುದು ಕಷ್ಟವಾಗುವುದಿಲ್ಲ. ಎದೆಯ ಕೆಳಭಾಗ ಕಡೆಯಬೇಕಾದರೆ ಪ್ರಮಾಣಗಳು ಸರಿಯಾಗಿ ತಿಳಿದಿರಬೇಕು. "

" ನಾನು ಎಲ್ಲ ವಿವರಗಳನ್ನೂ ಒದಗಿಸುತ್ತೇನೆ. ತಂದೆಯವರು ನಿಂತಿರುವ, ಕುಳಿತಿರುವ, ನಡೆಯುತ್ತಿರುವ ಭಾವಚಿತ್ರಗಳಿವೆ. ಉಳಿದ ವಿಷಯಗಳ ಬಗ್ಗೆ ನಿಮಗೆ ಬೇಕಾಗುವ ಎಲ್ಲಾ ವಿವರಗಳನ್ನು ನಾನು ಒದಗಿಸುತ್ತೇನೆ. "

" ಹಾಗೇ ಆಗಲಿ. ಮಾಡೆಲ್ ರಚಿಸಿಕೊಡುತ್ತೇನೆ. ಅದನ್ನು ನೀವು ನೋಡಿ ಸುಧಾರಣೆಗಳನ್ನು ಸೂಚಿಸಿದರೆ ಮೂರ್ತಿ ರಚನೆ ಆರಂಭಿಸುತ್ತೇನೆ. "

" ಇನ್ನೊಂದು ಮಾತು ಮಿ. ಶ್ರೀಕಾಂತ್. ತಂದೆಯವರು ಊರಿಗೆ ಹಿಂದಿರುಗುವಷ್ಟರಲ್ಲಿ ಶಿಲ್ಪಸ್ಥಾಪನೆ ಮಾಡಿಸಿ ಬಿಡಬೇಕೆಂದು ನನ್ನ ಇಚ್ಛೆ. ಅವರು ಬಂದುಬಿಟ್ಟರೆ ಇದಕ್ಕೆ ಅವಕಾಶ ಕೊಡುವುದಿಲ್ಲ. ನೀವು ಇದೇ ಕೆಲಸ ವನ್ನು ಮನಸ್ಸುಗೊಟ್ಟು ಮಾಡಿ, ಬೇಗ ಪೂರೈಸಿ ಕೊಡಬೇಕು. "

" ಆ ಬಗ್ಗೆ ನೀವು ಯೋಚನೆ ಮಾಡಬೇಕಾಗಿಲ್ಲ ಮಿಸ್. ತಾಜ್. ಕೆಲಸಕ್ಕೆ ಕುಳಿತರೆ ಶ್ರೀಕಂಠನಿಗೆ ದೈತ್ಯಶಕ್ತಿ ಬರುತ್ತದೆ. ನೀವು ನಿರೀಕ್ಷಿಸಿದುದಕ್ಕಿಂತ ಮುಂಚೆಯೇ ಅವನು ಶಿಲ್ಪ ಮುಗಿಸಿಕೊಡುತ್ತಾನೆ. "

" ತುಂಬ ಸಂತೋಷ "

ಎಂದೆದ್ದು ಹೋಗಿ ತಾಜ್ ಕೆಲವು ಆಲ್ಬಮ್‌ಗಳನ್ನು ತಂದು ಶ್ರೀಕಂಠನ ಕೈಗಿತ್ತು, ಅವನ ಹೆಸರಿಗೆ ಐದು ಸಾವಿರ ರೂಪಾಯಿಗಳಿಗೆ ಒಂದು ಚೆಕ್ ಬರೆದುಕೊಟ್ಟಳು.

" ಹಣಕ್ಕೇನೂ ಅವಸರವಿಲ್ಲ ಮಿಸ್ ತಾಜ್."

" ನೀವು ನೆಮ್ಮದಿಯಿಂದ ಕೆಲಸ ಮಾಡಬೇಕು. ಮನಸ್ಸಿನಲ್ಲಿ ಯಾವ ಚಿಂತೆಯೂ ಇರಬಾರದು."

ಶ್ರೀಕಂಠನ ಆನಂದಕ್ಕೆ ಪಾರವೇ ಇರಲಿಲ್ಲ. ಮುಂಬಯಿಯೇ ಬೆಕ್ಕಸ ಬೆರಗಾಗುವಂತಹ ಶಿಲ್ಪವನ್ನು ಮಾಡಬೇಕೆಂದು ಮನಸ್ಸಿನಲ್ಲಿಯೇ ನಿರ್ಧರಿಸಿ ಕೊಂಡ.

ಗೆಳೆಯರು ತಾಜಳ ಅಪ್ಪಣೆ ಪಡೆದು ಹೊರಟರು. ಶ್ರೀಕಂಠನನ್ನು ಅವನ ಮನೆಯ ಬಳಿ ಬಿಟ್ಟು ರಾಜೂ ಹೊರಟು ಹೋದ.

ಶ್ರೀಕಂಠ ಮನೆಗೆ ಬಂದವನೇ ಆಲ್ಬಮ್ಮಿನಲ್ಲಿದ್ದ ಚಿತ್ರಗಳನ್ನು ಪರಾಮ ರ್ಶಿಸುತ್ತ ತನಗೆ ಬೇಕಾದ ಕೆಲವು ಗುರುತುಗಳನ್ನು ಮಾಡಿಕೊಂಡ. ಜರೀ ವಾಲಾ ಅವರ ದೇಹರಚನೆಯ ವಿನ್ಯಾಸವನ್ನು ಕಾಗದದ ಮೇಲೆ ಗುರುತು ಹಾಕಿದ.

೮

ಒಂದು ಅಡಿ ಪ್ರಮಾಣದಲ್ಲಿ ಶ್ರೀಕಂಠ ಪೂರ್ವಶಿಲ್ಪ (Model) ಸಿದ್ಧ ಗೊಳಿಸಿ 'ಜರಿವಾಲಾ ಮಾನಷನ್ಸ್'ಗೆ ಕಳಿಸಿಕೊಟ್ಟಿದ್ದ ಒಂದು ವಾರದ ತರು ವಾಯ ಅದನ್ನು ಹಿಂದಕ್ಕೆ ತಂದೊಪ್ಪಿಸಿದ ಕಾರಕೂನ ಬರೋಚಾ.

"ಮಾಡೆಲ್ ಸಮರ್ಪಕವಾಗಿದೆ ಎಂದು ತಿಳಿಸಲು ಮಿಸ. ತಾಜ್ ಹೇಳಿ ದರು. ಕೆಲಸ ನೀವು ಆರಂಭಿಸಬಹುದಂತೆ" ಎಂದು ಹೇಳಿದ.

ಶ್ರೀಕಂಠ ಮೊದಲನೆಯ ಪರೀಕ್ಷೆಯಲ್ಲಿ ಗೆದ್ದಂತಾಗಿತ್ತು.

" ಮಿಸ. ತಾಜ್ ಅವರನ್ನು ನಾನು ಯಾವಾಗ ನೋಡಬಹುದು."

" ಮನೆಗೆ ನೀವು ಫೋನ ಮಾಡಿದರೆ, ಅವರ ಅನುಕೂಲ ಕೇಳಿ ತಿಳಿ ಸುತ್ತೇನೆ. ತಕ್ಷಣವೇ ಏನಾದರೂ ಆಗಬೇಕಾಗಿತ್ತೇ ?"

“ ಶಿಲ್ಪವೇ ಆರು ಅಡಿ ಬರುತ್ತದೆ. ಅದರ ಪೀಠ ಎರಡೂವರೆ ಅಡಿಯಾಗುತ್ತವೆ. ನಾನು ದೊಡ್ಡ ಅಟ್ಟಣೆ ಕಟ್ಟಿಕೊಂಡು ಕೆಲಸ ಮಾಡಬೇಕು. ಹದಿನೈದು, ಇಪ್ಪತ್ತು, ಅಡಿ ಎತ್ತರವಿರುವ ದೊಡ್ಡ ಹಾಲ್ ಬೇಕಾಗಿದೆ. ನನ್ನ ಸ್ಟುಡಿಯೋದಲ್ಲಿ ಇಷ್ಟು ದೊಡ್ಡ ಕೆಲಸ ಮಾಡಲು ಅನುಕೂಲವಿಲ್ಲ.

“ ನಿಮಗೆ ಬೇಕಾದ ಪ್ರಮಾಣದ ಹಾಲ್ ಬಾಡಿಗೆಗೆ ಸಿಕ್ಕುವುದಿಲ್ಲವೇ ?”

“ ನಮ್ಮ ಅವಸರಕ್ಕೆ ಇಷ್ಟು ದೊಡ್ಡ ಹಾಲ್ ಮುಂಬಯಿಯಲ್ಲಿ ಸಿಕ್ಕಲು ಸಾಧ್ಯವೇ ಮಿ- ಬರೂಚಾ. ”

ನಿಜ- ಮಿಸ್. ತಾಜ್ ಅವರಿಗೆ ತಿಳಿಸುತ್ತೇನೆ. ನೀವು ಇವತ್ತು ಮನೆಯಲ್ಲಿಯೇ ಇದ್ದರೆ ಅವರ ಉತ್ತರ ಕೇಳಿಕೊಂಡು ಬಂದು ನಾನೇ ತಿಳಿಸುತ್ತೇನೆ. ನಿಮಗೆ ಫೋನ್ ಮಾಡಬೇಕಾದರೆ ಎಲ್ಲಿಗೆ ಮಾಡಬೇಕು ? ”

“ ಪಕ್ಕದ ಇರಾನಿ ಹೊಟೇಲಿಗೆ ಫೋನ್ ಮಾಡಿದರೆ ಅವರು ಬಂದು ತಿಳಿಸುತ್ತಾರೆ. ”

“ ಹೊಟೇಲ್ ನಂಬರು ಕೊಡಿ. ಹಾಗೆ ಮಿಸ್. ತಾಜ್ ಅವರ ಫೋನ್ ನಂಬರು ಗುರುತು ಹಾಕಿಕೊಳ್ಳಿ. ”

ಎಂದು ೦೯೪೯೬೭೫೪ ನಂಬರು ಹೇಳುತ್ತಾ ಬರೂಚಾ.

“ ಮಿಸ. ತಾಜ್ ಅವರಿಗೆ ಹಲವು ಫೋನ್‌ಗಳಿವೆ. ಈ ನಂಬರು ಅವರ ಸ್ವಂತ ಅಪಾರ್ಟಮೆಂಟಿನದು (apartment) ಇಲ್ಲಿಗೆ ನೀವು ಫೋನ್ ಮಾಡಿದರೆ ನಾನಾಗಲಿ ಅಡ್ಡಿ (Addy) ಯಾಗಲಿ ಉತ್ತರ ಹೇಳುತ್ತೇವೆ. ”

“ ಅಡ್ಡಿ ಯಾರು ? ”

“ ನನ್ನ ಹಾಗೇ ಅವರೂ ಮಿಸ್. ತಾಜ್ ಅವರ ಕಾರ್ಯದರ್ಶಿ. ನಾನಿಲ್ಲದಿರುವಾಗ ಅವರು ಡ್ಯೂಟಿ ಮೇಲೆ ಇರುತ್ತಾರೆ. ”

“ ನೀವು ಎಷ್ಟು ಹೊತ್ತಿಗೆ ನನಗೆ ಫೋನ್ ಮಾಡುವಿರಿ ? ”

“ ಸುಮಾರು ನಾಲ್ಕು ಗಂಟೆಗೆ. ”

“ ಆಗಬಹುದು. ನಾನು ಮನೆಯಲ್ಲಿಯೇ ಇರುತ್ತೇನೆ. ”

ಎಂದು ಹೇಳಿದ.

ಪ್ರಭಾ ಎಂದಿನಂತೆ ಬರುತ್ತಿದ್ದರೂ ಅವಳ ಮನಸ್ಸಿಗೆ ಗೆಲುವಿರಲಿಲ್ಲ. ಕಾರಣವನರಿಯಬೇಕೆಂದು ಶ್ರೀಕಂಠ ಮಾಡಿದ ಪ್ರಯತ್ನ ಸಫಲವಾಗಿರಲಿಲ್ಲ.

" ಮನೆಯ ತಾಪತ್ರಯ. "

ಎಂದಷ್ಟೇ ಹೇಳಿ ಪ್ರಭಾ ಸುಮ್ಮನಾಗುತ್ತಿದ್ದಳು.

ಜರಿವಾಲಾ ಅವರ ಮೂರ್ತಿ ಕಡೆಯುವ ವಿಷಯದಲ್ಲಿ ಶ್ರೀಕಂಠ ತೋರುತ್ತಿದ್ದ ಅತ್ಯುತ್ಸಾಹವನ್ನು ಪ್ರಭಾ ಸೂಕ್ಷ್ಮವಾಗಿ ಗಮನಿಸುತ್ತಿದ್ದಳು. ಅಂದು ಅವಳ ಮನಸ್ಸಿನಲ್ಲಿ ದುಃಖ ಉಮ್ಮಳಿಸಿತು. ತಡೆಯಲಾರದೆ

" ಶ್ರೀಕಾಂತ್, ನಿಮ್ಮ ನಿರ್ದಿಷ್ಟ ಗುರಿಯೇನಾಯಿತು ? " ಎಂದು ಕೇಳಿದಳು.

" ಯಾವದು ನನ್ನ ಗುರಿ "

" ಭಾರತದ ದೇವಾದಿದೇವತೆಗಳ ಮೂರ್ತಿಗಳನ್ನು ಕಡೆಯುವುದು. ?"

" ಅದೆಲ್ಲಾ ಬುಜ್ವಾ ಎಂದು ನೀವೇ ಹೇಳಿದಿರಿ ! "

" ಆ ಮಾತು ನಾನು ಹೇಳುವುದು ಬಿಟ್ಟು ಬಹಳ ದಿವಸಗಳಾದವು. ನಿಮ್ಮದು ಆದರ್ಶ ಸಂಪ್ರದಾಯ– ಈಗ ವಾಸ್ತವ ಸಂಪ್ರದಾಯದ ಕಡೆಗೆ ಹೋಗುತ್ತಿರುವಿರಿ ? "

" ಆದರ್ಶ ಸಂಪ್ರದಾಯವನ್ನೇ ನಂಬಿ ಕುಳಿತರೆ ಹೊಟ್ಟೆಯ ಪಾಡು ಸಾಗುವುದು ಹೇಗೆ ಪ್ರಭಾದೇವಿ ? ದೇವಾದಿದೇವತೆಗಳನ್ನು ಇಂದು ಕೇಳುವವರು ಯಾರು ? "

" ಹೊಟ್ಟೆಯ ಪಾಡು ಕಳೆಯುವುದಕ್ಕೆ ನೀವು ಮುಂಬಯಿಗೆ ಬರಲಿಲ್ಲವೆನ್ನುವುದು ನನ್ನ ನಂಬಿಕೆಯಾಗಿತ್ತು. "

" ನಿಜ. ಆದರೆ........... "

" ಶ್ರೀಕಾಂತ, ಕಲೆಯಲ್ಲಿ ನಾನಿನ್ನೂ ಶಿಶು. ನಿಮ್ಮಷ್ಟು ಪ್ರಾವೀಣ್ಯ ನನಗಿಲ್ಲ. ನಿಮ್ಮ ಕೃತಿಗಳನ್ನು ವಿಮರ್ಶಿಸುವ ಯೋಗ್ಯತೆಯೂ ನನಗಿಲ್ಲ. ವಿಮರ್ಶಕಳಂತೆ, ಗೆಳತಿಯಂತೆ ಒಂದು ಮಾತು ಹೇಳ ಬಯಸುತ್ತೇನೆ- ಹೇಳಬಹುದೇ ? "

" ಹೇಳದಿದ್ದರೆ ನೀವು ನನಗೆ ಅನ್ಯಾಯ ಮಾಡಿದಂತಾಗುತ್ತದೆ. "

" ನೀವು ಮಾಡಿರುವ ಲೆನಿನ್ ಸ್ಟಾಲಿನ್‌ರ ಶಿಲ್ಪಗಳನ್ನೂ, ಮಾಡಲಿರುವ ಜರೀವಾಲಾ ಅವರ ಶಿಲ್ಪವನ್ನೂ ಯಾರಾದರೂ ಮಾಡಬಲ್ಲರು. ಆದರೆ ಅನ್ನಪೂರ್ಣೇಶ್ವರಿ, ನಟರಾಜ, ಗಾಂಧೀಜಿ ಮೊದಲಾದ ನಿಮ್ಮ ಶಿಲ್ಪಗಳನ್ನು

ಯಾರೂ ಅನುಕರಿಸಲಾರರು. ನಿಮ್ಮ ಪ್ರತಿಭೆ ಕ್ರಾಂತಿಯ ಕನಸು ಕಾಣು ತ್ತಿದ್ದ ನನ್ನನ್ನು ಆದರ್ಶ ಲೋಕಕ್ಕೆ ಕರೆದೊಯ್ದಿರಿ. ಈಗ ನೀವೇ ಆ ಲೋಕ ಬಿಟ್ಟು ಭೂಮಿಗೆ ಮರಳುತ್ತಿದ್ದೀರಿ. ಪ್ರಾಚೀನ ಭಾರತದ ಶಿಲ್ಪಸಂಪ್ರದಾಯ ಗತಾವಶೇಷವಾಗುತ್ತಿದೆಯೆಂದು ನೀವೇ ಹೇಳುತ್ತಿದ್ದಿರಿ. ಆ ಸಂಪ್ರದಾಯ ವನ್ನು ಉಳಿಸಿ, ಬೆಳೆಸುವುದೇ ನನ್ನ ಧ್ಯೇಯವೆಂದು ಸಾರಿದಿರಿ. ನಿಮ್ಮ ಆದರ್ಶ ಆಕಾಂಕ್ಷೆಯೇನಾಯಿತು ? "

" ನನ್ನ ಆದರ್ಶ ಅನುಸರಿಸುವದಕ್ಕೇ ಮೊದಲು ಆರ್ಥಿಕಸ್ಥಿತಿ ಸುಧಾರಿಸಿ ಕೊಳ್ಳುತ್ತಿದ್ದೇನೆ. ಈ ಬಗ್ಗೆ ನೀವು ಯೋಚನೆ ಮಾಡಬೇಕಾಗಿಲ್ಲ ಪ್ರಭಾ ದೇವಿ. ಜರೀವಾಲಾ ಅವರ ಶಿಲ್ಪಮಾಡಿ ಕೈಗೆ ನಾಲ್ಕು ಕಾಸು ಬಂದರೆ ನಾನು ನಿಶ್ಚಿಂತನಾಗಿ ಕುಳಿತು ನನ್ನ ಮನೋವಾಂಛಿತವನ್ನು ಸಾಧಿಸಬಹುದು. "

ಶ್ರೀಕಂಠನ ಉತ್ತರ ಪ್ರಭಾದೇವಿಯ ಮನಸ್ಸಿಗೆ ತೃಪ್ತಿಕೊಡದಿದ್ದರೂ ಅವಳು ಲೌಕಿಕಕ್ಕಾಗಿ 'ಹಾಗೇ ಆಗಲಿ' ಎಂದು ಮಾತು ಮುಗಿಸಿದಳು.

ಸುಮಾರು ನಾಲ್ಕು ಗಂಟೆಯ ವೇಳೆಗೆ ಇರಾನಿ ಹೊಟೇಲಿನ ಹುಡುಗ ಬಂದು 'ಫೋನ ಬಂದಿದೆ' ಎಂದು ತಿಳಿಸಿದ. ಶ್ರೀಕಂಠನು ಕೂಡಲೆ ಹೋಗಿ ಫೋನ್ ಕೈಗೆತ್ತಿಕೊಂಡ. ಆಚೆಯಂಚಿನಿಂದ ಬರೂಚಾ ಮಾತಾಡುತ್ತಿದರು.

" ಮಿ. ಶ್ರೀಕಂಠ. "

" ಹೆಲೋ– ಹೆಲೋ – ಮಿ. ಬರೂಚಾ ' ಶ್ರೀಕಂಠ ಮಾತಾಡುತ್ತಿರು ವುದು.

" ನೀವು ಹೇಳಿದ ವಿಷಯ ಮಿಸ್. ತಾಜ್ ಅವರಿಗೆ ತಿಳಿಸಿದೆ. "

" ಒಳ್ಳೆಯದು- ಅವರೇನು ಹೇಳಿದರು. "

" ನಿಮ್ಮನ್ನು ಇಲ್ಲಿಗೆ ಬರಮಾಡೆಂದರು. ನೀವು ಸಿದ್ದರಾಗಿದ್ದರೆ ನಾನು ಕಾರು ತೆಗೆದುಕೊಂಡು ಬರುತ್ತೇನೆ. "

" ಹಾಗೇ ಆಗಲಿ– ಸಿದ್ಧವಾಗಿರುತ್ತೇನೆ. "

ಎಂದು ಹೇಳಿ ಮನೆಗೆ ಹಿಂದುರಿಗಿ ಬಂದು ಬಟ್ಟೆ ಧರಿಸಿಕೊಂಡು ಹೊರ ಡಲನುವಾಗಿ

" ಸ್ವಲ್ಪ ಇರುವಿರಾ ಮಿಸ್. ಪ್ರಭಾ. ನಾನು ಮಿಸ. ತಾಜ್ ಅವರನ್ನು ನೋಡಿಕೊಂಡು ಬರುತ್ತೇನೆ. "

ಎಂದು ತನ್ನ ಭೆಟ್ಟಿಯ ಉದ್ದೇಶ ತಿಳಿಸಿದ.

"ನೀವು ಹೋಗಿ ಬನ್ನಿ– ನಾನು ನಾಳೆ ಕಾಣುತ್ತೇನೆ."

"ಇರಿ- ಬೇಗ ಬಂದುಬಿಡುತ್ತೇನೆ."

"ಇಲ್ಲ, ನಾನೂ ಬೇಗ ಮನೆಗೆ ಹೋಗಬೇಕಾಗಿದೆ. ತಂದೆಯವರಿಗೆ ಮೈಯಲ್ಲಿ ಹುಷಾರಿಲ್ಲ."

ಎಂದು ಹೇಳಿ ಪ್ರಭಾದೇವಿ ಹೊರಟು ಹೋದಳು.

ಅರ್ಧಗಂಟೆಯೊಳಗೆ ಬಂದ ಮೊಟಾರಿನಲ್ಲಿ ಕುಳಿತು ಬರೂಚಾನೊಂದಿಗೆ ಶ್ರೀಕಂಠ 'ಜರೀವಾಲಾ ಮ್ಯಾನ್‌ಷನ್ಸ್'ಗೆ ಹೊರಟ.

ಕಾರು 'ಜರಿವಾಲಾ ಮ್ಯಾನ್‌ಷನ್ಸ್' ಪೋರ್ಟಿಕೋದಲ್ಲಿ . ನಿಂತೊಡನೆಯೇ ತಾಜ್ ಬಂದು ಕಾರಿನಲ್ಲಿ ಕುಳಿತು, ಡ್ರೈವರಿಗೆ ಯಾವುದೋ ವಿಳಾಸ ತಿಳಿಸಿದಳು. ಮೂರು ಫರ್ಲಾಂಗ್ ದೂರದಲ್ಲಿ ಜರೀವಾಲಾ ಮ್ಯಾನ್‌ಷನ್ಸ್ ಹಿಂದೆ ಇದ್ದ ಒಂದು ಕಾರ್ಖಾನೆಯಂತೆ ಕಾಣುತ್ತಿದ್ದ ಆವರಣದ ಬಳಿಗೆ ಕಾರು ಬಂದಿತು. ಬಾಗಿಲು ಕಾಯುತ್ತಿದ್ದ ಭಯ್ಯ ಎದ್ದುನಿಂತು ಮೇಮ್ ಸಾಹೇಬರಿಗೆ 'ರಾಮ್ ರಾಮ್' ಹೇಳಿ ಬಾಗಿಲಗಳನ್ನು ತೆಗೆದ. ಕಾರು ಒಳಕ್ಕೆ ಪ್ರವೇಶಿಸಿತು.

ಆವರಣದ ಒಳಗಡೆ ಮೂರು ಕಡೆ ಮೇಲಂತಸ್ತು ಪಡೆದಿದ್ದ ಸಾಲು ಕಟ್ಟಡಗಳಿದ್ದವು. ಅವುಗಳಲ್ಲಿ ಎಡಭಾಗದಲ್ಲಿದ್ದ ಕಟ್ಟಡದ ಮಹಡಿಯನ್ನು ತಾಜ್ ಏರಿದಳು. ಶ್ರೀಕಂಠ, ಬರೂಚಾ ಅವಳನ್ನು ಹಿಂಬಾಲಿಸಿದರು. ಕಟ್ಟಡದ ಕಾರಕೂನ ಕೀಲಿಕೈ ತಂದು ಮಹಡಿಯಮೇಲಣ ಕಟ್ಟಡದ ಬಾಗಿಲು ತೆಗೆದ.

ತಾಜ್ ಅದನ್ನು ಶ್ರೀಕಂಠನಿಗೆ ತೋರಿಸುತ್ತಾ

"ಈ ಕಟ್ಟಡ ನಮ್ಮ ಗೊಡೌನ (Godown) ಗಳಲ್ಲಿ ಒಂದಾಗಿದೆ. ಮಹಡಿಯನ್ನು ಮಾತ್ರ ಖಾಲಿ ಇಟ್ಟುಕೊಂಡಿರುತ್ತೇನೆ. ನೋಡಿ ಸ್ಥಳ ನಿಮ್ಮ ಕೆಲಸಕ್ಕೆ ಅನೂಕೂಲವಾಗಬಹುದೇ ಇಲ್ಲವೇ ಎಂಬುದನ್ನು." ಎಂದಳು-

ಶ್ರೀಕಂಠ ಆ ವಿಶಾಲವಾದ ಹಜಾರವನ್ನು ಪರೀಕ್ಷಿಸಿದ. ನಲವತ್ತು ಅಡಿ ಅಗಲ, ಎಂಬತ್ತು ಅಡಿ ಉದ್ದದ ಹಜಾರದಲ್ಲಿ ನಾಲ್ಕನೆಯ ಒಂದು ಭಾಗ

ರೂಪವಾಗಿ ಪರಿವರ್ತಿತವಾಗಿತ್ತು. ರೂಮಿನಲ್ಲಿ ಕುರ್ಚಿ, ಮೇಜು, ನಿಲುಗನ್ನಡಿ, ವಾರ್ಡ್ ರೋಬ, ಮಂಚಗಳಿದ್ದುದಲ್ಲದೆ ಅದಕ್ಕೆ ಹೊಂದಿಕೊಂಡಿದ್ದ ಉಪಕೋಣೆಗಳಲ್ಲಿ ಸ್ನಾನ, ಶೌಚ ಗೃಹಗಳಿದ್ದವು.

ಅರುವತ್ತು ಅಡಿ ಉದ್ದ ನಲವತ್ತು ಅಡಿ ಅಗಲವಿದ್ದ ಹಜಾರದಲ್ಲಿ ಹಿಂದೆ ಚಿತ್ರಗಾರ ಜೀವಿಸಿದ್ದುದರ ಲಕ್ಷಣಗಳು ಕಂಡುಬರುತ್ತಿದ್ದವು. ರೂಮಿಗೆ ಸಮೀಪವಾಗಿದ್ದ ಮೇಲ್ಛಾವಣಿಯ ಮೇಲೆ ಗಾಜಿನ ಹಂಚುಗಳನ್ನು ಹೊದಿಸಿ ಮೇಲ್ಬೆಳಕು ಬರುವಂತೆ ಅಣಿಮಾಡಲ್ಪಟ್ಟಿತ್ತು. ಸುತ್ತಲೂ ಅನೇಕ ಕಿಟಕಿಗಳು ಗಾಳಿ ಬೆಳಕನ್ನು ಧಾರಾಳವಾಗಿ ಒಳತರುತ್ತಿದ್ದವು.

ಹಜಾರವನ್ನು ಪರೀಕ್ಷಿಸುತ್ತಿದ್ದ ಶ್ರೀಕಂಠನ ಗಮನವನ್ನು ಗೋಡೆಯ ಮೇಲಿದ್ದ ಕೆಲವು ಚಿತ್ರಗಳು ಸೆಳೆದವು. ಅವುಗಳ ಕಲ್ಪನಾ ವೈಖರಿ. ತಂತ್ರ ನೈಪುಣ್ಯ ಕಂಡು ಶ್ರೀಕಂಠ ಬೆರಗಾಗಿ

" ಇವು ಯಾರ ಕೃತಿಗಳು ಮಿಸ. ತಾಜ್ " ಎಂದು ಕೇಳಿದ.

" ಕೆಲವು ದಿವಸ ಇಲ್ಲಿ ಒಬ್ಬ ಚಿತ್ರಕಾರರಿದ್ದರು. ಅವರ ಅನುಕೂಲಕ್ಕಾಗಿಯೇ ಈ ಹಜಾರವನ್ನು ಸ್ಟುಡಿಯೋ ಆಗಿ ಮಾರ್ಪಾಡು ಮಾಡಲಾಯಿತು."

" ಅವರು ಈಗೆಲ್ಲಿದ್ದಾರೆ. "

" ಬುದ್ಧಿಭ್ರಮಣೆಯಾಗಿ ಹೊರಟು ಹೋದರು. ಎಷ್ಟು ಹುಡುಕಿದರೂ ಸಿಕ್ಕಲಿಲ್ಲ. ಈಗ ಎಲ್ಲಿದ್ದಾರೆಯೊ ಗೊತ್ತಿಲ್ಲ. ಈ ಸ್ಥಳ ನಿಮಗೆ ಅನುಕೂಲವಾಗಿದೆಯೇ ಏನಾದರೂ ಸುಧಾರಣೆಗಳಾಗಬೇಕಾದರೆ ತಿಳಿಸಿ, ಮಾಡಿಸಿಕೊಡುತ್ತೇನೆ. "

" ನನಗೆ ಒಬ್ಬ ಬಡಗಿ ಬೇಕಾಗುತ್ತದೆ. ಶಿಲ್ಪಕ್ಕೆ ಅಟ್ಟಣೆ ಕಟ್ಟಿಸಬೇಕಾಗುತ್ತದೆ. "

" ನಮ್ಮ ಕಾರಕೂನರು ಅಂಜಾರಿಯಾ ಇಲ್ಲೇ ಇರುತ್ತಾರೆ. ಅವರಿಗೆ ಹೇಳಹೋಗುತ್ತೇನೆ. ನಿಮಗೆ ಎಲ್ಲ ಅನುಕೂಲ್ಯವನ್ನೂ ಕಲ್ಪಿಸಿ ಕೊಡುತ್ತಾರೆ. "

" ಆಗಬಹುದು. ಸ್ಥಳ ತುಂಬ ಪ್ರಶಸ್ತವಾಗಿದೆ. ಕಟ್ಟಡ ಸಾಕಷ್ಟು ಎತ್ತರವಾಗಿರುವುದರಿಂದ ನನ್ನ ಕೆಲಸ ಸುಸೂತ್ರವಾಗಿ ಸಾಗುತ್ತದೆ. "

ತಾಜ್, ಅಂಜಾರಿಯಾನನ್ನು ಹತ್ತಿರ ಕರೆದು.

" ಗೋಡೆಗಳಿಗೆ ಲಕ್ಷಣವಾಗಿ ಡಿಸ್ಟೆಂಪರ್ ಹೊಡೆಸಿ, ಈ ಸ್ಥಳಗಳನ್ನು ಎರಡು ಮೂರು ದಿವಸಗಳಲ್ಲಿ ಅಚ್ಚುಗಟ್ಟುಮಾಡಿ ಇವರ ವಶಕ್ಕೆ ಕೊಡಿ. ಯಾವ ಬಣ್ಣ ಹಾಕಿದರೆ ಒಳ್ಳೆಯದು ಮಿ. ಶ್ರೀಕಾಂತ್. "

" ತೆಳು ಹಸಿರು ಚೆನ್ನಾಗಿ ಕಾಣುತ್ತದೆ. ಆದರೆ ಒಂದು ಪ್ರಾರ್ಥನೆ. "

" ಹೇಳಿ. "

" ಗೋಡೆಯ ಮೇಲಿರುವ ಚಿತ್ರಗಳು ಹಾಗೇ ಇರಲಿ. "

" ಆಗಬಹುದು. "

ತಾಜ್, ಅಂಜಾರಿಯಾನಿಗೆ ಮೇಲ್ಛಾವಣಿ ತೋರಿಸುತ್ತಾ

" ಮೇಲೆ ಕೆಲವು ಫ್ಲಡ್ ಲೈಟ್ಸ್ (Flood lights) ಹಾಕಿಸಿ ಕೊಡಿ."

ಎಂದು ಹೇಳಿ ಹಜಾರವನ್ನು ಪರೀಕ್ಷಿಸುತ್ತಾ

"ನಿಮಗೆ ಇಷ್ಟು ದೊಡ್ಡ ಹಜಾರ ಬೇಕಾಗುತ್ತದೆಯೇ ಮಿ. ಶ್ರೀಕಾಂತ್" ಎಂದು ಕೇಳಿದಳು.

" ಇಷ್ಟು ದೊಡ್ಡದೇನೂ ಅಗತ್ಯವಿಲ್ಲ. "

" ಹಾಗಾದರೆ ಅಂಜಾರಿಯಾ, ಮುಂದುಗಡೆ ಇಪ್ಪತ್ತು ಅಡೀಗೆ ಒಂದು ಗೋಡೆ ಹಾಕಿಸಿ, ಬಾಗಿಲು ಇಡಿಸಿ ಕೊಡಿ. ಮುಂದಿನ ಕೋಣೆಯನ್ನು ಮಿ. ಶ್ರೀಕಾಂತ ತಮ್ಮ 'ದಿವಾನಖಾನೆ' ಯನ್ನಾಗಿ ಉಪಯೋಗಿಸಬಹುದು. ಹಾಲ್ ಅವರ ಸ್ಟೂಡಿಯೋ ಆಗುತ್ತದೆ. ಒಳಕೋಣೆ ಅವರ ವಾಸಗೃಹವಾಗುತ್ತದೆ."

" ಸದ್ಯಕ್ಕೆ ನನಗೆ ವಾಸಗೃಹವಿದೆ. "

" ಇಲ್ಲಿಗೆ ಬಂದು ಹೋಗುವುದಕ್ಕೆ ನಿಮ್ಮ ಹೊತ್ತು ನಿರರ್ಥಕವಾಗಿ ಕಳೆದುಹೋಗುತ್ತದೆ. ಇಲ್ಲೇ ಬಂದು ಇದ್ದುಬಿಡಿ. "

ನಿರ್ವಾಹವಿಲ್ಲದೆ ' ಆಗಲಿ ' ಎಂದು ಶ್ರೀಕಂಠ ಒಪ್ಪಿಕೊಂಡ.

ತಾಜ್ ಬರೂಚನ ಕಡೆ ತಿರುಗಿ

" ನೀವೂ ಅಂಜಾರಿಯಾ ಈ ಕೆಲಸ ನೋಡಿಕೊಳ್ಳಿ. ಮೂರು ದಿವಸ ಗಳಲ್ಲಿ ಶ್ರೀಕಾಂತರ ಸ್ಟೂಡಿಯೋ ಸಿದ್ಧವಾಗಬೇಕು. ಹಗಲೂ ರಾತ್ರಿ ಕೆಲಸ ಮಾಡಿಸಿ ಸ್ಟೂಡಿಯೋ ಸಿದ್ಧವಾದ ಕೂಡಲೆ ಶ್ರೀಕಾಂತರನ್ನು ಇಲ್ಲಿಗೆ ಕರೆತರುವ ಭಾರ ನಿಮ್ಮದು. "

ಬರೂಚಾ ಆಗಲೆಂದು ತಲೆದೂಗಿದ.

" ನೀವು ಕೆಲಸ ಬೇಗ ಆರಂಭಿಸಬೇಕು ಮಿ. ಶ್ರೀಕಾಂತ್. ನಾನು ಮೊದಲೇ ಹೇಳಿದಂತೆ (Daddy) ಬರುವುದರೊಳಗಾಗಿ ಅನಾವರಣ ಮಹೋತ್ಸವ ಮುಗಿದು ಹೋಗಬೇಕು. ಗೋಡೌನ್ ಆಫೀಸಿನಲ್ಲಿ ಫೋನ್ ಇದೆ. ಉಪಯೋಗಿಸಿಕೊಳ್ಳಿ. ನಿಮಗೆ ಏನು ಬೇಕಾದರೂ ಅಂಜಾರಿಯಾ ಅವರಿಗೆ ತಿಳಿಸಿ."

" ಆಗಬಹುದು ಮಿಸ್. ತಾಜ್."

" ನಾನು ಮನೆಗೆ ಹೋಗಿ ಕಾರ್ ಕಳಿಸಿಕೊಡುತ್ತೇನೆ "

ಎಂದು ತಾಜ್ ಹೊರಟು ಹೋದಳು.

೬

ಹಜಾರದ ಕೆಲಸವೆಲ್ಲಾ ಮೂರೇ ದಿವಸಗಳಲ್ಲಿ ಮುಗಿದಿದ್ದರೂ ಶ್ರೀಕಂಠ ಅಲ್ಲಿಗೆ ಹೋಗಲು ಸಾಧ್ಯವಾಗಲಿಲ್ಲ.ಗೋಡೆಗಳ ತೇವಪಾರಬೇಕಾಗಿತ್ತು. ಒಂದು ವಾರ ಕಳೆದ ಮೇಲೆ ಬರುಚಾ ಬಂದು ಶ್ರೀಕಂಠನನ್ನು ಕರೆದೊಯ್ದು 'ಮಲಬಾರ ಹಿಲ್ಲಿ'ನ ನೂತನ ಗೃಹದಲ್ಲಿ ಪ್ರತಿಷ್ಠಾಪಿಸಿದ.

ನೂತನ ಗೃಹದ ಕೀಲಿ ತೆಗೆದುಕೊಂಡು ಶ್ರೀಕಂಠ ಹಳೆಯ ಮನೆಗೆ ಹೋಗಿ ಸಾಮಾನುಗಳನ್ನು ಒಂದು ಟ್ಯಾಕ್ಸಿಯಲ್ಲಿ ಹಾಕಿಕೊಂಡು ಪ್ರಭಾದೇವಿಯೊಂದಿಗೆ ನೂತನ ಗೃಹಕ್ಕೆ ಬಂದ.

ಶ್ರೀಕಂಠನ ಸಾಮಾನುಗಳನ್ನು ಪ್ರಭಾದೇವಿಯೇ ಜೋಡಿಸಿಟ್ಟಳು. ಹೊಸ ಗೃಹದ ವೈಭವ ನೋಡಿ ಪ್ರಭಾದೇವಿ ಚಕಿತಳಾದಳು. ಗೋಡೆಗಳು, ತೆಳುಹಸಿರು ಬಣ್ಣದ ಡಿಸ್ಟೆಂಪರ್ ಬಣ್ಣದಿಂದ ಅಲಂಕೃತವಾಗಿತ್ತು. ಅಲ್ಲಲ್ಲಿ ಅಡಗಿಸಿದ ದೀಪಪ್ರಕಾಶ. ಶಿಲ್ಪದ ಮೇಲೆ ಸರಿಯಾಗಿ ಬೀಳುವಂತೆ ಫ್ಲಡ್ ಲೈಟುಗಳು. ಕಿಟಕಿ, ಬಾಗಿಲುಗಳಿಗೆ ಸುಂದರವಾದ ತೆರೆಗಳು.

ಹಜಾರದ ಮುಂದುಗಡೆ 'ದಿವಾನ್ ಖಾನೆ' ನಿರ್ಮಿತವಾಗಿತ್ತು. ಅದರಲ್ಲಿ ಟ್ಯೂಬ್ ಸೋಫಾ ಸೆಟ್, ಒಂದು ರೇಡಿಯೋ, ಫ್ಯಾನ್ ಅಲಂಕೃತವಾಗಿತ್ತು.

ಶ್ರೀಕಂಠನ ವಾಸಗೃಹವೂ ಸಂಪೂರ್ಣವಾಗಿ ಪರಿವರ್ತಿತವಾಗಿ ಹೊಸ ಮಂಚ, ಡ್ರೆಸ್ಸಿಂಗ್ ಟೇಬಲ್, ಫ್ಯಾನ್‌ಗಳಿಂದ ಅಲಂಕೃತವಾಗಿತ್ತು.

" ಇದು ಸ್ಟೂಡಿಯೋ ಅಲ್ಲ — ಅರಮನೆ "

ಎಂದಳು ಪ್ರಭಾದೇವಿ.

" ಶ್ರೀಮಂತರಿಗೆ ಅಭಿರುಚಿಯೂ ಇದ್ದರೆ ಸಾರ್ಥಕವಾಗುತ್ತದಲ್ಲವೇ ಪ್ರಭಾದೇವಿ. "

" ಶ್ರೀಮಂತಿಕೆಯ ವಾತಾವರಣದಲ್ಲಿ ಕಲೆ ಬೆಳೆಯುವುದೇ ? "

" ಏಕೆ ಬೆಳೆಯಬಾರದು. ಕಲೆಗೂ ದಟ್ಟ ದಾರಿದ್ರ್ಯಕ್ಕೂ ಗಂಟೇನು ? "

" ಕೆಲಸ ಯಾವಾಗ ಆರಂಭಿಸುವಿರಿ ? "

" ನಾಳೆಯಿಂದಲೇ ಆರಂಭಿಸುತ್ತೇನೆ. "

" ರಾಜೂ ಅವರಿಗೆ ನಿಮ್ಮ ಹೊಸಮನೆ ಯಾವಾಗ ತೋರಿಸುವಿರಿ? "

" ಅವನು ಕೈಗೆ ಸಿಕ್ಕುವುದೇ ಕಷ್ಟವಾಗಿದೆಯಲ್ಲ. "

ಪ್ರಭಾದೇವಿ ಹೊರಡುವ ಸೂಚನೆ ಕೊಟ್ಟಳು.

" ಇಷ್ಟು ಬೇಗ ಹೊರಡಬೇಕೇ ? " ಎಂದು ಶ್ರೀಕಂಠ ಕೇಳಿದ.

" ಶಾಲೆಯನ್ನು ತುಂಬ ನಿರ್ಲಕ್ಷಿಸಿ ಬಿಟ್ಟಿದ್ದೇನೆ. "

" ಪ್ರಭಾದೇವಿ, ನಿಜವಾಗಿ ಹೇಳಿ, ನಾನು ಈ ಕೆಲಸ ಒಪ್ಪಿಕೊಂಡುದು ನಿಮಗೆ ಅಸಮಾಧಾನವಾಗಿದೆಯೇ ?"

" ಏಕಾಗಬೇಕು. ಶ್ರೀಮಂತರ ಸಹವಾಸದಲ್ಲಿ ನೀವು ಬಡವರನ್ನು ಮರೆಯದಿದ್ದರೆ ಸಾಕು. "

" ಶ್ರೀಮಂತರು ಬಡವರನ್ನು ಮರೆಯುತ್ತಾರೆ; ಬಡವರು ಬಡವರನು ಮರೆಯುವುದಿಲ್ಲ. "

" ಶ್ರೀಮಂತರ ಜತೆಯಲ್ಲಿರುವ ಬಡವರೂ ತಾವು ಶ್ರೀಮಂತರು ಎಂದು ಭಾವಿಸುತ್ತಾರೆ "

" ನಾನು ಶ್ರೀಮಂತರ ಸಹವಾಸ ಮಾಡಿಲ್ಲವಲ್ಲ. ಬಡವರ ಉದ್ಧಾರಕ್ಕೇ ಕಂಕಣ ಕಟ್ಟಿರುವ ಕಮ್ಯುನಿಸ್ಟರ ಸಹವಾಸ ಮಾಡಿರುವೆನಲ್ಲಾ ! "

ಪ್ರಭಾದೇವಿ ವ್ಯಂಗ್ಯವಾಗಿ ನಕ್ಕು ಸುಮ್ಮನಾದಳು.

ಶ್ರೀಕಂಠ ತನ್ನ ಸಂಪೂರ್ಣ ಶಕ್ತಿ, ಕಾಲ, ಚೇತನವನ್ನು ನಿವೇದಿಸಿ ಜರೀವಾಲಾ ಅವರ ಶಿಲ್ಪವನ್ನು ಕಡೆಯಲಾರಂಭಿಸಿದ. ಅವನು ಕೆಲಸಮಾಡು ತ್ತಿದ್ದಂತೆ ಅಂಜಾರಿಯಾ ಬಂದು ನಿಂತುಕೊಂಡು ನೋಡುವನು.

ತಾಜ್ ವಿಷಯ ಹೆಚ್ಚು ತಿಳಿಯಬೇಕೆಂದು ಶ್ರೀಕಂಠನ ಮನಸ್ಸಿನಲ್ಲಿ ಉತ್ಕಟೇಚ್ಛೆ ಹುಟ್ಟಿತು. ಲಕ್ಷ್ಮೀಪುತ್ರಿಯಾಗಿದ್ದ ತಾಜ್ ಕಮ್ಯುನಿಸ್ಟರ ಅಭಿಮಾನಿಯಾದುದು ಹೇಗೆನ್ನುವ ಸಮಸ್ಯೆ ಅವನನ್ನು ಕಾಡುತ್ತಿತ್ತು. ಅಂಜಾರಿಯಾನನ್ನು ಮಾತನಾಡಿಸಿ ನೋಡಿದ. ತಾಜ್ ವಿಷಯ ಹೊರಟ ಕೂಡಲೆ ಅಂಜಾರಿಯಾ ವಿಷಯಾಂತರ ಮಾಡಿ ಅದೂ ಇದೂ ಮಾತನಾಡಿ ಮೆಲ್ಲನೆ ಸ್ಥಳಬಿಟ್ಟು ಕದಲುತ್ತಿದ್ದ.

ತಾಜ್ ಆಗಾಗ್ಗೆ ಬಂದು ಕುಳಿತು ಶ್ರೀಕಂಠನ ಪ್ರಗತಿಯನ್ನು ಗಮನಿಸುತ್ತಿದ್ದಳು. ಶ್ರೀಕಂಠ ಸೋತು ಹಣ್ಣಾಗಿದ್ದುದನ್ನು ಕಂಡರೆ ತನ್ನ ಕಾರ್ ಕಳಿಸಿಕೊಟ್ಟು ಜುಹೂಗೋ, ವಜ್ರೇಶ್ವರಿಗೋ ಹೋಗಿಬನ್ನಿ ಎಂದು ಹೇಳಿ ಕಳಿಸುತ್ತಿದ್ದಳು.

ಶ್ರೀಕಂಠನಿಗೆ ಹಗಲು ರಾತ್ರಿಗಳ ಪರಿವೆ ಉಳಿಯಲಿಲ್ಲ. ಯಾವದೋ ಅಮಾನುಷ ಶಕ್ತಿ ಅವನಲ್ಲಿ ಸಮಾವೇಶವಾಗಿತ್ತು. ಬೆಳಿಗ್ಗೆ ಎದ್ದು ಒಂದೆರಡು ಕಪ್ಪು ಚಹಾ ತೆಗೆದುಕೊಂಡು ಕೆಲಸಕ್ಕೆ ನಿಂತರೆ ದೇಹ ಸೋತು ಬೀಳುವವರೆಗೂ ಅಲುಗಾಡುತ್ತಿರಲಿಲ್ಲ. ರಾತ್ರಿಯೆಲ್ಲಾ ಅವನ ' ಸ್ಟೂಡಿಯೋ ' ದೀಪಗಳು ಉರಿಯುತ್ತಿದ್ದವು.

ಒಂದು ರಾತ್ರಿ, ಒಂದು ಗಂಟೆ ಸಮಯವಿರಬಹುದು. ಜರೀವಾಲಾ ಶಿಲ್ಪದ ಮೇಲಣ ಅನವಶ್ಯಕ ಪ್ಲಾಸ್ಟರ್ ಬಿಡಿಸುತ್ತ ಶ್ರೀಕಂಠ ಕುಳಿತಿದ್ದಾನೆ. ಸ್ಟೂಡಿಯೋ ಫ್ಯಾನ್‌ಗಳೆಲ್ಲಾ ಓಡುತ್ತಿದ್ದರೂ ಸಹಿಸಲಾಗದಷ್ಟು ಸೆಖೆ. ಕಿಟಕಿ, ಬಾಗಿಲುಗಳನ್ನೆಲ್ಲಾ ತೆಗೆದಿದ್ದರೂ ಗಾಳಿಯ ಸುಳಿವಿಲ್ಲ. ಶ್ರೀಕಂಠನ ಮೈಯಿಂದ ಧಾರಾಕಾರವಾಗಿ ಬೆವರಿಳಿಯುತ್ತಿದ್ದರೂ ಅವನು ಉಳಿ ಬಿಟ್ಟಿರಲಿಲ್ಲ.

ಯಾವನೋ ಆಗಂತುಕ ಧಡಧಡನೆ ಓಡಿ ಬಂದು ದಿವಾನಖಾನೆಯ ಬಾಗಿಲನ್ನು ಹಾಕಿಕೊಂಡಂತಾಯಿತು. ಅವನ ಹಿಂದೆ ಬಂದ ಭಯ್ಯಾ 'ಸಾಬ್. ಸಾಬ್' ಎಂದು ಕೂಗಿದ. ಆಗಂತುಕ ಶ್ರೀಕಂಠನನ್ನು ನೋಡಿ

" ನಾನು ನಿಮ್ಮಲ್ಲಿ ಮಾತನಾಡಲು ಬಂದಿದ್ದೇನೆ. ಭಯ್ಯನನ್ನು ಕಳಿಸಿ ಬಿಡಿ " ಎಂದ.

"ಯಾವನೊ ಕಳ್ಳ ನಿಮ್ಮ ದಿವಾನಖಾನೆ ಒಳಗೆ ಸೇರಿದ್ದಾನೆ ಸರ್ಕಾರ್"

ಎಂದು ಭಯ್ಯಾ ಕೂಗಿಕೊಂಡ. ಶ್ರೀಕಂಠ ಕ್ಷಣಕಾಲ ಯೋಚಿಸಿದ.

'ಇವನು ಯಾರು – ಕಳ್ಳನಾಗಿರಬಹುದೇ – ಕಳ್ಳನಿಗೆ ಏನು ಸಿಕ್ಕಲು ಸಾಧ್ಯ ? '

ಆಗಂತುಕ ಶ್ರೀಕಂಠನ ಅನುಮಾನ ನೋಡಿ, ಸೊಗಸಾದ ಇಂಗ್ಲಿಷಿನಲ್ಲಿ

" ನಾನು ಕಳ್ಳನಲ್ಲ – ಭಯ್ಯನನ್ನು ಕಳಿಸಿ, ಮಾತಾಡೋಣ "

ಎಂದು ಹೇಳಿದ. ಶ್ರೀಕಂಠ ಭಯ್ಯನಿಗೆ ಧೈರ್ಯ ಹೇಳಿ ಅವನನ್ನು ಸಾಗುಹಾಕಿದ.

ಆಗಂತುಕ ಸುಪರಿಚಿತನಂತೆ ಶ್ರೀಕಂಠನ ಸ್ಟೂಡಿಯೋ, ವಾಸಗೃಹವನ್ನು ಪರೀಕ್ಷಿಸುತ್ತ

" ಇಲ್ಲಿಗೆ ನೀವು ಬಂದು ಎಷ್ಟು ದಿವಸಗಳಾದವು ?" ಎಂದು ಕೇಳಿದ.

" ಸುಮಾರು ಎರಡು ವಾರಗಳಾಗಿರಬಹುದು. "

ಆಗಂತುಕ ಗೋಡೆಯ ಮೇಲಿದ್ದ ಚಿತ್ರಗಳನ್ನು ನೋಡುತ್ತ

" ಇವು ಯಾರು ಮಾಡಿದವು ? "

" ಇಲ್ಲಿ ಯಾರೋ ಚಿತ್ರಗಾರರಿದ್ದರಂತೆ. ಅವರ ಕೃತಿಗಳು ಇವು. "

" ಇವುಗಳನ್ನು ನೀವೇಕೆ ಅಳಿಸಿ ಹಾಕಿಸಲಿಲ್ಲ ! "

" ಏಕೆ ಅಳಿಸಿ ಹಾಕಬೇಕು. ಅವುಗಳಲ್ಲಿ ಅಸಾಮಾನ್ಯ ಪ್ರತಿಭೆಯಿದೆ. ಅವುಗಳನ್ನು ರಚಿಸಿದ ಚಿತ್ರಕಾರ ಪರಮ ಕ್ರಿಯಾಶಾಲಿ ಎನ್ನುವುದರಲ್ಲಿ ಸಂಶಯ ವಿಲ್ಲ. "

" ಅವನು ಯಾರು ಬಲ್ಲಿರಾ ? "

" ಇಲ್ಲ - ನೀವು ಬಲ್ಲಿರಾ ? "

" ಬಲ್ಲೆ. "

" ನಿಮ್ಮ ಪರಿಚಯ ಮಾಡಿಕೊಡಲಿಲ್ಲ. "

" ನನ್ನ ಪರಿಚಯ ನಿಮಗೆ ಈಗಾಗಲೇ ಆಗಿದೆ. "

" ನಿಮ್ಮ ಮಾತಿನರ್ಥ ನನಗಾಗಲಿಲ್ಲ. "

" ಯಾವ ಚಿತ್ರಗಳನ್ನು ನೀವು ಮೆಚ್ಚಿಕೊಂಡಿರುವಿರೋ ಅವುಗಳನ್ನು ಬರೆದವನು ನಾನು. "

" ನಿಮ್ಮ ಹೆಸರು ? "

" ರಣಧೀರ. "

ಶ್ರೀಕಂಠನಿಗೆ ನಂಬಿಕೆಯಾಗಲೊಲ್ಲದು. ಕೊಳಕು ಚಡ್ಡಿ, ಹರಕು ಬುಷ್ ಕೋಟ್, ತುರುಚಲು ಗಡ್ಡ, ಕಂಕುಳಲ್ಲಿ ಚೀಲ ಹಿಡಿದು ಬಂದಿರುವ ಈ ವ್ಯಕ್ತಿಯೇ ಕಲಾವಿದ ರಣಧೀರನೇ!

" ನಿಮಗೆ ನಂಬಿಕೆಯಾಗುವುದಿಲ್ಲವಲ್ಲವೇ ? "

" ಹೇಗೆ ನಂಬಲು ಸಾಧ್ಯ. "

ರಣಧೀರ ತನ್ನ ಚೀಲದಿಂದ ಒಂದು ಚೂರು ಇದ್ದಿಲು ತೆಗೆದುಕೊಂಡು ಒಂದೆರಡು ನಿಮಿಷಗಳಲ್ಲಿ ಗೋಡೆಯ ಮೇಲೆ ಸುಂದರ ರೇಖಾಚಿತ್ರವೊಂದನ್ನು ಬರೆದು

" ಈಗ ನಂಬಿಕೆಯಾಯಿತೇ ? " ಎಂದು ಕೇಳಿದ.

ಶ್ರೀಕಂಠನಿಗೆ ತನ್ನ ಕಣ್ಣನ್ನೇ ನಂಬುವುದು ದುಸ್ಸಾಧ್ಯವಾಯಿತು. ರಣಧೀರನನ್ನಪ್ಪಿ, ಕುರ್ಚಿಯ ಮೇಲೆ ಅವನನ್ನು ಕೂಡಿಸಿ

" ನಿಮ್ಮನ್ನು ನೋಡಲು ನಾನು ತುಂಬಾ ಆಶಿಸುತ್ತಿದ್ದೆ ರಣಧೀರರೇ."

" ನನ್ನ ಕಥೆ ಮುಗಿದು ಹೋಯಿತು. ನನ್ನನ್ನು ಮರೆತು ಬಿಡಿ. "

" ಮುಗಿದಿಲ್ಲ. ಈ ರೇಖಾಚಿತ್ರ ಬರೆಯಬಲ್ಲ ಕೈ ತನ್ನ ಜಾಣ್ಮೆ ಕಳೆದುಕೊಂಡಿಲ್ಲ. ನೀವು ಎಲ್ಲಿದ್ದೀರಿ – ಏನು ಮಾಡುತ್ತಿದ್ದೀರಿ ? "

" ನನ್ನ ವಿಷಯ ಕೇಳಬೇಡಿ. ನಾನೊಬ್ಬ ನಿರ್ಭಾಗ್ಯ - ಸಮಾಜ ಬಾಹಿರ - ಹುಚ್ಚ. ನಿಮ್ಮ ಯೋಗಕ್ಷೇಮ ನೀವು ನೋಡಿಕೊಳ್ಳಿ. 'ಪೀಪಲ್ಸ್ ವಾಯ್ಸ್' ಪತ್ರಿಕೆಯಲ್ಲಿ ಪ್ರಕಟವಾದ ನಿಮ್ಮ ಶಿಲ್ಪಗಳನ್ನು ನೋಡಿದೆ. ಈ ವ್ಯಕ್ತಿಯಲ್ಲಿ ನಿಜವಾದ ಕಲೆಯಿದೆ ಎಂದು ನನಗನಿಸಿತು. ಒಂದಲ್ಲ ಒಂದು ದಿನ ನೀವು ಇಲ್ಲಿಗೆ ಬರಬಹುದೆಂದು ತರ್ಕ ಮಾಡಿದೆ. ನನ್ನ ತರ್ಕ ಸುಳ್ಳಾಗಲಿಲ್ಲ. "

" ಈಗಲೂ ಇದು ನಿಮ್ಮ ಮನೆಯೆಂದು ಭಾವಿಸಿಕೊಳ್ಳಿ. ಇಲ್ಲಿಯೇ ಬಂದಿರಿ. "

" ಓ! ಆ ಮಾತು ಮಾತ್ರ ಹೇಳಬೇಡಿ. ನಾನಿರುವಲ್ಲಿಯೇ ನೆಮ್ಮದಿಯಾಗಿದ್ದೇನೆ. ಪರದೇಶಿಗೇಕೆ ಶ್ರೀಮಂತರ ಸಹವಾಸ. "

" ನೀವು ತುಂಬ ನೊಂದಿದ್ದೀರಿ ರಣಧೀರಜೀ. "

" ನಾನು ನೊಂದರೆ ಚಿಂತೆಯಿಲ್ಲ - ನನ್ನ ಕಲೆಯೂ ನೊಂದಿದೆ ನಂದಿದೆ. "

" ನಂದಿಲ್ಲ ! "

" ಬಂಧು, ನೀವು ನೋಡುತ್ತಿರುವುದು ನನ್ನ ಕಲೆಯ ಗತಾವಶೇಷ ನಿಜವಾದ ರಣಧೀರ ಎಂದೋ ಮೃತಪಟ್ಟ. "

" ಮೃತ್ಯು ಅಮೃತತ್ತ್ವದ ಹರಿಕಾರ. "

" ಹೌದು ಕಾವ್ಯದಲ್ಲಿ. ನಾನು ನಿಮಗೆ ಒಂದು ಮಾತು ಹೇಳಿ ಹೋಗಲು ಬಂದೆ. "

" ಅವಶ್ಯಕವಾಗಿ ಹೇಳಿ. "

" ಜಗತ್ತಿನಲ್ಲಿ ಎಷ್ಟೋ ಹೂಗಳಿವೆ. ಆದರೆ ಪರಿಮಳವಿರುವದು ಕೆಲವ ದರಲ್ಲಿಯೇ. ಕೇವಲ ಹಿತವಾದ ಪರಿಮಳವಿರುವುದು ನಾಲ್ಕಾರು ಹೂಗಳ ಲ್ಲಿಯೇ. ಕಲೆಗೂ ಈ ಮಾತು ಅನ್ವಯಿಸುತ್ತದೆ. ಕಲಾವಿದನಾಗುವುದೇ ದೊಡ್ಡ ಭಾಗ್ಯ. ಲೋಕಕಲ್ಯಾಣಕಾರಕವಾದ ಕಲೆ ಎಲ್ಲ ಕಲಾವಿದರಿಗೂ ದಕ್ಕುವುದಿಲ್ಲ - ನಿಮಗೆ ದಕ್ಕಿದೆ. "

" ನನಗೆ ! "

" ಹೌದು ನಿಮಗೆ. ಅದನ್ನು ಕಾಪಾಡಿಕೊಳ್ಳಿ. ಅದನ್ನು ಅಪಹರಿಸಲು ಲೋಕವೇ ಸಂಚು ಮಾಡುತ್ತದೆ. ಕಲಾವಿದನನ್ನು ಅಡ್ಡದಾರಿಗೆಳೆದು ಅವನ ಸರ್ವನಾಶಮಾಡಲು ಸುಖ, ಹಣ, ಕೀರ್ತಿ ಹವಣಿಸುವುದಿಲ್ಲ. ಕಲೆಯು ಅಸ್ತಿಭಾರಬುದ್ಧಿಯಲ್ಲ, ಪ್ರತಿಭೆಯಲ್ಲ, ತಂತ್ರನೈಪುಣ್ಯವಲ್ಲ - ವೈರಾಗ್ಯ - ಪರಿಶುದ್ಧ ವೈರಾಗ್ಯ. ಅಜಂತೆಯ ಚಿತ್ರಗಾರರನ್ನು, ಸಿಸ್ಟಿನ್ ಚ್ಯಾಪೆಲ್‌ನ (Sistine Chapel) ಕೃತಿಗಳನ್ನು ರಚಿಸಿದ ಕಲಾವಿದರನ್ನು ಯಾರೂ ವಿಚಾರಿಸಲಾರರು- ಏಕೆ ಬಲ್ಲಿರಾ ? - ಅವರಂಥ ವಿರಾಗಿಗಳು ಕಲಾ ಪ್ರಪಂಚದಲ್ಲಿ ಬೇರೆ ಇಲ್ಲ. "

" ಈ ಕೃತಿಗೆ ನಾನು ಕೈಹಾಕಬಾರದಾಗಿತ್ತೇ ? "

" ಅದನ್ನು ನೀವೇ ನಿರ್ಧರಿಸಿಕೊಳ್ಳಬೇಕು. "

ಎನ್ನುತ್ತಿದ್ದಂತೆ ರಣಧೀರನ ಮುಖ ಕಪ್ಪಿಟ್ಟಿತು. ಅತೀವ ವೇದನೆ ಯನ್ನನುಭವಿಸುವಂತೆ ತೋರಿತು. ಎರಡು ನಿಮಿಷ ಕಳೆದ ಮೇಲೆ ಪೂರ್ವ ಸ್ಥಿತಿಗೆ ಬಂದು

" ಕುಡಿಯಲು ಸ್ವಲ್ಪ ನೀರು ಕೊಡಿ " ಎಂದು ಕೇಳಿದ.

ಶ್ರೀಕಂಠ ನೀರು ತಂದು ಕೊಟ್ಟು

" ಮೈಯಲ್ಲಿ ಆರೋಗ್ಯವಿಲ್ಲವೇ ? "

" ಆರೋಗ್ಯಕ್ಕೇನೂ ಕೊರತೆಯಿಲ್ಲ. ಅವನು - ಅವನು ಸುಮ್ಮನೆ ಬಂದು ಕಾಡುತ್ತಾನೆ. ಅವನ ಸಹವಾಸ ಬೇಡವೆಂದು ದೂರವಿದ್ದರೂ ನೆಳಲಿನಂತೆ ನನ್ನನ್ನೇ ಅನುಸರಿಸುತ್ತಾನೆ. ಅವನ ಕಾಟ ತಡೆಯಲಾಗದೆ ನಾನು ಕೆಲವು ಸಾರಿ ಆತ್ಮಹತ್ಯ ಮಾಡಿಕೊಳ್ಳಲೆತ್ನಿಸಿದೆ. "

" ಅವನು ಯಾರು ? "

" ಯಾರೋ ಒಬ್ಬ....ಅವನೆಂದರೆ ಅವನೇ - ಅವನಂಥವರು ಲೋಕದಲ್ಲಿ ಬೇರೊಬ್ಬರಿಲ್ಲ "

" ಅವನು ನಿಮ್ಮ ಸ್ನೇಹಿತನಾಗಿದ್ದನೇ ? "

ರಣಧೀರ ಉತ್ತರಕೊಡದೆ ಎದ್ದು ನಿಂತು ಹೊರಡಲು ಆತುರನಾದ .

" ಪುನಃ ಯಾವಾಗ ಬರುವಿರಿ ? "

" ಯಾವಾಗಲಾದರೂ ಬರುತ್ತೇನೆ. "

" ಈ ಸರಿ ರಾತ್ರಿಯಲ್ಲಿ ಏಕೆ ಹೋಗಬೇಕು. ಇಲ್ಲೇ ಇದ್ದು ಬಿಡಿ. "

ರಣಧೀರ ಉತ್ತರ ಹೇಳದೆ ಧಡಧಢನೆ ಮೆಟ್ಟಲಿಳಿದು ಓಡಿ ಹೋದ.

ಈ ಅನುಭವ ಶ್ರೀಕಂಠನಿಗೆ ರೋಮಾಂಚವನ್ನುಂಟುಮಾಡಿತು. ರಣಧೀರ ಹುಚ್ಚನೆನ್ನಲು ಬರುವಂತಿರಲಿಲ್ಲ. ಅವನ ಮಾತಿನಲ್ಲಿ ಆಗಾಗ ಸಂಬಂಧ ಸೂತ್ರ ಹರಿದು ಹೋಗುತ್ತಿದ್ದರೂ ಸುಸಂಬದ್ಧವಾಗಿರುತ್ತಿತ್ತು. ಅವನ ಅಭಿಪ್ರಾಯಗಳಲ್ಲಿ ಸತ್ಯದ ತೇಜಸ್ಸು ಉಜ್ವಲವಾಗಿ ಬೆಳಗುತ್ತಿತ್ತು.

' ರಣಧೀರ ಇಲ್ಲಿಯೇ ಇದ್ದನೆಂದ ಮೇಲೆ ಮಿಸ್. ತಾಜಳ ಆಶ್ರಯದಲ್ಲಿಯೇ ಇದ್ದಿರಬೇಕು. ಆಕೆಯ ಆಶ್ರಯ ತಪ್ಪಿದುದೇಕೆ ? ರಣಧೀರ ಪರದೇಶಿಯಾದುದೇತರಿಂದ ? '

ಎನ್ನುವ ಪ್ರಶ್ನೆ ಶ್ರೀಕಂಠನನ್ನು ಕಾಡತೊಡಗಿತು. ಕೆಲಸವೂ ಬೇಡವಾಯಿತು. ನಿದ್ರೆಯೂ ಬರಲೊಲ್ಲದು.

ಸುಶಾಂತವಾಗಿದ್ದ ಶ್ರೀಕಂಠನ ಮನೋಸಾಗರದ ಮೇಲೆ ರಣಧೀರನೆಂಬ ಬಿರುಗಾಳಿ ಬೀಸಿ ಅಲ್ಲಕಲ್ಲೋಲ ಮಾಡಿತ್ತು.

ಇದ್ದಕ್ಕಿದ್ದಂತೆ ಬೆಚ್ಚಿ

' ಇಂದು ರಣಧೀರನ ಸ್ಥಿತಿಯಾಗಿರುವಂತೆ ನಾಳೆ ನನ್ನ ಸ್ಥಿತಿಯಾಗುತ್ತ

ದೆಯೇ

ಎಂದು ವಿಚಾರ ಮಾಡತೊಡಗಿದ.

## ೧೦

ಮಾರನೆಯ ದಿನವೂ ಶ್ರೀಕಂಠನ ಮನಸ್ಸು ತಹಬಂದಿಗೆ ಬರಲಿಲ್ಲ. ನಿರಾಶೆ - ನಿರ್ವಿಣ್ಣತೆ - ನಿರುತ್ಸಾಹ ಮನಸ್ಸನ್ನು ಕಬಳಿಸಿತು. ಜರೀವಾಲರ ಶಿಲ್ಪ ಒದ್ದೆ ವಸ್ತ್ರ ಹೊದೆದುಕೊಂಡು ನಿಂತಿತು.

ಶ್ರೀಕಂಠ ಪ್ರಭಾದೇವಿಯನ್ನು ನಿರೀಕ್ಷಿಸುತ್ತ ಕುಳಿತ. ಪ್ರಭಾ ಬಂದವಳು ಶ್ರೀಕಂಠನನ್ನು ನೋಡಿ

"ಇದೇನು ಹೀಗೆ ಕುಳಿತು ಬಿಟ್ಟಿರುವಿರಿ. ಇವತ್ತು ಕೆಲಸ ಮಾಡುವುದಿಲ್ಲವೇ ?"

"ಕೆಲಸ ಮಾಡುವುದಕ್ಕೆ ಉತ್ಸಾಹವೇ ಇಲ್ಲದಂತಾಗಿದೆ ಪ್ರಭಾದೇವಿ"

ಎಂದು ರಾತ್ರಿ ನಡೆದ ಘಟನೆಯನ್ನು ಕೂಲಂಕಷವಾಗಿ ವರ್ಣಿಸಿ

"ರಣಧೀರರ ವಿಷಯ ನಿಮಗೇನಾದರೂ ಗೊತ್ತೇ ?" ಎಂದು ಕೇಳಿದ.

ಪ್ರಭಾ ದೀರ್ಘವಾಗಿ ಆಲೋಚಿಸಿ

"ಗೊತ್ತು - ಆದರೆ ಹೇಳುವುದು ಉಚಿತವಲ್ಲ."

"ರಹಸ್ಯವೇ ?"

"ಹೌದು"

"ರಹಸ್ಯವನ್ನು ನಾನು ಹೊರಗೆಡುವುದಿಲ್ಲ. ನೀವು ಅವರ ವಿಷಯ ಹೇಳಿ ಉಪಕಾರ ಮಾಡಿದರೆ ನನ್ನ ಮನಸ್ಸಿಗೆ ಶಾಂತಿ ದೊರಕುತ್ತದೆ."

"ನಿಮ್ಮ ಶಾಂತಿ ಮತ್ತಷ್ಟು ಕೆಡುತ್ತದೆ."

"ಚಿಂತೆಯಿಲ್ಲ. ಈ ಸಂಧಿಗ್ಧಾವಸ್ಥೆಯಾದರೂ ಹೋಗುತ್ತದೆ."

"ರಣಧೀರಜೀ ಅಸಾಧಾರಣ ವ್ಯಕ್ತಿ. ಚಿತ್ರಕಲೆಯಲ್ಲಿ ಮಾತ್ರವೇ ಅಲ್ಲ ಸಾಹಿತ್ಯ, ರಾಜಕೀಯದಲ್ಲಿಯೂ ಅವರಿಗೆ ತುಂಬ ಪರಿಶ್ರಮವಿದೆ. ಒಂದು ಕಾಲದಲ್ಲಿ ಅವರು ನಮ್ಮ ಪಾರ್ಟಿಯ ಬ್ಯೂರೋ ಸದಸ್ಯರಾಗಿ ತುಂಬ ಪ್ರಭಾವಶಾಲಿಗಳಾಗಿದ್ದರು."

" ಈಗ ? "

" ಈಗವರು ಪಾರ್ಟಿಯಲ್ಲಿಲ್ಲ. "

" ಏಕೆ ? "

" ಹಿಟ್ಲರ್ ಯುದ್ಧ ಸಾರಿದಾಗ ಗಾಂಧೀಜಿ, ಜವಾಹರಲಾಲ್ ಮತ್ತು ಇತರ ಭಾರತ ನಾಯಕರು ಯುದ್ಧವನ್ನು ಬಹಿಷ್ಕರಿಸಿದರು. ಕಮ್ಯುನಿಷ್ಟ ಪಾರ್ಟಿ ಯುದ್ಧದಲ್ಲಿ ಭಾರತ ಭಾಗವಹಿಸಬೇಕೆಂದು ಸಾರಿತು. ಆಗ ರಣಧೀರರು ಗಾಂಧೀಜಿಯವರ ಅಭಿಪ್ರಾಯವನ್ನು ಸಮರ್ಥಿಸಿ ಪಾರ್ಟಿ ನಿರ್ಧಾರವನ್ನು ಖಂಡಿಸಿದರು. ರಣಧೀರರ ಪತನ ಸ್ವತಃಸಿದ್ಧವಾಯಿತು. ಸಹಸ್ರ ಬುದ್ಧೆ ರಣಧೀರರನ್ನು ಪಾಲಿಟ್‌ಬ್ಯೂರೋದಿಂದ ಹೊರಗೆ ಹಾಕಿದುದಲ್ಲದೆ, ಪಾರ್ಟಿಯಿಂದಲೂ ಹೊರಗೆ ಹಾಕಿದರು. ಕಮ್ಯುನಿಸ್ಟ ಪತ್ರಿಕೆಗಳು ರಣಧೀರರ ವಿರುದ್ಧ ಭಯಂಕರ ಅಪಪ್ರಚಾರ ಮಾಡಿ ಅವರು ತಲೆಯೆತ್ತದಂತೆ ಮಾಡಿದವು. ರಣಧೀರರಿಗೆ ಹುಚ್ಚು ಹಿಡಿದಂತಾಯಿತು. ಅಂದಿನಿಂದ ಅವರು ಬೀದಿಯ ಬಿಕಾರಿಗಳಾದರು. "

" ಅವನು— ಅವನು ಎಂದವರು ಹೇಳುವುದು ಸಹಸ್ರ ಬುದ್ಧೆ ಕುರಿತೇ ಇರಬೇಕು. "

" ಹೌದು, ಸಹಸ್ರಬುದ್ಧೆಯ ನೆನಪು ಬಂದರೆ ಸಾಕು ರಣಧೀರರ ಬುದ್ಧಿಯೂ ಕೆಟ್ಟುಹೋಗುತ್ತದೆ. "

" ಕಮ್ಯುನಿಸ್ಟರ ಸಹವಾಸವೆಂದರೆ ಹಾಸಿಗೆಯಲ್ಲಿ ಹಾವು ಸಾಕಿದಂತೆ ! ಈ ಕುತ್ತಿನಿಂದ ನೀವು ಹೇಗೆ ಪಾರಾಗುವಿರಿ ಪ್ರಭಾದೇವಿ ? ರಾಜೂ ಗತಿಯೇನು ? "

" ನಮ್ಮಿಬ್ಬರಿಗೂ ಅದೇ ಸಮಸ್ಯೆಯಾಗಿದೆ. ಕಮ್ಯುನಿಸ್ಟರ ವ್ಯಾಘ್ರ ನಖಕ್ಕೆ ನೀವೂ ಸಿಕ್ಕಿಕೊಂಡಿರುವಿರಿ. "

" ಕೈಗೆ ತೆಗೆದುಕೊಂಡಿರುವ ಈ ಕೆಲಸ ಮುಗಿಸಿ ನಾನು ಈ ಗುಂಪಿನಿಂದ ದೂರವಿದ್ದು ಬಿಡುತ್ತೇನೆ. "

ಶ್ರೀಕಂಠನ ನಿರ್ಧಾರದ ಶುಭ ಪರಿಣಾಮದ ಬಗ್ಗೆ ಪ್ರಭಾದೇವಿಗೆ ಹೆಚ್ಚು ನಂಬಿಕೆಯಿರಲಿಲ್ಲ. ಶ್ರೀಕಂಠನ ಮನಸ್ಸನ್ನು ಮತ್ತಷ್ಟು ಕಳವಳಕ್ಕೀಡು ಮಾಡಬಾರದೆಂದು ಅವನ ಮಾತಿಗೆ ಹೂಗುಟ್ಟಿದಳು.

ಶಿಲ್ಪವನ್ನು ಬೇಗ ಮುಗಿಸುವುದಕ್ಕೆ ಶ್ರೀಕಂಠನಿಗೆ ಹೊಸ ಕ್ರತುಶಕ್ತಿ ಸಿಕ್ಕಿದಂತಾಯಿತು. ಇದು ಮುಗಿದ ಕೂಡಲೆ ತನ್ನ ಅಪೂರ್ವ ಕೃತಿಗಳನ್ನು ಮುಗಿಸಿ ಹೊಸ ಕೃತಿಗಳನ್ನು ಮಾಡಬೇಕು, ಆದರ್ಶ ಪೂರ್ಣವಾದ ಭವ್ಯಾಕೃತಿಯ ಮೂರ್ತಿಗಳನ್ನು ಸೃಷ್ಟಿಮಾಡಬೇಕು, ಎಂದು ಶ್ರೀಕಂಠ ಕನಸು ಕಾಣತೊಡಗಿದ.

ಪ್ರಭಾದೇವಿ ಥಟ್ಟನೆ ಕೇಳಿದಳು.

" ಮಿಸ್. ತಾಜ್ ನಿಮ್ಮ ಶಿಲ್ಪದಬಗ್ಗೆ ತುಂಬ ಆಸಕ್ತಿ ವಹಿಸಿರುವ ಹಾಗೆ ಕಾಣುತ್ತದೆ. "

" ಹೌದು. ಸರ್ ಸಾಹೇಬರು ಬರುವುದರೊಳಗಾಗಿ ಶಿಲ್ಪದ ಅನಾವರಣ ಮುಗಿಸಬೇಕೆಂದಿದ್ದಾರೆ. "

" ಏಕೆ ಅಷ್ಟು ಆತುರ. "

" ಶಿಲ್ಪ ಸ್ಥಾಪಿಸುವುದಕ್ಕೆ ಸರ್ ಸಾಹೇಬರು ಒಪ್ಪಲಾರರು ಎಂದು ಮಿಸ್ ತಾಜ್ ಭಯಪಡುತ್ತಿದ್ದಾರೆ. "

" ಅವರು ನಿತ್ಯವೂ ಬಂದು ನೋಡಿಕೊಂಡು ಹೋಗುತ್ತಿದ್ದಾರೆಯೇ ? "

" ನಿತ್ಯವೂ ಬರುವುದಿಲ್ಲ. ಒಂದೊಂದು ದಿನ ಬರುತ್ತಾರೆ. "

" ರಣಧೀರಜೀ ಪುನಃ ಯಾವಾಗ ಬರುತ್ತಾರೆ ? "

" ಗೊತ್ತಿಲ್ಲ. ಆ ವಿಷಯ ನಾನು ಕೇಳಿದರೂ ಅವರು ಉತ್ತರ ಹೇಳಲಿಲ್ಲ. "

ಎನ್ನುತ್ತಾ ತನ್ನ ಏಪ್ರನ್ (apron) ಧರಿಸಿ ಶ್ರೀಕಂಠ ಕೈಗೆ ಉಳಿ ಎತ್ತಿಕೊಂಡ. ಕೆಲವು ನಿಮಿಷಗಳಲ್ಲಿ ಪ್ರಭಾದೇವಿ ಅಲ್ಲಿದ್ದುದೂ ಅವನಿಗೆ ಮರೆತು ಹೋಯಿತು. ಶ್ರೀಕಂಠ ಕೆಲಸದಲ್ಲಿ ತಲ್ಲೀನನಾದುದನ್ನು ಕಂಡು ಪ್ರಭಾ ಅಲ್ಲಿಂದ ಮೆಲ್ಲನೆ ಹೊರಟು ಬಿಟ್ಟಳು.

ಶಿಲ್ಪ ರೂಪುಗೊಂಡಂತೆ ತಾಜ್ ಹೆಚ್ಚು ಆಸಕ್ತಿ ವಹಿಸಲಾರಂಭಿಸಿದಳು. ದಿನಂಪ್ರತಿ ಬಂದು ನೋಡಿಕೊಂಡು ಹೋಗುತ್ತಿದ್ದವಳು ಈಗ ಅನೇಕ ಗಂಟೆಗಳು 'ಸ್ಟೂಡಿಯೋ' ದಲ್ಲಿ ಕುಳಿತು ಶ್ರೀಕಂಠನ ಕೈಚಳಕವನ್ನು ನೋಡುತ್ತಿದ್ದಳು. ಶ್ರೀಕಂಠ ಆಯಾಸಗೊಂಡುದನ್ನು ಕಂಡರೆ, ಕೂಡಲೆ ಚಹಾ ತರಿಸಿ ಕೊಟ್ಟು, ತನ್ನ ಸಿಗರೇಟ್ ಕೇಸನ್ನು ಮುಂದೆ ಹಿಡಿಯುತ್ತಿದ್ದಳು.

" ಕ್ಷಮಿಸಿ. ನಾನು ಸಿಗರೇಟ್ ಸೇದುವುದಿಲ್ಲ. "

" ನೀವು ಪಕ್ಕಾ ಮಡಿ ಶಿಲ್ಪಿಗಳ ಹಾಗೆ ಕಾಣುವಿರಿ. "

" ಹೂ ! ಹಾಗೇ ಆಗಿದೆ. "

" ಸ್ವಲ್ಪ ವಿಶ್ರಮಿಸಿಕೊಳ್ಳಿ. "

ಶ್ರೀಕಂಠ ಅವಳೆದುರಿಗಿದ್ದ ಸ್ಟೂಲ್ ಎಳೆದುಕೊಂಡು ಕೂಡುತ್ತಿದ್ದ.

" ನಿಮ್ಮ ಶಿಲ್ಪಾಭ್ಯಾಸವೆಲ್ಲಾ ಹಳ್ಳಿಯಲ್ಲಿಯೇ ಆಯಿತೇ ? "

" ಹೌದು. ನನ್ನ ತಂದೆಯೇ ಗುರುಗಳು. "

" ಆಧುನಿಕ ತಂತ್ರವನ್ನು ಎಷ್ಟು ಚೆನ್ನಾಗಿ ಅಳವಡಿಸಿಕೊಂಡಿರಿ. "

" ನಮ್ಮ ಪ್ರಾಚೀನ ಶಿಲ್ಪವನ್ನು ಕ್ರಮಾಗತವಾಗಿ ಕಲಿತರೆ ಯಾವ ತಂತ್ರವನ್ನು ಬೇಕಾದರೂ ಅಳವಡಿಸಿಕೊಳ್ಳಬಹುದು. "

" ನೀವೊಮ್ಮೆ ಯುರೋಪ್, ರಷ್ಯಾ ನೋಡಿ ಬರಬೇಕು. "

" ನನಗೂ ಆಸೆಯಿದೆ. ರೋದೀನ್, ಎಪ್‌ಸ್ಟಿನ್, ಪಿನ್‌ಸ್ಟನ್ ಇವರ ವಿಷಯ ಬಹಳ ಕೇಳಿದ್ದೇನೆ. "

" ನೀವು ಹೋಗುವುದಾದರೆ ಹೇಳಿ, ನಾನು ಕಳಿಸಿಕೊಡುತ್ತೇನೆ. ಸದ್ಯದಲ್ಲಿಯೇ ರಷ್ಯಾಕ್ಕೆ ಕಲಾವಿದರ ಡೆಲಿಗೇಷನ್ ಕಳಿಸಿಕೊಡಬೇಕೆಂದಿದ್ದೇವೆ. ಈಗಲೇ ಅಲ್ಲ – ನಿಮ್ಮ ಶಿಲ್ಪ ಮುಗಿದ ಮೇಲೆ. "

" ಹೊರಗೆ ಹೋಗುವ ಮುನ್ನ ನಾನು ಭಾರತೀಯ ಶಿಲ್ಪಗಳನ್ನು ನೋಡಬೇಕಾಗಿದೆ. ನಮ್ಮ ದೇಶದ ಕಲೆಯ ಪರಿಚಯವೇ ನಮಗಿಲ್ಲದೆ ಹೊರಗಿನವರ ಕಲೆ ಅರಿಯಲೆತ್ನಿಸುವುದು ಲಾಭದಾಯಕವಲ್ಲ. "

" ಹಾಗೇ ಮಾಡಿ. ಮೊದಲು ಭಾರತ ಪ್ರವಾಸ ಮಾಡಿಕೊಂಡು ಬನ್ನಿ. "

ಮೂರು ತಿಂಗಳ ಸತತ ಪ್ರಯತ್ನದಿಂದ ಜರೀವಾಲಾ ಅವರ ಶಿಲ್ಪ ಸೂಕ್ಷ್ಮರೂಪು ತಳೆದು ನಿಂತಿತು. ತಾಜ್ ಮೂರ್ತಿಯನ್ನು ನೋಡಿ ಆನಂದ ಬಾಷ್ಪ ಸುರಿಸುತ್ತಾ.

" ಶ್ರೀಕಾಂತ್ – (you are a genius) ನೀವು ಪ್ರತಿಭಾ ಶಾಲಿಗಳು " ಎಂದಳು.

" ರೂಪಚಿತ್ರದಲ್ಲಿ ನಮ್ಮ ಪ್ರತಿಭೆ ತೋರಿಸಲು ಅವಕಾಶವಿಲ್ಲ ಮಿಸ್

ತಾಜ್. ಇದರಲ್ಲಿ ಸಾದೃಶ್ಯವಷ್ಟೇ ಮುಖ್ಯ. ಕಲ್ಪನಾಚಿತ್ರಗಳಲ್ಲಿ ನಮ್ಮ ನಿಜವಾದ ಯೋಗ್ಯತೆ ಹೊರಬೀಳುತ್ತದೆ."

"ಮುಂದೆ ಯಾವ ಕೃತಿ ಮಾಡುವಿರಿ ?"

"ಇದರ ಕೆಲಸ ಮುಗಿಯಲು ಇನ್ನೂ ಒಂದು ತಿಂಗಳು ಬೇಕಾಗುತ್ತದೆ. ಓರೆಕೋರೆಗಳನ್ನು ತಿದ್ದಬೇಕು, ಶಿಲ್ಪಕ್ಕೆ ಸ್ನಿಗ್ಧತೆಯನ್ನು ಕೊಡಬೇಕು."

"ಆ ತರುವಾಯ."

"ಅದನ್ನು ನಿಶ್ಚಯಿಸಿಲ್ಲ."

ದಿನಗಳುರುಳಿದಂತೆ ಶಿಲ್ಪದ ಕೆಲಸ ಮುಗಿಯುತ್ತ ಬಂದಿತ್ತು. ತಾಜ್ ಕೇಳಿದ ಪ್ರಶ್ನೆಯೇ ಶ್ರೀಕಂಠನ ಮನಸ್ಸಿನಲ್ಲಿ ಕೊರೆಯುತ್ತಿತ್ತು.

'ಮುಂದೆ ಯಾವ ಕೃತಿ ಮಾಡುವಿರಿ ?'

'ಯಾವ ಕೃತಿ ಮಾಡುವುದು ?'

ಹಿಂದೊಮ್ಮೆ ತಾನು 'ಸಂದಿಗ್ಧ' ಕಲ್ಪನೆಯನ್ನು ಶಿಲ್ಪದಲ್ಲಿ ಮೂಡಿಸಲು ನಿರ್ಧರಿಸಿ ಪ್ರಭಾದೇವಿಯನ್ನು 'ಪೋಸ್' (Pose) ಮಾಡಲು ಕೇಳಿದ್ದುದು ನೆನಪಾಯಿತು.

ಆ ಮಾತು ಅಲ್ಲಿಗೇ ನಿಂತು ಹೋಗಿತ್ತು.

'ಪ್ರಭಾದೇವಿಗೆ ತನ್ನ ಮೇಲೆ ಕೋಪವೇ ?'

'ಈ ಶಿಲ್ಪ ಮಾಡಲು ನಾನು ಒಪ್ಪಿಕೊಳ್ಳಬಾರದಾಗಿತ್ತೇ ?'

ತಿಂಗಳು ತುಂಬುತ್ತ ಬಂದಿತ್ತು, ಒಂದು ದಿನ ಸಂಜೆ ಶ್ರೀಕಂಠ ಶಿಲ್ಪದ ಕೆಲಸ ಮುಗಿಸಿ, ಅದರ ಪೀಠದ ಮೇಲೆ ತನ್ನ ಅಂಕಿತ ಹಾಕಿದ. ಕೂಡಲೆ ಮಿಸ್. ತಾಜಳ ನೆನಪಿಗಾಗಿ ತಾನೇ ಹೋಗಿ ಫೋನಿನಲ್ಲಿ ಅವಳಿಗೆ ಸಂತೋಷದ ಸುದ್ದಿ ತಿಳಿಸಿದ.

ತಾಜ್ ಬರುವುದಕ್ಕೆ ತಡವಾಗಲಿಲ್ಲ. ಶ್ರೀಕಂಠನ ಕಲಾಕೃತಿ ಅವಳಿಗೆ ಅಪರಿಮಿತಾನಂದವನ್ನುಂಟು ಮಾಡಿತ್ತು.

"ಇಷ್ಟು ಅಲ್ಪಾವಧಿಯಲ್ಲಿ ಈ ಕೃತಿ ಯಾರೂ ಮುಗಿಸಲು ಸಾಧ್ಯವಿಲ್ಲ ಮಿ. ಶ್ರೀಕಾಂತ್. ನಿಮ್ಮ ಕೈಬೆರಳುಗಳಲ್ಲಿ ಮಿಂಚಿನ ಚಳಕವಿದೆ ಶಿಲ್ಪ ಬೇಗ ಆಗಬೇಕೆಂದು ಅವಸರ ಮಾಡಿ ನಾನು ತುಂಬ ಹಿಂಸೆ ಕೊಟ್ಟೆ."

"ಈ ಬಗೆಯ ಹಿಂಸೆಯಿಲ್ಲದಿದ್ದರೆ ಕಲಾವಿದರು ಕೆಲಸವನ್ನೇ ಮಾಡುವು

ದಿಲ್ಲ ಮಿಸ್. ತಾಜ್. ಹುಟ್ಟು ಸೋಮಾರಿಗಳವರು."

"ನಾಳೆ ಶಿಲ್ಪವನ್ನು ಮಾತ್ರ ಕಂಪೆನಿಗೆ ಒಪ್ಪಿಸಿ ಬಿಡೋಣ. ಇದನ್ನು ಅಮೃತಶಿಲೆಗೆ ಇಳಿಸುವುದಕ್ಕೆ ಅವರು ಮೂರು ತಿಂಗಳು ತೆಗೆದುಕೊಳ್ಳ ಬಹುದು. ಆ ವೇಳೆಗೆ ನಾನು ಅನಾವರಣ ಮಹೋತ್ಸವದ ವ್ಯವಸ್ಥೆ ಮಾಡು ತ್ತೇನೆ. ಶ್ರೀ ಮೊರಾರಜೀಯವರನ್ನು ಆಹ್ವಾನಿಸಬೇಕೆಂದಿದ್ದೇನೆ."

"ಅವರು ಕಾಂಗ್ರೆಸ್ ನಾಯಕರಲ್ಲವೇ ಮಿಸ್. ತಾಜ್."

ತಾಜ್ ನಕ್ಕು ಬಿಟ್ಟು,

"ಬನ್ನಿ - ಜುಹೂ ಕಡೆ ಡ್ರೈವ್ (drive) ಹೋಗಿ ಬರೋಣ. ನಿಮಗೆ ತುಂಬ ಆಯಾಸವಾಗಿದೆ."

"ಇಲ್ಲ ಮಿಸ್ ತಾಜ್. ಸ್ನಾನಮಾಡಿ ಮಲಗಿಬಿಟ್ಟರೆ ನನ್ನ ಆಯಾಸ ಪರಿಹಾರವಾಗುತ್ತದೆ. ಒಂದು ಕೃತಿ ಮುಗಿಸಿದ ಮೇಲೆ ನಾನು ತುಂಬ ದುರ್ಬಲನಾಗುತ್ತೇನೆ."

"ನಿಮಗೆ ಹವಾಬದಲಾವಣೆ ಬೇಕು. ನಾಲ್ಕು ದಿನ ಲೋನಾವಲಾಕ್ಕೆ ಹೋಗಿ ಬರುವುದು ಒಳ್ಳೆಯದು."

"ಆಗಲಿ – ಯೋಚನೆ ಮಾಡುತ್ತೇನೆ."

ಎಂದು ಹೇಳಿದ. ಪ್ರಭಾದೇವಿ ಹೋದ ಮೇಲೆ ಅಂಜಾರಿಯಾ ಬಂದು ಶಿಲ್ಪವನ್ನು ನೋಡಿ ತನ್ನ ಮೆಚ್ಚುಗೆ ವ್ಯಕ್ತಪಡಿಸಿದ

"ಮಿ. ಅಂಜಾರಿಯಾ, ನನಗೆ ಎರಡು ತುಂಡು ಬ್ರೆಡ್ಡು ಒಂದೆರಡು ಹಣ್ಣು, ಚಹಾ ತರಿಸಿಕೊಡುವಿರಾ. ಸ್ನಾನ ಮಾಡಿ, ಉಪಾಹಾರ ಮುಗಿಸಿ ಮಲಗಿಬಿಡುತ್ತೇನೆ."

ಎಂದು ಹೇಳಿದ. ಸ್ನಾನ ಉಪಾಹಾರ ಮುಗಿಸಿದ ಕೂಡಲೆ ನಿದ್ರೆ ಕವಿದುಕೊಂಡು ಬಂದಿತು.

ಮಾರನೆಯ ಬೆಳಿಗ್ಗೆ ಶಿಲ್ಪವನ್ನು ಮಾತ್ರ ಕಂಪನಿಗೆ ಒಪ್ಪಿಸಿ ಬಂದವನೇ ಶ್ರೀಕಂಠ ಊಟಮಾಡಿ ಮಲಗಿ ಬಿಟ್ಟ. ಬಹಳ ದಿವಸಗಳ ನಿದ್ದೆಯ ಬಾಕಿ ಯನ್ನು ಅವನು ತೀರಿಸಬೇಕಾಗಿತ್ತು.

ಅಂದು ಯಾರೂ 'ಸ್ಟುಡಿಯೊ' ಕಡೆ ಸುಳಿಯಲಿಲ್ಲ. ಒಂದೆರಡು

ಬಾರಿ ಪ್ರಭಾದೇವಿಯ ನೆನಪು ಶ್ರೀಕಂಠನಿಗೆ ಬಂದಿತು, ‘ ರಾಜುವನ್ನು ಹೋಗಿ ನೋಡಿ ಬರಲೇ ’ ಎಂದುಕೊಂಡ. ಮಲಬಾರ್ ಹಿಲ್‌ನಿಂದ ಮಾತುಂಗಾಕ್ಕೆ ಎರಡು ಮೂರು ಬಸ್ಸುಗಳನ್ನು ಬದಲಾಯಿಸಿಕೊಂಡು ಹೋಗಬೇಕಾದ ಪ್ರಮೇಯ ನೆನೆದು ತೆಪ್ಪಗಾದ.

ಸಂಜೆ ಸ್ವಲ್ಪ ಹೊತ್ತು ‘ ಹ್ಯಾಂಗಿಂಗ್ ಗಾರ್ಡನ್ಸ ’ (Hanging Gardens) ಕಡೆ ಸುತ್ತಾಡಿ ಬಂದು ಮತ್ತೆ ಮಲಗಿದ.

ಸರಿರಾತ್ರಿ ಇರಬಹುದು. ಯಾರೋ ಬಾಗಿಲ ಬಡಿದಂತಾಯಿತು. ಶ್ರೀಕಂಠನಿಗೆ ಎಚ್ಚರವಾದರೂ ಅವನು ಕೂಡಲೆ ಎದ್ದು ಬಾಗಿಲು ತೆಗೆಯಲಿಲ್ಲ. ಬಾಗಿಲು ಬಡಿದ ಶಬ್ದ ಮತ್ತೆ ಕೇಳಿಸಿತು. ‘ ಯಾರು ’ ಎಂದು ಕೇಳಿದ. ಉತ್ತರ ಬರಲಿಲ್ಲ. ಮೂರನೆಯ ಸಾರಿ ಶಬ್ದ ಕೇಳಿ ಬರಲು ತಾನೇ ಎದ್ದು ಹೋಗಿ ಬಾಗಿಲು ತೆಗೆದ.

“ ರಣಧೀರ್‌ಜೀ....ಬನ್ನಿ, ಒಳಕ್ಕೆ ಬನ್ನಿ. ”

ರಣಧೀರ ಬಂದು ಸಾವಕಾಶವಾಗಿ ಸೋಫಾ ಮೇಲೆ ಕುಳಿತು

“ ಶಿಲ್ಪ ಮುಗಿಯಿತೇ ಶ್ರೀಕಾಂತ್. ”

“ ಮುಗಿಯಿತು. ನಿನ್ನೆಯಾದರೂ ನೀವು ಬರಬಾರದಿತ್ತೇ ? ಇದೇ ಬೆಳಿಗ್ಗೆ ಮಾತ್ರೆ ಕಂಪನಿಗೆ ಕಳಿಸಿಕೊಟ್ಟೆ. ”

“ ನಿಮ್ಮ ಶಿಲ್ಪವನ್ನು ನಾನು ನೋಡಿ ಬಂದಿದ್ದೇನೆ. ”

“ ಎಲ್ಲಿ ? ”

“ ಮಾತ್ರೆ ಕಂಪೆನಿಯಲ್ಲಿ. ನೀವೂ ಮಿಸ್. ತಾಜ್ ಶಿಲ್ಪದ ಮೂಲ ಕೃತಿ ಕೊಡಲು ಮಾತ್ರೆ ಕಂಪೆನಿಗೆ ಬಂದಿದ್ದಾಗ ನಾನು ಅಲ್ಲಿಯೇ ಇದ್ದೆ. ”

“ ನನ್ನನ್ನೇಕೆ ಮಾತನಾಡಿಸಲಿಲ್ಲ. ”

“ ನಾನು ಅಜ್ಞಾತವಾಸದಲ್ಲಿರುವುದು ನಿಮಗೆ ಗೊತ್ತಿಲ್ಲವೇ ? ನಾನೀಗ ರಣಧೀರನಲ್ಲ – ಪರದೇಶಿ. ”

“ ಶಿಲ್ಪ ನೋಡಿದಿರಾ ? ”

“ ನೋಡಿದೆ.”

“ ನಿಮ್ಮ ಅಭಿಪ್ರಾಯವೇನು ? ”

“ ನನ್ನ ಅಭಿಪ್ರಾಯದಿಂದ ಏನು ಪ್ರಯೋಜನ ? ”

" ಇದೆ – ದಯೆಯಿಟ್ಟು ಹೇಳಿ. "

" ತಂತ್ರ, ಕರ್ಮಶೀಲತೆ ಅದ್ಭುತವಾಗಿವೆ. ನಿಮ್ಮಲ್ಲಿ ವಿಶಿಷ್ಟ ಪ್ರತಿಭೆ ಇದೆಯೆಂದು ನಾನಂದೇ ಹೇಳಲಿಲ್ಲವೇ ? ಆದರೆ ನೀವದನ್ನು ದುರುಪಯೋಗ ಪಡಿಸುತ್ತಿರುವಿರಿ ? "

" ಹೇಗೆ ? "

" ನಿಮ್ಮ ಶಿಲ್ಪದ ವ್ಯಕ್ತಿ ಯಾರು ಗೊತ್ತೋ ? "

" ಗೊತ್ತು. ಮಹಾದಾನಿ ಸರ್ ಜರೀವಾಲಾ. "

" ಮಹಾದಾನಿ – ಅವರು ದಾನ ಮಾಡುವ ಹಣವೆಲ್ಲಿಂದ ಬಂತು ಗೊತ್ತೋ ? "

" ಎಲ್ಲಿಂದ ಬಂತು. "

" ಮಾದಕವಸ್ತುಗಳ ಕಳ್ಳ ವಿಕ್ರಯದಿಂದ. ಜರೀವಾಲಾ ಪ್ರಸಿದ್ಧ Boot-legger. "

" ರಣಧೀರ್‌ಜೀ – ನೀವೇನು ಆಡುತ್ತಿರುವುದು. "

" ಕಠೋರ ಸತ್ಯ. ಇದಕ್ಕೆ ಸಾಕ್ಷಿ ಬೇಕೇ ? "

" ಸಾಕ್ಷಿ ! "

" ಹೌದು. ನಿಮ್ಮ ಕಣ್ಣೆದುರಿಗೇ ಇದೆ "

" ಎಲ್ಲಿ ? "

" ಈ ಕಾಂಪೌಂಡಿನಲ್ಲಿರುವ ಇತರ ಕಟ್ಟಡಗಳಲ್ಲಿ - ನಿಮ್ಮ ಸ್ಟೂಡಿಯೊ ಕೆಳಗೆ ಏನಿವೆ ಗೊತ್ತಿದೆಯೋ ? "

" ಇಲ್ಲ. "

" ರಾತ್ರಿಯೆಲ್ಲಾ, ಇಲ್ಲಿ ಲಾರಿಗಳು ಓಡಿಯಾಡುವುದಾದರೂ ಕೇಳಿರುವಿರಲ್ಲವೇ ? "

" ಕೇಳಿದ್ದೇನೆ - ಇಲ್ಲಿ ಜರೀವಾಲಾ ಅವರ ಗೋಡೌನ್ ಇದೆ ಎನ್ನುವದು ನನಗೆ ಗೊತ್ತಿದೆ. "

" ಗೋಡೌನಿನಲ್ಲಿರುವ ಸಾಮಾನುಗಳೇನೆಂದು ಬಲ್ಲಿರಾ ? "

" ಇಲ್ಲ. "

" ವಿಸ್ಕಿ, ಬ್ರ್ಯಾಂದಿ, ಅಫೀಮು. "

" ಜರೀವಾಲಾ ಈ ಉದ್ಯೋಗ ಮಾಡುತ್ತಿದ್ದಾರೆಯೇ ? "

" He is an inter - national racketeer and boot - legger "

" ಮಿಸ್. ತಾಜರಿಗೆ ಈ ವಿಷಯ ಗೊತ್ತೇ ? "

" ಜರೀವಾಲರ ಗೈರು ಹಾಜರಿಯಲ್ಲಿ ಈ ವ್ಯವಹಾರ ನಡೆಸುವವಳೇ ಮಿಸ್. ತಾಜ್. "

" ಮಿಸ್. ತಾಜ್ ಕಮ್ಯುನಿಸ್ಟ್ ಆಗಿದ್ದಾರಲ್ಲಾ ರಣಧೀರಜೀ. "

ರಣಧೀರ ಗಹಗಹಿಸಿ ನಕ್ಕ.

" ಕಮ್ಯುನಿಸ್ಟ್ ಪಾರ್ಟಿಯಲ್ಲಿ ಇನ್ನೂ ಎಂಥೆಂಥವರಿದ್ದಾರೆ ನಿಮಗೇನು ಗೊತ್ತು. ಅವನು - ಅವನೇ ಬ್ಯಾಂಕಿನ ಹಣ ಛಪಾವಣೆ ಮಾಡಿದ ದಗಾ ಖೋರ. "

ಶ್ರೀಕಂಠ ಭೂಮಿಗಿಳಿದು ಹೋದ.

" ನೀವು ದೇವಾಧಿದೇವತೆಗಳ ಶಿಲ್ಪಗಳನ್ನು ಮಾಡಿರುವಿರಂತೆ ! "

" ಹೌದು – ಮಾಡಿದ್ದೇನೆ. "

" ದೇವಮಂಡಲದಲ್ಲಿ ಜರೀವಾಲನಿಗೆ ಎಲ್ಲಿ ಸ್ಥಳ ಕೊಡುವಿರಿ ? "

" ನನಗೆ ಬುದ್ಧಿ ಭ್ರಂಶವಾಗಿದೆ ರಣಧೀರಜೀ – ನಿಮ್ಮ ಪ್ರಶ್ನೆಗೆ ಏನು ಹೇಳಬೇಕೋ ತಿಳಿಯದು. "

" ಈಗಲೂ ನನ್ನ ಮಾತು ಕೇಳುವಿರಾ ? "

" ಏನು - ಹೇಳಿ. "

" ಇಲ್ಲಿಂದ ಈ ಕೂಡಲೆ ಹೊರಟು ಹೋಗಿ. ಪುನಃ ಮುಂಬಯಿ ಮುಖ ನೋಡಬೇಡಿ. ಇದು ಕಲಾವಿದರ ರುದ್ರಭೂಮಿ. ಇಲ್ಲಿ ಕಲೆ ಬೆಳೆಯು ವುದಿಲ್ಲ - ಹಣ ಬೆಳೆಯುತ್ತದೆ. ಕಲೆಗೆ ರಕ್ತ ಬಸಿಯಬೇಕು - ಹಣಕ್ಕೆ ರಕ್ತ ಹೀರಬೇಕು. ಕಂಡವರ ರಕ್ತ ಹೀರುವ ಸಾಮರ್ಥ್ಯ ನಿಮಗಿದ್ದರೆ ಬೊಂಬಾಯಿ ನಿಮಗೆ ತಕ್ಕ ಸ್ಥಳ – ಇಲ್ಲದಿದ್ದರೆ ಇಲ್ಲಿ ಕ್ಷಣಕಾಲ ನಿಲ್ಲಬೇಡಿ. "

ಎಂದು ಹೇಳುತ್ತಲೇ ಹೊರಟು ಹೋದ.

ಸಿಡಿಲಿನಾಘಾತಕ್ಕೆ ಸಿಕ್ಕಿದವರಂತೆ ಶ್ರೀಕಂಠ ತಲೆಯ ಮೇಲೆ ಕೈಹೊತ್ತು ಕುಳಿತು ಬಿಟ್ಟ.

# ೧೧

ಬೆಳಿಗ್ಗೆಯಾದರೂ ಶ್ರೀಕಂಠನ ಮಂಪರು ಹರಿದಿರಲಿಲ್ಲ. ರಣಧೀರನ ನುಡಿ ಪುನಃ ಪುನಃ ಅವನ ಮನಸ್ಸನ್ನು ಹಿಂಡುತ್ತಿತ್ತು.

' ಮುಂಬಯಿ ಕಲಾವಿದರ ರುದ್ರಭೂಮಿ - ಇಲ್ಲಿ ಕಲೆ ಬೆಳೆಯುವುದಿಲ್ಲ - ಹಣ ಬೆಳೆಯುತ್ತದೆ.'

' ಕಲೆಗೆ ರಕ್ತ ಬಸಿಯಬೇಕು.

ಹಣಕ್ಕೆ ರಕ್ತ ಹೀರಬೇಕು.

ಶ್ರೀಕಂಠನ ಹೃದಯದಲ್ಲಿ ತಳಮಳವಾಯಿತು.

' ನನ್ನ ಶಕ್ತಿಯನ್ನು ನಾನು ದುರುಪಯೋಗಪಡಿಸಿದ್ದೇನೆಯೇ ? '

ಎಂದು ಚಿಂತಿಸುತ್ತಿರುವಂತೆ ಪ್ರಭಾದೇವಿಯನ್ನೂ ರಾಜುವನ್ನೂ ನೋಡುವ ಉತ್ಕಟೇಚ್ಛೆ ಹುಟ್ಟಿತು. ಸ್ನಾನ ಮುಗಿಸಿಕೊಂಡು ರಾಜು ಮನೆಗೆ ಹೋಗಿ ಅವನನ್ನು ಕಂಡು, ಎಲ್ಲವನ್ನೂ ಅವನಿಗೆ ನಿವೇದಿಸಿಕೊಂಡು, ಅವನು ಹೇಳಿದಂತೆ ಮಾಡುವುದೆಂದು ನಿಶ್ಚಯಿಸಿಕೊಂಡ.

ಶ್ರೀಕಂಠ ಸ್ನಾನ ಮುಗಿಸಿಕೊಂಡು, ವಸ್ತ್ರ ಧರಿಸಿ ಹೊರಬರುವಷ್ಟರಲ್ಲಿ ತಾಜ್ ಬಂದು ದಿವಾನಖಾನೆಯಲ್ಲಿ ಕುಳಿತಿದ್ದಳು. ತಾಜಳನ್ನು ಕಂಡೊಡನೆಯೆ ಶ್ರೀಕಂಠನ ಮುಖ ಆರಕ್ತವಾಯಿತು. ತಾಜ್ ನಸುನಗುತ್ತಾ

" ಶಿಲ್ಪಿಗಳು ಹೇಗಿದ್ದಾರೆ ? " ಎಂದು ಕೇಳಿದಳು.

" ಚೆನ್ನಾಗಿದ್ದೇನೆ. "

" ಎಲ್ಲೋ ಹೊರಟಿರುವಂತೆ ಕಾಣುತ್ತದೆ. "

" ಹೌದು - ನನ್ನ ಗೆಳೆಯನನ್ನು ನೋಡಲು ಹೊರಟಿದ್ದೆ. "

" ಗೆಳೆಯನನ್ನು ನಾಳೆ ನಾಡಿದ್ದು ನೋಡಿದರಾಯಿತು. "

" ಏಕೆ ಮಿಸ್. ತಾಜ್ ? "

" ನಾನು ಇಷ್ಟು ಬೇಗ ಬಂದಿರುವುದೇಕೆ ಗೊತ್ತೇ ? "

" ಇಲ್ಲ. "

" ನಿಮ್ಮನ್ನು ಲೋನಾವಲಕ್ಕೆ ಕರೆದೊಯ್ಯುವುದಕ್ಕೆ. ನಿಮಗೆ ಖಂಡಾಳಾ ಘಟ್ಟವನ್ನು ತೋರಿಸಬೇಕೆಂದಿದ್ದೇನೆ. ಸತತ ಶ್ರಮದಿಂದ ನಿಮಗೆ ಆಯಾಸವೂ

ಆಗಿದೆ. ಸ್ವಲ್ಪ ವಿಶ್ರಾಂತಿ ಪಡೆದ ಹಾಗಾಗುತ್ತದೆ."

'ನಾನು ಬರಲು ಸಾಧ್ಯವಿಲ್ಲ - ಗೆಳೆಯನನ್ನು ನೋಡಲೇ ಬೇಕು' ಎಂದು ಹೇಳಲು ಹೃದಯ ತವಕಪಟ್ಟಿತು. ಆದರೆ ನಾಲಗೆ

"ಹೊರಡುವುದು ಯಾವಾಗ" ಎಂದು ಕೇಳಿಯೇ ಬಿಟ್ಟಿತು.

"ಯಾವಾಗ ಎಂದರೆ - ಈಗಲೇ !"

"ನಾನು ಸಿದ್ಧತೆ ಮಾಡಿಕೊಳ್ಳಬೇಡವೇ ?"

"ಉಪಯೋಗಕ್ಕೆ ಬೇಕಾದ ನಾಲ್ಕು ಬಟ್ಟೆ ತೆಗೆದುಕೊಳ್ಳಿ."

"ನಿಮ್ಮ ಮಾತು – ಕೆಲಸವೆಲ್ಲಾ ಮಿಂಚಿನಂತೆ ಮಿಸ್. ತಾಜ್."

ತಾಜ್ ಸುಮ್ಮಾನದಿಂದ ನಗುತ್ತಾ

"ಹೌದು. ಡ್ಯಾಡಿಯೂ ಅದೇ ಹೇಳುತ್ತಾರೆ. ವಿಶ್ವಾಸಕ್ಕೆ ನನ್ನನ್ನು ಬ್ಲಿಟ್ಸ್‌ಕ್ರೀಗ್ (Blitzkreig) ಎಂದು ಕರೆಯುತ್ತಾರೆ."

"ಇವತ್ತು ನಾವು ಹೊರಟರೆ ಹಿಂದಿರುಗುವುದು ಯಾವಾಗ ?"

"ನಾಳೆ - ನಾಡಿದ್ದು. ಬೇಗ ಹೊರಡಿ - ಕಾರ್ಯಕ್ರಮವನ್ನೆಲ್ಲಾ ನಾನು ನಿಶ್ಚಯಿಸಿದ್ದೇನೆ. ಗ್ರೀನ್ಸ್‌ಗೆ ಹೋಗಿ ಬ್ರೆಕ್ ಫಾಸ್ಟ್ (Break fast) ಮಾಡಿಕೊಂಡು ಲಂಚ್ ವೇಳೆಗೆ ಲೋನಾವಲಾ ಮುಟ್ಟಬೇಕು."

"ಲೋನಾವಲಾ ಇಲ್ಲಿಗೆ ಎಷ್ಟು ದೂರವಾಗುತ್ತದೆ ?"

"ಎಂಭತ್ತೇ ಮೈಲಿ. ಕಾರಿನಲ್ಲಿ ಎರಡೇ ಗಂಟೆಗಳ ಪ್ರಯಾಣ."

ಪ್ರಬಲವಾದ ಲೋಹಚುಂಬಕಕ್ಕೆ ಸಿಕ್ಕಿದ ಕಬ್ಬಿಣ ತುಂಡಿನಂತೆ ಶ್ರೀಕಂಠ ತನ್ನ ಕೈಚೀಲಕ್ಕೆ ನಾಲ್ಕಾರು ಬಟ್ಟೆಗಳನ್ನು ತುರುಕಿಕೊಂಡು ಅವಳನ್ನು ಹಿಂಬಾಲಿಸಿದ. ಮಿಸ್. ತಾಜ್ ಅಂಜಾರಿಯಾನನ್ನು ಕರೆದು ಗುಟ್ಟಾಗಿ ಅವನಿಗೆ ಕೆಲವು ಸೂಚನೆಗಳನ್ನಿತ್ತಳು.

ಅದೇ ಮಧ್ಯಾಹ್ನ ಶ್ರೀಕಂಠನನ್ನು ಕಾಣಲು ಬಂದ ಪ್ರಭಾದೇವಿ ಅವನ ರೂಮಿಗೆ ಹಾಕಿದ್ದ ದಪ್ಪ ಬೀಗ ಕಂಡು ಆಶ್ಚರ್ಯ ಚಕಿತಳಾದಳು. ಅಂಜಾರಿಯಾನನ್ನು ಕಂಡು

"ಶಿಲ್ಪಿಗಳೆಲ್ಲಿ ?" ಎಂದು ಕೇಳಿದಳು.

"ಬೆಳಿಗ್ಗೆ ಎಲ್ಲಿಗೋ ಹೋದರು."

"ಎಲ್ಲಿಗೆ ಹೋದರು ?"

ದಿಂದಲೂ ಅಲ್ಲ."

"ಗೊತ್ತಿಲ್ಲ."

"ಯಾವಾಗ ಹಿಂದಿರುಗುತ್ತಾರೆ."

"ಅದನ್ನು ತಿಳಿಸಲಿಲ್ಲ."

"ಊರ ಹೊರಗೆ ಹೋಗಿದ್ದಾರೆಯೇ?"

"ಇರಬಹುದೆಂದು ಕಾಣುತ್ತದೆ."

"ಒಬ್ಬರೇ ಹೋದರೋ ಜತೆಯಲ್ಲಿ ಯಾರಾದರೂ ಹೋದರೋ?"

"ಅದನ್ನು ನಾನು ಗಮನಿಸಲಿಲ್ಲ ಮಿಸ್. ಪ್ರಭಾದೇವಿ."

ಪ್ರಭಾ ಕೂಡಲೆ ಸುದ್ದಿಯನ್ನು ರಾಜೂಗೆ ಮುಟ್ಟಿಸಿದಳು. ಇಬ್ಬರ ಮನಸ್ಸೂ ಅವರ್ಣನೀಯ ದುಃಖಕ್ಕೀಡಾಯಿತು.

ಪ್ರತಿನಿತ್ಯ ಪ್ರಭಾ, ರಾಜೂ ಮಲಬಾರ್ ಹಿಲ್ಲಿಗೆ ಯಾತ್ರೆ ಮಾಡತೊಡಗಿದರು. ಅಂಜಾರಿಯಾ ಒಂದೇ ಉತ್ತರ ಹೇಳುತ್ತಿದ್ದ

"ಅವರಿನ್ನೂ ಬಂದಿಲ್ಲ - ಯಾವಾಗ ಬರುವರೋ ಗೊತ್ತಿಲ್ಲ."

ಹೃದಯವನ್ನು ಹಿಂಡುತ್ತಿದ್ದ ದುಃಖ ಸಹಿಸಲಾಗದೆ ಪ್ರಭಾದೇವಿ

"ಅವರು ದಾದರ್ ಬಿಟ್ಟು ಮಲಬಾರ್ ಹಿಲ್ಲಿಗೆ ಹೋಗುವುದಕ್ಕೆ ನಾವು ಬಿಡಬಾರದಾಗಿತ್ತು." ಎಂದಳು.

"ತಪ್ಪು ನನ್ನದು ಪ್ರಭಾ. ಶ್ರೀಕಂಠನಿಗೆ ತಾಜಳ ಪರಿಚಯ ಮಾಡಿಸಿದುದೇ ಅಪರಾಧವಾಯಿತು.

"ನೀನು ಸದುದ್ದೇಶದಿಂದಲೇ ಪರಿಚಯ ಮಾಡಿಕೊಟ್ಟೆ ರಾಜೂ."

"ಹೌದು. ದೊಡ್ಡ ಆರ್ಡರು - ಕೈತುಂಬ ಹಣ ಬರುತ್ತದೆ ಎಂದಷ್ಟೇ ನಾನು ಲೆಕ್ಕ ಹಾಕಿದುದು."

"ಮನುಷ್ಯ ಪ್ರಯತ್ನದ ವಿರುದ್ಧ ದೈವ ಸಂಚು ಹೂಡುತ್ತಲೇ ಇರುತ್ತದೆ."

"ಶ್ರೀಕಂಠನ ಭವಿಷ್ಯ ಜ್ಞಾಪಿಸಿಕೊಂಡರೆ ನನ್ನ ಮೈಯಲ್ಲಿ ನಡುಕ ಹುಟ್ಟುತ್ತದೆ ಪ್ರಭಾ."

"ಏಕೆ ?"

"ರಣಧೀರಜೀಯವರ ಗತಿ ಜ್ಞಾಪಿಸಿಕೋ."

" ರಾಜ್, ಶ್ರೀಕಾಂತನಿಂದ ದೂರವಿದ್ದು ನಾವು ತಪ್ಪು ಮಾಡಿದೆವು. "

" ಚೆಲ್ಲಿಹೋದ ಹಾಲನ್ನು ನೆನಸಿಕೊಂಡು ಅತ್ತರೆ ಪ್ರಯೋಜನವಿಲ್ಲ ಪ್ರಭಾ - ಉಳಿದಿರುವ ಹಾಲನ್ನು ರಕ್ಷಿಸಿಕೊಳ್ಳುವ ಪ್ರಯತ್ನ ಮಾಡಬೇಕು. "

ಶ್ರೀಕಂಠನನ್ನು ರಕ್ಷಿಸುವ ಪ್ರಯತ್ನ ಹೇಗೆ ಮಾಡಬೇಕೆಂಬುದನ್ನೇ ಇಬ್ಬರೂ ಆಳವಾಗಿ ವಿಚಾರ ಮಾಡತೊಡಗಿದರು.

ತಾಜ್ ಮತ್ತು ಶ್ರೀಕಂಠ ಲೋನಾವಲಾದಿಂದ 'ಒಂದೆರಡು' ದಿನಗಳಲ್ಲಿ ಹಿಂದಿರುಗಲಿಲ್ಲ. ಅವರು ಹಿಂದಿರುಗಲು ಹತ್ತು ದಿವಸಗಳಾದವು.

ಪ್ರಭಾ, ರಾಜು ನಿತ್ಯವೂ ಬಂದು ಹೋಗುತ್ತಿದ್ದ ಸಂಗತಿಯನ್ನು ಅಂಜಾರಿಯಾ ಗುಟ್ಟಾಗಿ ತಾಜಳಿಗೆ ಅರಿಕೆ ಮಾಡಿಕೊಂಡ. ತಾಜ್ ಕನಲಿ

" ಅವರನ್ನೇಕೆ ಒಳಗೆ ಬಿಟ್ಟೆರಿ " ಎಂದು ಕೇಳಿದಳು.

" ಶಿಲ್ಪಿಗಳನ್ನು ಹುಡುಕಿಕೊಂಡು ಬಂದರೆ........ "

" ಯಾರನ್ನು ಹುಡುಕಿಕೊಂಡು ಬಂದರೂ ಒಳಕ್ಕೆ ಬಿಡಬೇಡಿ - ಭಯ್ಯನಿಗೂ ಈ ವಿಷಯ ತಿಳಿಸಿ. ಫೋನ್ ಕಾಲ್ ಬಂದರೆ ಶಿಲ್ಪಿಗಳಿಗೆ ತಿಳಿಸಿ. ಕಾಲ್ ಮಾಡಿದವರಿಗೆ ' ಶಿಲ್ಪಿಗಳು ಇಲ್ಲಿಲ್ಲ ' ಎಂದು ತಿಳಿಸಿಬಿಡಿ. "

" ಹಾಗೇ ಆಗಲಿ ಮೆಮ್ ಸಾಹೇಬ್ "

ಎಂದು ಅಂಜಾರಿಯಾ ಡೊಗ್ಗು ಸಲಾಮು ಹೊಡೆದ.

ಶ್ರೀಕಂಠನಿಗೆ ನವೋತ್ಸಾಹ ಬಂದಿತ್ತು. ಮನಸ್ಸನ್ನು ಕೊರೆಯುತ್ತಿದ್ದ ಸಮಸ್ಯೆಗಳು, ಚಿಂತೆಗಳು ದೂರವಾಗಿದ್ದವು. ಯಾವದೋ ಅವ್ಯಕ್ತಶಕ್ತಿ ಹೊಸಕೃತಿಗಳ ನಿರ್ಮಾಣಕ್ಕೆ ಅವನನ್ನು ಪ್ರೇರೇಪಿಸಿತ್ತು.

ಲೋನಾವಲಾದಲ್ಲಿ ಕಳೆದ ದಿನಗಳ ನೆನಪು ಅಸ್ಪಷ್ಟವಾಗುತ್ತಿದ್ದರೂ, ಖಂಡಾಳಾ ಘಟ್ಟಕ್ಕೆ ಹೋಗಿ ಬಂದುದು ಚಿರಸ್ಥಾಯಿಯಾಗಿ ಚಿತ್ತದ ಮೇಲೆ ಮೂಡಿತ್ತು. ಬೆಟ್ಟ ಗುಡ್ಡಗಳ ಸಾಲು— ಕಣ್ಣು ಚಾಚಿದಷ್ಟು ಬೆಟ್ಟ — ಗುಡ್ಡಗಳೇ. ಮುಗಿಲನ್ನು ಮುಟ್ಟಲು ಮೆಟ್ಟಲು ಕಾಲು ಮೇಲೆ ನಿಂತಂತೆ ಕಾಣುತ್ತಿತ್ತು. ಅವುಗಳ ಮಧ್ಯೆ ಕಣಿವೆಗಳು - ಅಲ್ಲಲ್ಲಿ ಕಂದರಗಳು - ಎತ್ತರದಷ್ಟೇ ಗಾಢವಾಗಿದ್ದ ಕೊಂಕಲು. ರುದ್ರರಮಣೀಯವಾಗಿದ್ದ ಪ್ರಕೃತಿ ಮಾನವನನ್ನು ದ್ವೇಶಿಸಿ ' ನೀನೆಷ್ಟರವನು ' ಎಂದು ಕೇಳುವಂತಿತ್ತು. ಅದನ್ನೇ ದಿಟ್ಟಿಸಿ ನೋಡುತ್ತಿದ್ದ ಶ್ರೀಕಂಠನ ಮನಸ್ಸಿಗೆ ಭಯವಾಗಿ, ನಾನೆಷ್ಟರವನು ಎನ್ನುವ

ಚಿತ್ತದಾಸ್ಯ ಮೊಳೆಯಲಿಲ್ಲ. ಆ ಪರ್ವತ ಪಂಕ್ತಿಯನ್ನು ತಿರಸ್ಕರಿಸುವದಂತೂ ಸಾಧ್ಯವೇ ಇರಲಿಲ್ಲ.

ಬೆಟ್ಟಗಳ ಸಾಲಿನಲ್ಲಿ ಎಲ್ಲಕ್ಕೂ ಎತ್ತರವಾಗಿದ್ದ ಒಂದು ಬೆಟ್ಟ ಶ್ರೀಕಂಠನ ಗಮನವನ್ನು ಸೆಳೆಯಿತು. ಅದರಲ್ಲಿ ಏನೋ ಒಂದು ರಹಸ್ಯ ಅಡಕವಾಗಿತ್ತು. ಶತಮಾನಗಳು ಅಲುಗಾಡದೆ ದಿಟ್ಟತನದಿಂದ ನಿಂತಿದ್ದ ಬೆಟ್ಟ ಶತಮಾನಗಳ ಅನುಭವ ಕಂಡುಂಡು ಘನಗಂಭೀರವಾಗಿತ್ತು ಅದರ ರಹಸ್ಯ ಭೇದಿಸಬೇಕೆಂಬ ಭಾವನೆ ಶ್ರೀಕಂಠನ ಮನಸ್ಸಿನಲ್ಲಿ ಹೊಳೆದೊಡನೆಯೇ ಬೆಟ್ಟ ತಿರಸ್ಕಾರದಿಂದ ನಕ್ಕಂತಾಯಿತು. ಶ್ರೀಕಂಠ ರಹಸ್ಯ ಭೇದಿಸಲು ಅಸಮರ್ಥನಾಗಿದ್ದಾನೆಂಬ ಅನುಮಾನವೇ ? – ಇರಲಾರದು ! ರಹಸ್ಯ ಭೇದಿಸುವಷ್ಟು ಚಿತ್ತನಿರೋಧ, ತಾಳ್ಮೆ, ಶಾಂತಿ ಶಿಲ್ಪಿಯಲ್ಲಿದೆಯೇ ಎಂದು ಬೆಟ್ಟ ಏಡಿಸಿ ಕೇಳುತ್ತಿತ್ತು.

ಮುಂಬಯಿಗೆ ಹಿಂದಿರುಗಿದೊಡನೆಯೇ ತನ್ನ ಕೃತಿಗೆ ಅವಶ್ಯಕವಾದ ಸಾಮಗ್ರಿಗಳನ್ನು ಹೊಂದಿಸಿಕೊಳ್ಳತೊಡಗಿದ. ಶಿಲ್ಪದ ನಿಲುವಲೆಗೆ (Stand), ಪ್ಲಾಸ್ಟರ್, ಮಾಡೆಲ್ ಧರಿಸುವ ಕೃತಕ ಹೂಗಳನ್ನು ಸಿದ್ಧಮಾಡಿಟ್ಟುಕೊಂಡ. ಶಿಲ್ಪದ ಪೂರ್ವ ಭಾವಿ ಚಿತ್ರಗಳೂ ಸಿದ್ಧವಾದವು.

ಮಾರನೆಯ ಬೆಳಿಗ್ಗೆ ಬಂದ ತಾಜಳಿಗೆ ಪೂರ್ವ ಭಾವಿ ಚಿತ್ರಗಳನ್ನು ತೋರಿಸುತ್ತಾ

" ಶಿಲ್ಪದ ಭಾವಭಂಗಿ ನಿನಗೆ ಒಪ್ಪಿತವೇ ತಾಜ್. "

" ಸೊಗಸಾಗಿದೆ. ನಿತ್ಯ ನಾನು ಎಷ್ಟು ಹೊತ್ತು ಕೊಡಬೇಕು ? "

" ಎರಡು ಮೂರು ಗಂಟೆ ಕುಳಿತರೆ ಸಾಕು. ಮಧ್ಯೆ ಮಧ್ಯೆ ಸ್ವಲ್ಪ ವಿಶ್ರಮಿಸಿಕೊಳ್ಳಬಹುದು. "

" ಇದು ನಿನ್ನ ಪರಮೋತ್ಕೃಷ್ಟ ಕೃತಿ (Masterpiece) ಯಾಗಬೇಕು ಶ್ರೀಕಾಂತ್ ಡಿಯರ್. "

" ಕಾಳಿದಾಸನ ' ಶಾಕುಂತಲ ' ಕೃತಿ ಸಾಹಿತ್ಯ ಪ್ರಪಂಚದ ಸಾಮ್ರಾಜ್ಞಿ - ನನ್ನ ಕೃತಿ ಶಿಲ್ಪ ಪ್ರಪಂಚದ ಸಾಮ್ರಾಜ್ಞಿ — ನೀನು ನನ್ನ ಹೃದಯದ ಸಾಮ್ರಾಜ್ಞಿ. "

" ನೀವು ಕಲಾವಿದರು – ಬಹು ಚಂಚಲಚಿತ್ತರು. "

" ಇಲ್ಲ ತಾಜ್ – ನನ್ನ ಚಿತ್ತವೇ ನಿನ್ನ ಸೊತ್ತಾಗಿರುವಾಗ ಅದರಲ್ಲಿ

ಚಾಂಚಲ್ಯ ಹೇಗೆ ಬರಬೇಕು."

"ಶ್ರೀಕಾಂತ್, ನೀನು ನಿಜವಾಗಿ ನನ್ನನ್ನು ಪ್ರೀತಿಸುವೆಯಾ??

"ಆ ಪ್ರಶ್ನೆಗೆ ನಾನು ಈಗ ಉತ್ತರ ಹೇಳಲೊಲ್ಲೆ. ನನ್ನ 'ಶಾಕುಂತಲ' ನಿನಗೆ ಉತ್ತರ ಹೇಳುತ್ತದೆ."

"ನನ್ನ ತಂದೆ ತಾಯಿಗಳಿಗೆ ನಾನೊಬ್ಬಳೇ ಮಗಳು. ಅವರಿಗೆ ಗಂಡು ಮಕ್ಕಳಿಲ್ಲ. ನನ್ನನ್ನು ಬಹು ಅಕ್ಕರೆಯಿಂದ ಗಂಡುಮಗನಂತೆ ಬೆಳಸಿದರು. ಅಡ್ಡಿ ಆತಂಕಗಳೆಂದರೇನೆಂಬುದನ್ನೇ ನಾನರಿಯೆ."

"ಪಳಗಿಸಿದ ಸರ್ಕಸ್ ಸಿಂಹಕ್ಕಿಂತ, ಕಾಡಿನ ಸ್ವತಂತ್ರ ಸಿಂಹವೇ ಹೆಚ್ಚು ಸುಂದರ."

"ನನ್ನ ಮಾತಿಗೆ ಯಾರೂ ಪ್ರತಿ ಹೇಳುವುದಿಲ್ಲ – ನೀನೂ ಹೇಳ ಬಾರದು."

"ನಾನು ಪ್ರತಿ ಹೇಳುವುದಿಲ್ಲವೆನ್ನುವುದು ಈ ಹತ್ತು ದಿವಸಗಳಲ್ಲಿ ನಿನಗೆ ತಿಳಿದಿರಬೇಕು."

"ನೀನು ಇನ್ನು ಯಾರನ್ನೂ ಪ್ರೀತಿಸುವುದಿಲ್ಲವೇ ಶ್ರೀಕಾಂತ್."

"ಸಮುದ್ರದ ಪ್ರಚಂಡ ಪ್ರವಾಹಕ್ಕೆ ಸಿಕ್ಕಿ ದೋಣಿ ಸಾಗಿಹೋಗುತ್ತಿರುವಾಗ ಅದು ಅಲ್ಲಲ್ಲಿ ನಿಂತು ಸುತ್ತಮುತ್ತ ನೋಡಲು ಸಾಧ್ಯವೇ?"

"ಪ್ರಭಾದೇವಿ...."

"ಆಕೆ ಗೆಳತಿಯಷ್ಟೇ! ಗೆಳೆಯ ಗೆಳತಿಯನ್ನು ಪ್ರೀತಿಸುವಂತೆ ಆಕೆಯನ್ನು ಪ್ರೀತಿಸುತ್ತೇನೆ."

"ನನ್ನ ಪ್ರೀತಿ ಅದಕ್ಕೂ ಅವಕಾಶಕೊಡುವುದಿಲ್ಲ ಶ್ರೀಕಾಂತ್. ನಾನು ಅಗ್ನಿಪೂಜಕಳು. ನನ್ನ ಪ್ರೀತಿಯೂ ಅಗ್ನಿಯಂತೆ ಸರ್ವವ್ಯಾಪಿ - ಸರ್ವಭಕ್ಷಕ.

ಅದು ನಿನ್ನೆಲ್ಲ ಪ್ರೀತಿ, ವಿಶ್ವಾಸವನ್ನು ಬಲಿದಾನವಾಗಿ ಅಪೇಕ್ಷಿಸುತ್ತದೆ."

"ನನ್ನ ಪ್ರೀತಿ, ವಿಶ್ವಾಸವನ್ನು ಬಲಿದಾನವಾಗಿ ಅರ್ಪಿಸಿರುವೆನಲ್ಲಾ!"

ನನ್ನ ಯಾವ ಚಲನವಲನಕ್ಕೂ ನಿನ್ನಿಂದ ಅಡ್ಡಿ ಬರಕೂಡದು."

"ಬರುವುದಿಲ್ಲ."

"ನಾನು ನಿನ್ನನ್ನು ಪ್ರೀತಿಸುವುದು ನಿಲ್ಲಿಸಿದರೆ....?"

"ನಿಲ್ಲಿಸುವೆಯಾ?"

" ಇಲ್ಲ – ಮಾತಿಗೆ ಕೇಳಿದೆ "

" ಪ್ರೀತಿ ಮರುಪ್ರೀತಿಯನ್ನು ಬಯಸುವುದು ವ್ಯಾಪಾರವಾಗುತ್ತದೆ. ನೀನು ನಿನ್ನ ಪ್ರೀತಿಯನ್ನು ನಿಲ್ಲಿಸಬಹುದು - ನನ್ನ ಪ್ರೀತಿಯನ್ನು ನಿಲ್ಲಿಸಲಾರೆ."

" ನಿನ್ನಿಂದ ದೂರ ಹೋದರೆ ? ".

" ನನ್ನ ಮನಸ್ಸಿನಿಂದ ದೂರ ಹೋಗಲಾರೆ. "

" ನಿನ್ನನ್ನು ಸಂಪೂರ್ಣವಾಗಿ ನಿರಾಕರಿಸಿದರೆ ? "

" ಅದು ನನ್ನ ಪರಮ ದೌರ್ಭಾಗ್ಯದ ದಿನವೆಂದು ಭಾವಿಸುತ್ತೇನೆ. "

" ಒಳ್ಳೆಯದು - ಇನ್ನು ಹೊತ್ತು ಕಳೆಯುವುದು ಬೇಡ - ನಾನು ಎಲ್ಲಿ ಹೇಗೆ ಕೂಡಬೇಕು. "

" ವಸ್ತು ಕಾಳಿದಾಸನ ಶಾಕುಂತಲದ್ದು. ಶಾಕುಂತಲ ಓದಿರುವೆಯಷ್ಟೆ?"

" ನನ್ನನ್ನು ನಿರಕ್ಷರಕುಕ್ಷಿಯೆಂದು ತಿಳಿದಿರುವೆಯಾ ? ಇಂಗ್ಲಿಷ್, ಫ್ರೆಂಚ್, ಜರ್ಮನ್ ಭಾಷೆಗಳಲ್ಲಿ ಶಾಕುಂತಲ ಓದಿದ್ದೇನೆ. "

" ಸನ್ನಿವೇಶವನ್ನು ನಾನು ಹೀಗೆ ಕಲ್ಪಿಸಿಕೊಂಡಿದ್ದೇನೆ — ಶಕುಂತಲೆಯ ಮೆಚ್ಚಿನ ಜಿಂಕೆ ಬಾಯಾರಿಕೆಯಿಂದ ಬಳಲಿ ಅವಳ ಬಳಿಗೆ ಬರುತ್ತದೆ. ಶಕುಂತಲೆ ಕಮಲದೆಲೆಯಿಂದ ದೊನ್ನೆ ಮಾಡಿ, ನೀರು ಹಿಡಿದು ಜಿಂಕೆಗೆ ಕುಡಿಸುತ್ತಾಳೆ. ಜಿಂಕೆ ಸಂತೃಪ್ತಿ ಹೊಂದಿ ತನ್ನ ವಿಶ್ವಾಸವನ್ನು ವ್ಯಕ್ತಪಡಿಸುತ್ತದೆ. ಶಕುಂತಲೆ ಅದರ ಕುತ್ತಿಗೆ ಸವರಿ ಮುದ್ದಿಸುತ್ತಾಳೆ. ಶಿಲ್ಪದಲ್ಲಿ ಶಕುಂತಲೆ ಜಿಂಕೆಯನ್ನು ನೇವರಿಸುತ್ತಿರುವಂತೆ ತೋರಿಸುತ್ತೇನೆ. ತೃಪ್ತಿ ಸಂತೋಷದಿಂದ ಜಿಂಕೆ ಶಕುಂತಲೆಯ ಪ್ರೇಮಾರಾಧನೆಯನ್ನು ಸ್ವೀಕರಿಸುತ್ತಿದೆ. ಅವರ ಸಂತೋಷ ಶಕುಂತಲೆಯಲ್ಲಿ ಸಹಸ್ರಾಂಶ ಸಂತೋಷಕ್ಕೆಡೆಕೊಟ್ಟಿದೆ. "

" ಶಿಲ್ಪಕ್ಕೇನು ಹೆಸರಿಡುವೆ? "

" ಒಡನಾಡಿಗಳು ಮಾನವಹೃದಯದ ನಿಸ್ಸೀಮ, ಅವ್ಯಾಜ ಪ್ರೇಮ ಮೃಗ, ಪಕ್ಷಿಗಳನ್ನೂ ಅಪ್ಪಿಕೊಳ್ಳುತ್ತದೆಯೆನ್ನುವುದೇ ಮೂಲತತ್ತ್ವ. "

" ಇದು ನಿನ್ನ ಸರ್ವೋತ್ಕೃಷ್ಟ ಕೃತಿಯಾಗುವುದರಲ್ಲಿ ಸಂದೇಹವಿಲ್ಲ ಶ್ರೀಕಾಂತ್. "

" ಅದರ ಉತ್ಕೃಷ್ಟತೆ ನಿನ್ನ ಸಹಕಾರವನ್ನವಲಂಬಿಸುತ್ತವೆ ತಾಜ್. "

" ನನ್ನ ಸಹಕಾರ ಸದಾ ಸಿದ್ಧ. ನಾನು ಬಟ್ಟೆ ಬದಲಾಯಿಸಿಕೊಂಡು

ಕೂಡಬೇಕಲ್ಲವೇ ? ”

“ ಹೌದು. ಶಕುಂತಲೆ ವನಕುಮಾರಿ. ಅವಳು ಧರಿಸಿರುವುದು ಶ್ವೇತ ದುಕೂಲ. ”

“ ಮೈಗೇನು ಹಾಕಿಕೊಳ್ಳಬೇಕು. ”

“ ಏನೂ ಬೇಡ — ಕಣ್ವರ ಕಾಲ ಕ್ರಿಸ್ತ ಪೂರ್ವದ್ದೆಂದು ನಾವು ಇಟ್ಟು ಕೊಂಡರೆ ಆ ಕಾಲದಲ್ಲಿ ಕುಪ್ಪಸತೊಡುವ ಅಭ್ಯಾಸವಿರಲಿಲ್ಲ. ಅಜಂತಾವಾದರಿ ಯಲ್ಲಿ ಸೀರೆಯುಟ್ಟು ಮೇಲೆ . ತೆಳುವಾದ ಉತ್ತರೀಯ ಧರಿಸಿದರೆ ಸಾಕು. ಲೋಹದ ಆಭರಣಗಳನ್ನೆಲ್ಲಾತೆಗೆದಿಟ್ಟು ಹೂಗಳಿಂದಲೇ ಅಲಂಕರಿಸಿಕೊಳ್ಳ ಬೇಕು. ಚೆಂಡಿನ ಹೂಗಳನ್ನು ತರಿಸಿಟ್ಟಿದ್ದೇನೆ.

ತಾಜ್ ತನ್ನ ಆಭರಣಗಳನ್ನು ತೆಗೆದಿಟ್ಟು ಶ್ರೀಕಂಠ ಹೇಳಿದಂತೆ ವನಕು ಮಾರಿಯ ವಸ್ತ್ರ ಭೂಷಣಗಳನ್ನು ಧರಿಸಿದಳು.

ಶ್ರೀಕಂಠ ಅವಳನ್ನು ಶಕುಂತಲಾ ಶಿಲ್ಪದ ಭಂಗಿಯಲ್ಲಿ ಕೂಡಿಸಿ, ಕೈಗೆ ಉಳಿ ತೆಗೆದುಕೊಂಡ.

## ೧೨

ಶಕುಂತಲಾ ಶಿಲ್ಪನಿರ್ಮಾಣಕ್ಕೆ ತಾಜಳ ಪೂರ್ಣ ಸಹಕಾರ ದೊರೆಯಿತು. ಪ್ರತಿದಿನ ಮೂರು, ನಾಲ್ಕು, ಐದುಗಂಟೆಗಳಾದರೂ ಬೇಸರವಿಲ್ಲದೆ ಅವಳು ಪೋಸ್, ( Pose) ಮಾಡುತ್ತಿದ್ದಳು.

ಶಿಲ್ಪ ಮುಗಿದ ದಿನ ತಾಜಳ ಸಂತೋಷಕ್ಕೆ ಪಾರವೇ ಇಲ್ಲ. ಶ್ರೀಕಂಠನ ದಿವ್ಯಕೃತಿಯನ್ನು ದಿಟ್ಟಿಸಿ ನೋಡುತ್ತಾ

“ You are divine dear. ” ಎಂದಳು.

ಶ್ರೀಕಂಠನೂ ತನ್ನ ಕೃತಿಯನ್ನು ದಿಟ್ಟಿಸಿ ನೋಡುತ್ತಿದ್ದ. ಅವನ ಹೃದ ಯದಲ್ಲಿ ತೃಪ್ತಿ ತುಂಬಿತ್ತು. ನಿರೀಕ್ಷಿಸಿದುದಕ್ಕಿಂತಲೂ ಚೆಲುವಾಗಿ ಮೂರ್ತಿ ರೂಪುಗೊಂಡಿತ್ತು. ಕಾಳಿದಾಸನ ನವನವೋನ್ಮೇಷಶಾಲಿನಿಯಾದ ಮುಗ್ಧ ವನಸುಂದರಿ ಶಿಲ್ಪದಿಂದ ಎದ್ದು ಬರುವಂತಿತ್ತು.

“Thanks my dear ” ಎಂದ.

" ನನಗೇತಕ್ಕೆ Thanks. "

" ದಿವ್ಯಸುಂದರಿಯಾಗಿರುವುದಕ್ಕೆ. "

" ಶಿಲ್ಪದಲ್ಲಿ ಕಾಣುವುದು ನನ್ನ ಸೌಂದರ್ಯವಲ್ಲ - ನಿನ್ನ ಕಲಾ ಸೌಂದರ್ಯ. "

" ನನ್ನ ಕೃತಿ ಮೂಲ ಸೌಂದರ್ಯದ ಪಡಿಯಚ್ಚು ಮಾತ್ರ. "

" ಇದು ನನ್ನದು ತಾನೇ ! "

" ನಿಸ್ಸಂದೇಹವಾಗಿ. ಈಗಲೇ ತೆಗೆಸಿಕೊಂಡು ಹೋಗಬಹುದು. "

" ಇದನ್ನು ' ಇಲ್ಲಸ್ಟ್ರೇಟೆಡ್ ವೀಕ್ಲಿ ' ಯಲ್ಲಿ (Illustrated Weekly) ಅಚ್ಚು ಹಾಕಿಸಲಪ್ಪಣೆಯೇ ? "

" ನಿನ್ನ ವಸ್ತುವನ್ನು ನೀನು ಹೇಗೆ ಬೇಕಾದರೂ ಉಪಯೋಗಿಸಿಕೊಳ್ಳಬಹುದು. "

ಅದೇ ಸಂಜೆ ಇಬ್ಬರೂ ಜುಹೂ ಬೀಚಿನ ಕಡೆ ಡ್ರೈವ್ ಹೊರಟರು. ಕಾರನ್ನು ದೂರ ನಿಲ್ಲಿಸಿ ಬೀಚಿನಲ್ಲಿ ಓಡಿಯಾಡುತ್ತಿರುವಾಗ ಶ್ರೀಕಂಠ

" ನೋಡು ತಾಜ್ - ನನ್ನ ತಲೆ ಹೊಸ ವಿಚಾರಗಳಿಂದ ತುಂಬಿ ಹೋಗಿದೆ. ಅವುಗಳನ್ನು ಕೃತಿಗಿಳಿಸಿದ ಹೊರತೂ ಶಾಂತಿಯಿಲ್ಲ. "

" ಹೊಸ ವಿಚಾರ ಯಾವದು ? "

ಶಕುಂತಲಾ ನಾಟಕವನ್ನೇ ಆಧಾರವಾಗಿಟ್ಟುಕೊಂಡು ಇನ್ನೂ ಕೆಲವು ಪ್ಯಾನಲ್ಸ್ (Panels) ಮಾಡಬೇಕೆಂದಿದ್ದೇನೆ. ಶಕುಂತಲಾ - ದುಷ್ಯಂತರ ಪ್ರಥಮ ಸಮಾಗಮ; ಶಕುಂತಲಾ ದುಷ್ಯಂತರ ಪ್ರೇಮೈಕ್ಯ; ವಿರಹಿಣಿ ಶಕುಂತಲೆ; ರಾಜಸಭೆಯಲ್ಲಿ ಶಕುಂತಲೆ; ಶಕುಂತಲಾ ದುಷ್ಯಂತರ ಪುನರ್ಮಿಲನ. ಈಗ ನಾನು ಮಾಡಿರುವ ಕೃತಿಯೂ ಸೇರಿದರೆ ಆರು ಪ್ಯಾನಲ್‌ಗಳಾಗುತ್ತವೆ. "

" That is grand. ಎಲ್ಲವನ್ನೂ ಸೇರಿಸಿ ಆಲ್ಬಮ್ ( album ) ಮಾಡಿಸಿ ನಾನು ಪಾರಿಸ್‌ನಲ್ಲಿ ಪ್ರಕಟ ಮಾಡಿಸುತ್ತೇನೆ. "

" ಉಳಿದಿರುವ ಐದು ಪ್ಯಾನಲ್ಲಿಗೂ ನೀನೇ ಪೋಸು ಮಾಡಬೇಕಾಗುತ್ತದೆ. "

" ಆಗಬಹುದು. ನಮ್ಮ ತಂದೆಯವರ ಶಿಲ್ಪದ ಅನಾವರಣ ಮಹೋ

ತ್ಸವ ಮುಗಿದು ಹೋಗಲಿ. ಒಮ್ಮೆ ನೀನು ಮಾತ್ರೆಯವರ ಸ್ಟುಡಿಯೋ ಕಡೆ ಹೋಗಿ ಬಂದಿದ್ದರಾಗಿತ್ತು."

"ಶಿಲ್ಪ ಎಲ್ಲಿಯ ವರೆಗೆ ಬಂದಿದೆ."

"ಅದೇ ಕೆಲಸ ಮಾಡುತ್ತಿದ್ದಾರೆ. ಮುಖ ತಿದ್ದುವಾಗ ನೀನು ಎದುರಿಗಿದ್ದರೆ ಒಳ್ಳೆಯದೆಂದು ಮಾತ್ರೆ ಹೇಳಿದರು."

"ಹಾಗೇ ಆಗಲಿ. ಹೋಗಿ ನೋಡಿಕೊಂಡು ಬರುತ್ತೇನೆ."

ಮಾತನಾಡಿಕೊಂಡು ಅವರು ಮ್ಯಾಡಾಂ ಕೇ ಯವರ ರೆಸ್ಟುರಾ ಬಳಿ ಬಂದಾಗ ತಾಜ್

"ಕೇ ಸೊಗಸಾದ ಡ್ರಿಂಕ್ಸ್ ಕೊಡುತ್ತಾಳೆ. ಬಾ ಶ್ರೀಕಾಂತ್ ಒಳಗೆ ಹೋಗೋಣ"

ಎಂದು ಶ್ರೀಕಂಠನ ಕೈಹಿಡಿದು ಒಳಕ್ಕೆ ಕರೆದೊಯ್ದಳು.

ಮ್ಯಾಡಾಂ ಕೇಯವರ 'ಗಾರ್ಡನ್ ರೆಸ್ಟುರಾ' ಮುಂಬಯಿಯಲ್ಲಿ ಸುಪ್ರಸಿದ್ಧವಾಗಿತ್ತು. ಕೇ ರೆಸ್ಟುರಾದಲ್ಲಿ ಸಿಕ್ಕುತ್ತಿದ್ದ ಪೀಚ್ ಮೆಲ್ಬಾ, ಸ್ಯಲಾಡ್, ಡ್ರಿಂಕ್ಸ್ ತೆಗೆದುಕೊಳ್ಳುವುವಕ್ಕೇ ಜನ ಜುಹೂ ಬೀಚಿಗೆ ಬರುತ್ತಿದ್ದರು.

ಕಟ್ಟಡದಲ್ಲಿಯೂ ಜನ ಕುಳಿತು ಉಪಾಹಾರ ಸ್ವೀಕರಿಸಲು ಅನುಕೂಲವಿತ್ತು. ಕಟ್ಟಡದ ಹೊರಗಿದ್ದ ಹಸಿರು ಹಾಸಿನ ( Green Lawn ) ಮೇಲೂ ಕುರ್ಚಿ, ಟೀಪಾಯ್ ಹಾಕಿ ವ್ಯವಸ್ಥೆ ಮಾಡಲಾಗಿತ್ತು.

ಶ್ರೀಕಂಠ, ತಾಜ್ ಹೋಗಿ ಒಂದೆಡೆ ಕುಳಿತರು. ಬಾಯ್ ಮೆನು ಕಾರ್ಡ ತಂದು ಕೊಟ್ಟ. ತಾಜ್ ಕಾರ್ಡು ನೋಡುತ್ತಾ

"ಏನು ತೆಗೆದುಕೊಳ್ಳುತ್ತೀ ಶ್ರೀಕಾಂತ್" ಎಂದು ಕೇಳಿದಳು.

"ಒಂದು ಆರೆಂಜ್ ತೆಗೆದುಕೊಳ್ಳುತ್ತೇನೆ."

"ಬರೀ ಆರೆಂಜೇ – ತಿನ್ನಲು ಏನು ಬೇಕು."

"ಚಿಪ್ಸ್ ಆದರೆ ಸಾಕು. ನಿನಗೆ ಏನು ಬೇಕೋ ಹೇಳು."

ತಾಜ್ ಬಾಯ್ ಕಡೆ ತಿರುಗಿ

"ಸಾಹೇಬರಿಗೆ – ಟೋಸ್ಟ್, ಫಿಂಗರ್ ಚಿಪ್ಸ್, ಪೀಚ್ ಮೆಲ್ಬಾ, ಆರಂಜ್ ಕ್ರಷ್; ನನಗೆ – ಸೂಪ್, ಚಿಕನ್, ಪೀಚ್ ಮೆಲ್ಬಾ, ಟೀ ತೆಗೆದು ಕೊಂಡು ಬಾ"

ಎಂದು ಹೇಳಿದಳು.

ಬಾಯ್ ಉಪಹಾರ ತಂದಿಡಲು ತಡವಾಗಲಿಲ್ಲ. ತಾಜ್ ನಸುನಗುತ್ತಾ "ಸ್ವಲ್ಪ ಸೂಪ್, ಚಿಕನ್ ರುಚಿ ನೋಡುವೆಯೇನು?" ಎಂದು ಕೇಳಿದಳು.

"ನನಗೆ ಅಭ್ಯಾಸವಿಲ್ಲವೆಂದು ನಿನಗೆ ಗೊತ್ತೇ ಇದೆಯಲ್ಲ ತಾಜ್."

"ವಿಲಾಯತಿಗೆ ಹೋದರೆ ಏನು ಮಾಡುವೆ?"

"ಅಲ್ಲಿ ಬೇಕಾದಷ್ಟು ಶಾಕಾಹಾರಿ ಹೋಟೇಲುಗಳಿವೆಯಂತೆ."

"ಎಲ್ಲಿವೆ? – ಅಮೇರಿಕಾ, ಫ್ರಾನ್ಸ್‌ಗಳಲ್ಲಿ ಶಾಕಾಹಾರಿ ಹೊಟೇಲುಗಳಿಲ್ಲ. ಇಂಗ್ಲೆಂಡಿನಲ್ಲಿವೆಯಷ್ಟೆ."

"ಇಂಗ್ಲೆಂಡಿಗಷ್ಟೇ ಹೋಗಿ ಬರುತ್ತೇನೆ."

ತಾಜ್ ಗಹಗಹಿಸಿ ನಗುತ್ತ

"ಫ್ರಾನ್ಸ್ ಕಲಾವಿದನ ಕಾಶಿ ಶ್ರೀಕಾಂತ್. ಅಲ್ಲಿಗೆ ಹೋಗದಿದ್ದರೆ ಕಲಾವಿದನ ಜೀವನ ಸಾರ್ಥಕವಾಗುವುದಿಲ್ಲ. ನಿನ್ನ ಶಕುಂತಲಾ ಪ್ಯಾನಲ್ಸ್ ಮುಗಿದ ಮೇಲೆ ಇಬ್ಬರೂ ಪ್ಯಾರಿಸ್ಸಿಗೆ ಹೋಗಿ ಬರೋಣ. ಅಲ್ಲಿ ನಿನ್ನ ಕೃತಿಗಳ ಪ್ರದರ್ಶನವಿಡಿಸುತ್ತೇನೆ."

"ನಮ್ಮಲ್ಲಿ ಗಾದೆ ಹೇಳುವಂತೆ 'ಕೂಸು ಹುಟ್ಟುವುದಕ್ಕೆ ಮುಂಚೆ ಕುಲಾವಿ ಹೊಲಸಿಡುವುದು ಬೇಡ' ಮೊದಲು ನನ್ನ ಕೃತಿಗಳನ್ನು ಸಿದ್ಧ ಮಾಡಿಡುತ್ತೇನೆ – ಅನಂತರ ಪ್ರದರ್ಶನ, ಪ್ರಕಟನೆಗಳನ್ನು ಕುರಿತು ಆಲೋಚಿಸೋಣ."

ಶ್ರೀಕಂಠನ ದೃಷ್ಟಿ ಎದುರು ಸಾಲಿನಲ್ಲಿ ಕುಳಿತಿದ್ದವರ ಕಡೆ ಹೋಯಿತು. ಬಾಯಲ್ಲಿದ್ದ ಪೀಚ್ ಮೆಲ್ಬಾ ಕಹಿಯಾಯಿತು. ಶ್ರೀಕಂಠನ ಎದುರಿಗೆ ತಾಜ್ ಕುಳಿತಿದ್ದುದರಿಂದ ಹಿಂದಿನ ಸಾಲಿನಲ್ಲಿದ್ದವರು ಅವಳ ಕಣ್ಣಿಗೆ ಬೀಳಲಿಲ್ಲ.

ಪ್ರಭಾ, ರಾಜೂ ಇಬ್ಬರೂ ಶ್ರೀಕಂಠನನ್ನೇ ನೋಡುತ್ತಿದ್ದರು.

ಎದ್ದುಹೋಗಿ ಅವರನ್ನು ಮಾತನಾಡಿಸಿ ಬರಲು ಶ್ರೀಕಂಠನ ಮನಸ್ಸು ಬಯಸಿತು. ತಾಜ್ ಏನನ್ನುವಳೋ ಎನ್ನುವ ಭಯ ಅವನನ್ನು ದುರ್ಬಲನನ್ನಾಗಿ ಮಾಡಿತು. ಅವರ್ಣನೀಯ ಹೇಡಿತನ ಅವನ ಮನಸ್ಸನ್ನು ಮುತ್ತಿತು.

"ಬೇಗ ಚಹಾ ಮುಗಿಸು ತಾಜ್ - ಹೋಗೋಣ"

ಎಂದು ಬಾಯ್‌ನನ್ನು ಕರೆದು ಬಿಲ್ ಹಣ ಪಾವತಿ ಮಾಡಿದ. ತಾಜ್ ಒಂದು ಗುಟುಕು ಚಹಾ ಕುಡಿದು ಮೇಲಕ್ಕೆದ್ದಳು.

ಶ್ರೀಕಂಠ ಅವಳ ಕೈ ಹಿಡಿದುಕೊಂಡು ನೇರವಾಗಿ ಕಾರಿನ ಬಳಿ ಕರೆದುಕೊಂಡು ಬಂದ. ಇಬ್ಬರೂ ಕಾರಿನಲ್ಲಿ ಕುಳಿತ ಮೇಲೆ ತಾಜ್

"ಏಕೆ ಶ್ರೀಕಾಂತ್, ಭೂತದರ್ಶನ ಮಾಡಿದವನಂತೆ ಕಾಣುತ್ತಿರುವೆಯಲ್ಲಾ !" ಎಂದು ಕೇಳಿದಳು.

"ಯಾರೋ ಗುರುತಿನವರನ್ನು ಕಂಡೆ. ಅವರೆಲ್ಲಿ ಮಾತನಾಡಿಸಿಕೊಂಡು ಬರುವರೋ ಎಂದು ಹೊರಡಲು ಅವಸರಪಡಿಸಿದೆ."

"ಅವರು ಮಾತನಾಡಿಸಿದ್ದರೆ ಆಗುತ್ತಿದ್ದ ಕಷ್ಟವೇನು ?"

"ಏನೂ ಇಲ್ಲ. ಜತೆಯಲ್ಲಿ ಕೂಡಲು ಅವರನ್ನೂ ಆಹ್ವಾನಿಸಬೇಕಾಗುತ್ತಿತ್ತು. ನಮ್ಮ ಮಧುರ ಸಂಭಾಷಣೆಗೆ ಅಡ್ಡಿಯಾಗುತ್ತಿತ್ತು."

ಶ್ರೀಕಂಠನ ಮನಸ್ಸು ವಿಹ್ವಲವಾಗಿದ್ದುದನ್ನು ತಾಜ್ ಕಂಡುಕೊಂಡಳು.

ಕಾರ್ 'ಸ್ಟುಡಿಯೋ' ಬಳಿ ಬಂದು ನಿಂತಿತು. ಶ್ರೀಕಂಠ ಮೊದಲು ಕಾರಿನಿಂದಿಳಿದು ಬಾಗಿಲು ಹಾಕಿ, ಹೊರಡಲನುವಾದ. ತಾಜ್ ಅವನ ಕಡೆ ಅರ್ಥಗರ್ಭಿತವಾಗಿ ನೋಡಿ

"ನಾನು ಬರಬಾರದೇ ?"

"ಬರಬಾರದೆಂದು ನಾನು ಹೇಳಿದೆನೇ ? ಮನೆಗೆ ಹೋಗಬೇಕಾಗಿದೆಯೇನೊ ಎಂದುಕೊಂಡೆ."

ಎಂದು ಕಾರಿನ ಬಾಗಿಲು ತೆಗೆದ. ತಾಜ್ ಅವನೊಂದಿಗೆ ಸ್ಟುಡಿಯೋ ಒಳಗೆ ಬಂದು ಕುಳಿತಳು.

ತಾಜ್ ಒಳಕ್ಕೆ ಬಂದು ಕುಳಿತ ಕೂಡಲೆ ಶ್ರೀಕಂಠನ ಮನಸ್ಸಿನಲ್ಲಿ ವಿಚಿತ್ರ ಆಂದೋಳನವಾಯಿತು. ಹುತ್ತದಲ್ಲಿ ಅಡಗಿ ಕುಳಿತಿದ್ದ ಸರ್ಪಗಳು ಹೆಡೆಯೆತ್ತಿ ನಿಂತವು. ತಾಜ್ ಪಕ್ಕದಲ್ಲಿ ಕುಳಿತು ಅವಳ ಕುರುಳು ತೀಡುತ್ತ

"ತಾಜ್" ಎಂದ.

ಅವನ ಮಾತು ಮಾರ್ದವತೆಯ ಕೆನೆಯಾಗಿತ್ತು.

"ಏನು ಡಿಯರ್."

"ನೀನು ಇಂಗಿತಜ್ಞಳು ತಾಜ್."

" ಏಕೆ ಹಾಗನ್ನುವೆ. "

" ನಿನ್ನನ್ನಾಗ ಮನೆಗೆ ಕಳಿಸಲು ನಾನು ಆತುರನಾಗಿದ್ದೆ. "

" ಅದನ್ನು ನಾನು ಕಂಡುಕೊಂಡೇ ಮೊಂಡತನ ಮಾಡಿಕೊಂಡು ಕೆಳಗಿಳಿದೆ. "

" ಏಕೆ ಬಲ್ಲೆಯಾ ? "

" ಏಕೆ ? "

" ನಿನ್ನನ್ನು ಬಿಟ್ಟು ಕ್ಷಣಕಾಲ ಇರಲು ನನಗೆ ಸಾಧ್ಯವಿಲ್ಲವಾಗಿದೆ. "

" ಆದಕ್ಕೇ ನನ್ನನ್ನು ಕಳಿಸಲು ನಿರ್ಧರಿಸಿದ್ದೆಯಾ ? "

" ಹೌದು. ನಿನ್ನ ಪ್ರೇಮದ ಸೆರೆಯಾಳಾಗಿದ್ದೇನೆ ನಾನು. "

" ಸೆರೆಯಾಳು ಓಡಿ ಹೋಗಲು ಪ್ರಯತ್ನಿಸುತ್ತಿದ್ದನೇನು ? "

" ಹೌದು. "

" ಎಲ್ಲಿಗೆ ? "

" ವಿಸ್ಮೃತಿಯ ಲೋಕಕ್ಕೆ. "

" ಅಂಥ ಲೋಕ ಒಂದಿದೆಯೇ ? "

" ಇದೆಯೋ ಇಲ್ಲವೋ ನೋಡೋಣವೆಂದೇ ಹೊರಟಿದ್ದೆ. "

" ಹಾಗಾದರೆ ನಾನು ಹೊರಡುತ್ತೇನೆ. "

" ಬೇಡ ತಾಜ್ – ಹೋಗಬೇಡ – ಇಂದಿನ ನನ್ನ ಉನ್ಮಾದವನ್ನು ನಿನ್ನ ಸಂಗವಲ್ಲದೆ ಬೇರೆ ಯಾವದೂ ಪರಿಹರಿಸಲಾರದು. "

" ನೀನು ಹೋಗೆಂದರೂ ನಾನು ನಿನ್ನ ಬಿಟ್ಟು ಹೋಗಲಾರೆ ಡಿಯರ್."

" ತಾಜ್, ನಮ್ಮ ಈ ಸ್ನೇಹ - ಈ ಪ್ರೇಮ ಚಿರಸ್ಥಾಯಿಯಾಗಿ ಉಳಿಯುವುದೇ ? "

" ಸಂದೇಹಕ್ಕೇನು ಕಾರಣ. "

" ಏನೂ ಕಾರಣವಿಲ್ಲ. ಗಾಜಿನ ಕೊಳವೆಗೆ ನೈಟ್ರಿಕ್ ಆಸಿಡ್‌ನಂಥ ಬಲವಾದ ದ್ರಾವಕ ಹಾಕಿದಾಗ ಅದು ಎಲ್ಲಿ, ಯಾವಾಗ ಸಿಡಿಯುವುದೋ ಎಂದು ಚಿಂತಿಸುತ್ತೇವಲ್ಲವೇ ? "

" ನೈಟ್ರಿಕ್ ಆಸಿಡ್ ಹಾಕಿದರೆ ಚಿಂತಿಸಬಹುದು. ಷರಬತ್ತು ಹಾಕಿ ಚಿಂತಿಸುವುದೇಕೆ ? "

" ಈ ಕೊಳವೆ ತುಂಬಿರುವುದು ಷರಬತ್ತಿನ ಮಧುರಸವೇ ? "

" ಹೌದು ಡಾರ್ಲಿಂಗ್. "

" ತಾಜ್ – ಸ್ವೀಟ್ ತಾಜ್ ! "

" ಡಿಯರ್ - ಡಿಯರ್ - ಮೈ ಓನ್ ಡಾರ್ಲಿಂಗ್ ( Dear- dear, my own darling ) "

ಎಂದು ತಾಜ್ ತನ್ನ ಬಾಹುಪಾಶಗಳಲ್ಲಿ ಅವನನ್ನು ಬಿಗಿಹಿಡಿದಳು.

## ೧೩

ಶ್ರೀಕಂಠನ ಚಿತ್ತ ಪ್ರಬಲವಾದ ಸುಳಿಗೆ ಸಿಕ್ಕಿದಂತಾಗಿತ್ತು. ಸುಳಿಯನ್ನು ಬಿಡಿಸಿಕೊಳ್ಳಲೆತ್ನಿಸಿದಷ್ಟು ಅದು ಒಳಕ್ಕೆ ಎಳೆಯುತ್ತಿತ್ತು. ನಿರಾಶೆಗೊಂಡು ಅವನು ಸುಳಿಗೆ ದೇಹ ಒಪ್ಪಿಸಿಬಿಟ್ಟಿದ್ದ.

ತಾಜ್ ಅವನ ಅಂತಃಕರಣ ಚತುಷ್ಟಯವನ್ನು ಬಲವಾಗಿ ಆಕ್ರಮಿಸಿದ್ದಳು- ಜಗತ್ತೆಂದರೆ ತಾಜ್ — ತಾಜ್ ಎಂದರೆ ಜಗತ್ತು ! ತಾಜಳನ್ನು ಬಿಟ್ಟು ಜಗತ್ತಿನಲ್ಲಿ ಇನ್ನೇನಿದೆ ? ಎನ್ನುವ ಮಟ್ಟಿಗೆ ಅವನಿಗೆ ಮತಿಭ್ರಮಣೆಯಾಗಿತ್ತು.

ತಾಜ್ ಎದುರಿಗಿದ್ದರೆ ಅವನ ಉಳಿ ಅಲಗಿಗಿಂತಲೂ ಮೊನೆಯಾಗುತ್ತಿತ್ತು. ಹೊಸ ಹೊಸ ಭಾವನೆಗಳು ತಡಸಲಿನಂತೆ ಅವನ ಬುದ್ಧಿಯ ಭಂಡಾರದಿಂದುರುಳುತ್ತಿದ್ದವು. ಶಕುಂತಲಾ – ಮಾಳವಿಕಾ – ಕಾದಂಬರಿ - ಸರಸ್ವತಿ – ರಾಜರಾಜೇಶ್ವರಿ – ತ್ರಿಪುರಸುಂದರಿಯರ ಭೂಮಿಕೆಯಲ್ಲಿ ಅವಳನ್ನು ಹೃತ್ಪಟಲದ ಮೇಲೆ ಹಲವು ಸಾರಿ ಚಿತ್ರಿಸಿದ್ದ.

ಒಮ್ಮೊಮ್ಮೆ ಯುಕ್ತಾಯುಕ್ತ ಪರಿಜ್ಞಾನದ ತಂಗಾಳಿ ಬೀಸಿದಾಗ ಅವನ ಮನಸ್ಸು ವಿಚಾರ ಪರವಶವಾಗುತ್ತಿತ್ತು.

ಶಿಲ್ಪಿ ವಿಶ್ವವಿಧಾತನಿಗೆ ಸರಿಸಮಾನವಾದ ವಿಶ್ವಕರ್ಮ. ಭಗವಂತನೂ ಸೃಷ್ಟಿಕರ್ತ - ಕಲಾವಿದನೂ ಸೃಷ್ಟಿಕರ್ತ. ಇಬ್ಬರ ಕ್ರಿಯೆಯೂ ಲೋಕತಾರಕವಾದವು. ಕಲಾವಿದನೂ ಭಗವಂತನೇ ! ಪ್ರತಿಯೊಂದು ಜೀವವೂ ಭಗವಂತನ ಅಣುಸ್ವರೂಪ. ಜೀವ ರಕ್ತ ಮಾಂಸಗಳಿಂದ ಮಾಡಿದ ಒಂದು ತೊಗಲು

ಗೊಂಬೆಯಲ್ಲ. ತೊಗಲುಗೊಂಬೆ ನಿರಾಪದವಾದ ಜಡವಸ್ತು. ಜೀವ ಚೈತನ್ಯ ಸ್ವರೂಪು. ಜೀವ ಸಾಧನದಿಂದಲ್ಲವೇ ಭಗವಂತ ಪ್ರಕಟವಾಗುವುದು. ಕಾವ್ಯ, ಚಿತ್ರ, ಶಿಲ್ಪ, ವಾಸ್ತುಶಿಲ್ಪ, ಸಂಗೀತ, ಜೀವನ ಕಲೆ ಪೌರುಷ ಭೂತಾನು ಕಂಪ, ಸತ್ಯಸಾಧನೆ, ವಿಜ್ಞಾನ ಎಲ್ಲವೂ ಜೀವದ ಅನಂತ ಗರ್ಭದ ಕುಡಿಗಳು — ವಿಶ್ವರೂಪದ ವಿವಿಧ ಮುಖಗಳು.

'ಭಗವದಂಶೋದ್ಭೂತವಾದ ಜೀವ ವಿಸ್ಮೃತಿಯಿಂದ, ಅಜ್ಞಾನದಿಂದ ಉಪಾಧಿವಶವಾಗುವುದೇ?'

'ದಿವ್ಯ ಕಲೆಯನ್ನು - ಭಗವಂತನ ಸೃಷ್ಟಿ ಕಲೆಯೊಂದಿಗೆ ಸ್ಪರ್ಧೆಗೆ ನಿಲ್ಲ ಬಲ್ಲ ಕೃತಿಯನ್ನು ನಿರ್ಮಿಸಬಲ್ಲ ಜೀವ ಒಂದು ಹುಲುಹೆಣ್ಣಿಗೆ ವಶನಾಗಿ ಆತ್ಮ ನಾಶ ಮಾಡಿಕೊಳ್ಳುವುದೇ?'

ಹುಲು ಹೆಣ್ಣು!

ತಾಜ್ ಹುಲು ಹೆಣ್ಣೇ!!

'ಅವಳಲ್ಲಿ ಪ್ರಕಟವಾಗಿರುವ ಅನುಪಮ ಸೌಂದರ್ಯವೂ ಭಗವದಂಶ ವಲ್ಲವೇ? ಸೌಂದರ್ಯಾರಾಧಕನಾದ ಕಲಾವಿದ ಅವಳಿಗೆ ಆತ್ಮಾರ್ಪಣ ಮಾಡಿ ಕೊಂಡರೆ ತಪ್ಪೇನು?

'ರಾಕ್ಷಸಿಯಾದ ಶೂರ್ಪನಖಿ, ರಾಮಲಕ್ಷ್ಮಣರನ್ನು ವಂಚಿಸುವುದಕ್ಕೆ ದಿವ್ಯ ಸುಂದರಿಯ ವೇಷ ತಾಳಿ ಬಂದಳಂತೆ! ಶೂರ್ಪನಖಿಯ ಸೌಂದರ್ಯ ಋಜು ಸೌಂದರ್ಯವೇ? - ಮುಟ್ಟಿದರೆ ಅದು ಬೆಂಕಿಯಂತೆ ಸುಡುವುದೋ, ಶೀತಲೋದಕದಂತೆ ಆಪ್ಯಾಯಮಾನವಾಗಿರುವದೋ?

'ಈ ಪತಂಗದ ಬಗೆಬಗೆಯ ಬಣ್ಣಕ್ಕೆ ಭ್ರಮಿತನಾಗಿ ರಾಜೂ, ಪ್ರಭಾ ಅವರನ್ನು ತಿರಸ್ಕರಿಸಿದೆನಲ್ಲಾ - ಅಂದು, ಕೇರೆಸ್ಟುರಾದಲ್ಲಿ ಅವರನ್ನು ಕಂಡರೂ ಕಾಣದಂತೆ ಹೊರಟು ಬಂದೆನಲ್ಲಾ — ಇದು ನನ್ನ ಅಧಃಪತನದ ಲಕ್ಷಣ ವಲ್ಲವೇ?'

ಒಂದೆ ರಣಧೀರಜೀ ಎಚ್ಚರಗೊಟ್ಟಾಗ ಓಡಿಹೋಗುವುದಕ್ಕಾದರೂ ಕಾಲಿನಲ್ಲಿ ಬಲವಿತ್ತು - ಇಂದವನು ಪಂಗುವಾಗಿದ್ದ.

ಮೂರನೆಯ ದಿನ ಬೆಳಗ್ಗೆ ತಾಜಳೇ ಬಂದು ಶ್ರೀಕಂಠನನ್ನೆಬ್ಬಿಸಿ, ತನ್ನ ಕೈಯಲ್ಲಿದ್ದ 'ಇಲ್ಲಸ್ಟ್ರೇಟೆಡ್ ವೀಕ್ಲಿ' ಪತ್ರಿಕೆಯನ್ನು ಅವನ ಕೈಯಲ್ಲಿಟ್ಟಳು.

ಒಂದು ಪುಟದ ತುಂಬ ಶಕುಂತಲ ಶಿಲ್ಪ ಪ್ರಕಟವಾಗಿತ್ತು. ಶಿಲ್ಪವನ್ನು ವಿಮರ್ಶಿಸುತ್ತಾ ಕಲಾವಿಮರ್ಶಕರಾದ ವೈದ್ಯರು ಅದನ್ನು 'ಕಾಳಿದಾಸನ ಮಹಾ ಕಾವ್ಯೋಚಿತವಾದ ಶಿಲ್ಪ' ವೆಂದೂ, 'ಭಾರತೀಯ ಕಲಾಪ್ರವೀಣತೆಯ ರಸ ಫಲ ' ವೆಂದೂ ಕರೆದಿದ್ದರು.

ರಾತ್ರಿ ಮನಸ್ಸಿನ ಮೇಲೆ ಮುಸುಕಿದ್ದ ಮೋಡ ಆರೆಕ್ಷಣದಲ್ಲಿ ಮಾಯ ವಾಯಿತು. ವಿದ್ಯುದಾವೇಗದಲ್ಲಿ ಮೇಲಕ್ಕೆದ್ದ ಶ್ರೀಕಂಠ ಕಾಲು ಗಂಟೆಯಲ್ಲಿ ಸಿದ್ಧನಾಗಿ

"ತಾಜ್ - ಇಂದೇ ನನ್ನ ಎರಡನೆಯ ಕೃತಿ 'ದುಷ್ಯಂತ - ಶಕುಂತಲೆ ಯರ ಪ್ರಥಮ ಸಮಾಗಮ' ಆರಂಭಿಸುತ್ತೇನೆ. ಬೇಗ ಸಿದ್ಧಳಾಗು" ಎಂದ.

"ಈಗಲೇ ಸಿದ್ಧವಾಗಬೇಕೇ?"

"ಹೌದು — ಏಕೆ?"

"ನಾನೇನೋ ಹೇಳಬೇಕೆಂದಿದ್ದೆ."

"ಏನದು?"

"ರಾತ್ರಿಯೆಲ್ಲಾ ನಿನ್ನದೇ ಧ್ಯಾನ."

"ನಾನೂ ರಾತ್ರಿ ಕಣ್ಣು ಮುಚ್ಚಲಿಲ್ಲ - ನಿನಗೆ ಫೋನ್ ಮಾಡುವ ಎಂದು ಯೋಚನೆ ಮಾಡಿದೆ."

"ಏಕೆ ಫೋನ್ ಮಾಡಲಿಲ್ಲ."

"ಆ ವೇಳೆಯಲ್ಲಿ ನೀನು ಹೇಗೆ ಬರುತ್ತಿದ್ದೆ. ಡ್ರೈವರ್ ಕೂಡ ಮನೆಗೆ ಹೋಗಿರುತ್ತಿದ್ದ."

"ಕಾರ್ ನಾನೇ ಡ್ರೈವ್ ಮಾಡಿಕೊಂಡು ಬರುತ್ತಿದ್ದೆ."

"ಬೇಗ ಸಿದ್ಧಳಾಗು ತಾಜ್. ನಾನು ಪ್ಲಾಸ್ಟರ್ ಸರಿಮಾಡಿಕೊಳ್ಳುವ ವೇಳೆಗೆ ನೀನು ಸಿದ್ಧಳಾಗಿರಬೇಕು."

"ನಾಳೆ ಮಾಡಿದರಾಗದೇ?"

"ಇಂದೇನಾಗಿದೆ?"

"ಎಲ್ಲಿಯಾದರೂ ಹೋಗೋಣ."

"ಇಲ್ಲ ತಾಜ್ - ದಯೆಯಿಟ್ಟು ಬೇಗ ಸಿದ್ಧಳಾಗು - ನನ್ನ ಮೈಯಲ್ಲಿ ಯಾವದೋ ಭೂತ ಹೊಕ್ಕಿದೆ. ಕೆಲಸ ಮಾಡಿದ ಹೊರತೂ ಅದು ಬಿಡುಗಡೆ

ಯಾಗುವುದಿಲ್ಲ. ”

ತಾಜ್ ಶಕುಂತಲೆಯ ಭೂಮಿಕೆ ಧರಿಸಿ ಶಿಲ್ಪರಂಗ ಪ್ರವೇಶಿಸಿದಳು.

ಶ್ರೀಕಂಠನ ಮೈಯಲ್ಲಿ ಅಂದು ನಿಜಕ್ಕೂ ಭೂತ ಪ್ರವೇಶವಾಗಿತ್ತು. ಮೂರು ತಾಸು ಒಂದೇಸಮನೆ ಕೆಲಸ ಮಾಡಿದರೂ ಅವನು ಆಯುಧಗಳನ್ನು ಕೆಳಗಿಡಲಿಲ್ಲ ತಾಜಗೆ ಆಯಾಸವಾಗಿ ಭಂಗಿ ಬದಲಾಯಿಸುತ್ತಿತ್ತು.

“ ಸ್ವಲ್ಪ ಅಲ್ಲಾಡದೆ ನಿಂತುಕೋ ತಾಜ್. ”

“ ನನಗೆ ತುಂಬ ಆಯಾಸವಾಗಿದೆ ಶ್ರೀಕಾಂತ್. ”

“ ಚಿಂತೆಯಿಲ್ಲ. ”

“ಒಂದುಕಪ್ ಚಹಾ ತೆಗೆದುಕೊಂಡು ಕೆಲಸ ಮುಂದುವರಿಸಿದರಾಗದೇ?”

ಶ್ರೀಕಂಠ ತಾಜಳ ಕಡೆ ತಿರುಗಿ ನೋಡಿದ. ಅವಳು ಸೋತು ಹೋಗಿದ್ದಳು. ಉಳಿ ಕೆಳಗಿಟ್ಟು

“ ಹತ್ತು ನಿಮಿಷ ವಿಶ್ರಾಂತಿ ” ಎಂದ.

ತಾಜ್ ಓಡಿಹೋಗಿ ತನ್ನ ವ್ಯಾನಿಟಿ ಕೇಸಿನಲ್ಲಿದ್ದ ಸಿಗರೆಟ್ ತೆಗೆದು ಹಚ್ಚಿ

“ ಹಾ ! ” ಎಂದು ನಿಟ್ಟುಸಿರು ಬಿಡುತ್ತಾ

“ ಮೊದಲು ಚಹಾ ತರಿಸು ಶ್ರೀಕಾಂತ್ ” ಎಂದಳು.

ಶ್ರೀಕಂಠ, ಗೋಡೌನಿನ ಆಳಿನ ಕೈಯಿಂದ ಚಹಾ ತರಿಸಿದ.

ಇಬ್ಬರೂ ಚಹಾ ಸೇವಿಸಿದ ಮೇಲೆ

“ ಇಂದು ನಿನಗೇನಾಗಿದೆ ಶ್ರೀಕಾಂತ್ ” ಎಂದು ಕೇಳಿದಳು.

“ ಏಕೆ ? ”

“ ಇನತ್ತು ಹೊಸ ವ್ಯಕ್ತಿಯಂತೆ ಕಾಣುತ್ತಿರುವೆ. ”

“ ಕಲೆಯೊಂದೇ ಅಮರ ತಾಜ್, ಜೀವನ ಅಶಾಶ್ವತ. ”

“ ಕಲಾವಿದನಿಗೆ ದರ್ಶನದ ಹುಚ್ಚು ಹಿಡಿಯುತ್ತಿದೆಯೋ ? ”

“ ಇಲ್ಲ - ಸ್ವಯಂಪ್ರಜ್ಞೆ ಬರುತ್ತಿದೆ............ಏಳು ತಾಜ್ ಕಾಲಹರಣ ಮಾಡುವುದು ಬೇಡ. ” ಎಂದ.

ತಾಜ್ ಎದ್ದು ಶಿಲ್ಪರಂಗದ ಮೇಲೆ ಶಕುಂತಲೆಯ ಭಂಗಿಯಲ್ಲಿ ನಿಂತಳು.

ಶ್ರೀಕಂಠ ಉಳಿಯನ್ನು ಕೆಳಗಿಟ್ಟಾಗ ನಾಲ್ಕು ಗಂಟೆಯಾಗಿತ್ತು. ತಾಜ್

ಹಣ್ಣಾಗಿ ಹೋಗಿದ್ದಳು. ಶಕುಂತಲೆಯ ವಸ್ತ್ರಭೂಷಣ ತೆಗೆದು ತನ್ನ ಉಡುಗೆ ತೊಡಿಗೆ ಧರಿಸಲೂ ಅವಳಿಗೆ ಶಕ್ತಿಯಿಲ್ಲವಾಯಿತು

" ಮೊದಲು ಮನೆಗೆ ಫೋನ್ ಮಾಡಿ ನನ್ನ ಕಾರ್ ತರಿಸು ಶ್ರೀಕಾಂತ " ಎಂದಳು.

ತಾಜ್ ಮನೆಗೆ ಹೋದ ಮೇಲೆ ಶ್ರೀಕಂಠ ಮತ್ತೆ ಶಿಲ್ಪದ ಮುಂದೆ ಕುಳಿತು, ಈಗವನಿಗೆ ತಾಜಳೂ ಬೇಕಾಗಿರಲಿಲ್ಲ — ಯಾರೂ ಬೇಕಾಗಿರ ಲಿಲ್ಲ.

ಮಾರನೆಯ ದಿನ - ಅದರ ಮಾರನೆಯ ದಿನ ತಾಜ್ ' ಸ್ಟೂಡಿಯೋ ' ಕಡೆ ತಲೆಯಿಡಲಿಲ್ಲ. ಶಿಲ್ಪಕೃತಿಯಲ್ಲಿ ನಿಮಗ್ನನಾಗಿದ್ದ ಶ್ರೀಕಂಠ ಫೋನ್ ಮಾಡಿ ಅವಳ ಯೋಗಕ್ಷೇಮ ವಿಚಾರಿಸುವ ಗೋಜಿಗೂ ಹೋಗಲಿಲ್ಲ.

ಮೂರೇ ದಿವಸಗಳಲ್ಲಿ ಶ್ರೀಕಂಠನ ಶಿಲ್ಪಕೃತಿ ಮುಗಿದಿತ್ತು. ಶ್ರೀಕಂಠನ ಮನಸ್ಸು ಅವ್ಯಕ್ತವಾದ ಅಪಾರಾನಂದದಲ್ಲಿ ಮುಳುಗಿತು.

' ಕಲಾವಿದ ಹೆಣ್ಣನ್ನು ಒಲಿದಿದ್ದಾನೆ - ಆದರೆ ಹೆಣ್ಣಿನ ದಾಸನಾಗಿಲ್ಲ ದಾಸನಾಗಿಲ್ಲ ' ಎಂದು ಹಿಗ್ಗಿದ. ಆ ದೈವಿಕ ಮುಹೂರ್ತ ಅವನ ಪೂರ್ವಜನ್ಮ ವನ್ನು ನೆನಪಿಸಿ ಕೊಟ್ಟಿತು.

' ತಂದೆಯ ಶಿಕ್ಷಣ.
ಇನ್‌ಸ್ಪೆಕ್ಟರ ಪ್ರೋತ್ಸಾಹ
ಮಾದಯ್ಯನವರ ನೆರವು
ರಾಜೂ ಸ್ನೇಹ
ಯಾಲಕ್ಕಪ್ಪಾಚಾರ್ಯರ ಪುತ್ರವಾತ್ಸಲ್ಯ.
ಥಾಂಪ್ಸನ್ ಸಾಹೇಬರ ಕಲಾಭಿಮಾನ.
—ಸ್ವರ್ಣಳ...............
ಪ್ರಭಾದೇವಿಯ ಪವಿತ್ರ ಸಹವಾಸ

ಕರಪಾತ್ರೆಯಲ್ಲಿ ಮುಖವಿಟ್ಟು ಶ್ರೀಕಂಠ ಮಕ್ಕಳಂತೆ ಅತ್ತುಬಿಟ್ಟ.
ಇಂದೆಲ್ಲರನ್ನೂ ಮರೆಯಲೆತ್ನಿಸುತ್ತಿದ್ದೇನೆ.
ನಾನೆಂಥ ಕೃತಘ್ನ........ಎಂಥ ಪಾಪಿ !!
ಕುಸುಮಕೋಮಲ ಕರವೊಂದು ಶ್ರೀಕಂಠನನ್ನು ನೇವರಿಸಿ

" ಏಕೆ ಶ್ರೀಕಾಂತ್ - ದುಃಖಿಸುತ್ತಿರುವೆ " ಎಂದು ಕೇಳಿತು.

ತನ್ನನ್ನು ಸಂತೈಸುತ್ತಿರುವ ದೇವಿ ಯಾರೆಂದು ಶ್ರೀಕಂಠ ತಿರುಗಿ ನೋಡಿದ. ತಾಜ್ !

ತಾಜ್ – ತಾಜ್ – ತಾಜ್ !

ತಾಜ್ ಬದಲು ಈಗ ಪ್ರಭಾದೇವಿ ಬಂದಿದ್ದರೆ !!

" ನನ್ನ ಕೃತಿ ಮುಗಿಯಿತು. "

" ಅದಕ್ಕೆ ಕಂಬನಿ ಸುರಿಸಬೇಕೇ ? "

" ನೀನು ಇಲ್ಲಿಗೆ ಬಂದು ಮೂರು ದಿವಸಗಳಾದವು. "

" ಆವತ್ತಾದ ಆಯಾಸ ಸುಧಾರಿಸಿಕೊಳ್ಳಬೇಕಾದರೆ ಮೂರು ದಿವಸ ಬೇಕಾಯಿತು. "

ಎನ್ನುತ್ತಾ ಶಿಲ್ಪವನ್ನು ನೋಡುತ್ತಾ

" ಶ್ರೀಕಾಂತ, ನಾನು ಬರದಿದ್ದರೂ ಶಿಲ್ಪ ಮುಗಿಸಿರುವೆ ! "

" ಹೌದು - ನೆನಪಿನ ನೆರವಿತ್ತಲ್ಲ. "

" ಇನ್ನು ಮೇಲೆ ನಾನು ಪೋಸ್ (Pose) ಮಾಡಬೇಕಾಗಿಲ್ಲ. "

" ಏಕೆ ? "

" ನೆನಪಿನಿಂದಲೇ ನೀನು ಉಳಿದವುಗಳನ್ನು ಮುಗಿಸಬಹುದು. "

" ನೆನಪಿಗೂ ಕೃತುಶಕ್ತಿ ಬೇಕಲ್ಲವೇ ? ಹೋಗಲಿ – ಶಿಲ್ಪ ಹೇಗಾಗಿದೆ ಹೇಳು. "

" ನೀನು ಅಸಾಮಾನ್ಯ ಶಿಲ್ಪಿ ಶ್ರೀಕಾಂತ್ — ನೀನಿಂದು ಇಂಗ್ಲೆಂಡ್, ಫ್ರಾನ್ಸ್, ರಷ್ಯಾಗಳಲ್ಲಿದ್ದಿದ್ದರೆ ಜನ ನಿನ್ನನ್ನು ದೇವರೆಂದು ಪೂಜಿಸುತ್ತಿದ್ದರು. "

" ರಷ್ಯಾದಲ್ಲಿ ದೇವರನ್ನು ಪೂಜಿಸುವುದಿಲ್ಲವಲ್ಲ ತಾಜ್. "

" ಪೂಜಿಸುತ್ತಾರೆ. ಹಳೆಯ ದೇವರುಗಳನ್ನಲ್ಲ – ಹೊಸ ದೇವರುಗಳನ್ನು ! "

" ಇದನ್ನು ಇಲ್ಲಸ್ಟ್ರೇಟೆಡ್ ವೀಕ್ಲಿಗೆ ಕಳಿಸುವೆಯಾ ? "

" ತಪ್ಪದೆ ಕಳಿಸುತ್ತೇನೆ. ಇದೂ ನನ್ನ ಸೊತ್ತಲ್ಲವೇ ? "

" ಕಮ್ಯುನಿಸ್ಟರಿಗೆ ಖಾಸಗಿ ಆಸ್ತಿ (Private property) ಇರಕೂಡದಲ್ಲವೇ ? "

"ಹೌದು ಸಾಮಾನ್ಯ ಕಮ್ಯುನಿಸ್ಟರಿಗೆ (Rank and file) ಇರಕೂಡದು."

ಎಂದು ಗಹಗಹಿಸಿ ನಕ್ಕಳು. ಶ್ರೀಕಂಠನೂ ಅವಳ ನಗೆಯಲ್ಲಿ ಬೆರೆತ. ಇಬ್ಬರ ನಗೆಯಲ್ಲಿಯೂ ಒಡಕು ಧ್ವನಿ ಮೂಡಿತ್ತು.

ಶಕುಂತಲಾ ವಸ್ತುವಿನ ಬಗ್ಗೆ ಶ್ರೀಕಂಠನಲ್ಲಿ ಅನಿರೀಕ್ಷಿತವಾಗಿ ತಲೆದೋರಿದ್ದ ಅತ್ಯುತ್ಸಾಹ ಇಳಿಮುಖವಾಗಿತ್ತು. ತನ್ನ ಮೂರನೆಯ ಪ್ಯಾನೆಲ್ ( Panel ) ಆರಂಭಿಸಬೇಕೆಂದು ಹಲವು ಸಾರಿ ಯೋಚಿಸಿಕೊಳ್ಳುವನು. ಯೋಚನೆ ಬರಿಯ ಯೋಚನೆಯಲ್ಲಿಯೇ ಮುಕ್ತಾಯವಾಗುತ್ತಿತ್ತು.

ತಾಜ್ ಶ್ರೀಕಂಠನ ಸ್ಟೂಡಿಯೋಗೆ ಬರುವುದನ್ನೂ ಕಡಿಮೆಮಾಡಿದ್ದಳು. ಯಾವಾಗ 'ಫೋನ್' ಮಾಡಿದರೂ 'ಅವರು ಮನೆಯಲ್ಲಿಲ್ಲ' ಎಂದು ಉತ್ತರ ಬರುತ್ತಿತ್ತು.

ಶ್ರೀಕಂಠನ ಮನಸ್ಸು ವ್ಯಾಕುಲಕ್ಕೀಡಾಯಿತು.

'ತಾಜ್ ನನ್ನಿಂದ ದೂರಸರಿಯುತ್ತಿರುವಳೇ ?

ಅವಳಿಗೆ ಅಸಮಾಧಾನವಾಗಿದೆಯೇ ?

ಅಸಮಾಧಾನಕ್ಕೆ ಕಾರಣವಿಲ್ಲವಲ್ಲ !

ನನ್ನ ಸಹಜ ಶಕ್ತಿ – ಪ್ರೇರಣೆಯನ್ನು ಬದಿಗೊತ್ತಿ - ಅವಳ ಮನಸ್ಸನ್ನು ಮೆಚ್ಚಿಸುವ ಕೃತಿಗಳನ್ನೇ ಮಾಡಿರುವೆನಲ್ಲಾ ?

ನನ್ನ ಕಲೆಯನ್ನು ತಾಜಳ ಪಾದಕ್ಕೆ ಅರ್ಪಿಸಿರುವೆನಲ್ಲಾ !

ನನ್ನ ಬಲಿದಾನಕ್ಕೆ ತಾಜ್ ಬೆಲೆ ಕೊಡುವುದಿಲ್ಲವೇ ?

ಉತ್ಕಂಠನಾಗಿದ್ದ ಶ್ರೀಕಂಠ ಒಂದು ದಿನ ತಾಜಳಿಗೆ ಬಿನ್ನವಿಸಿಕೊಂಡ

"ಹೀಗೇಕೆ ಮಾಡುತ್ತಿರುವೆ ತಾಜ್ – ನಿನ್ನನ್ನು ನೋಡದೆ ನಾನು ಬದುಕಲಾರೆ ಎಂಬುದು ನಿನಗೆ ಗೊತ್ತಿಲ್ಲವೇ ?"

"ನಾನಿಲ್ಲದಿದ್ದರೂ ನಿನ್ನ ಮುಂದಕ್ಕೆ ಸಾಗಬಲ್ಲುದಲ್ಲ ಶ್ರೀಕಾಂತ್."

"ಸಾಗಲಾರದು ತಾಜ್. ಶೂನ್ಯ ಮನಸ್ಸನ್ನಾವರಿಸುತ್ತದೆ. ನೀನು ಎದುರಿಗಿದ್ದರೆ ನಾನು ಶಿಲ್ಪವನ್ನು ಕುರಿತು ಆಲೋಚಿಸಬಲ್ಲೆ - ನೀನು ಕಾಣದಾದರೆ ನನ್ನ ಚಿತ್ತ ಧ್ಯಾನಿಸುವುದು ನಿನ್ನನ್ನೇ."

"ಹಾಗಾದರೆ ನಾನು ಎದುರಿಗಿಲ್ಲದಿರುವದೇ ಒಳ್ಳೆಯದು."

"ಏಕೆ ?"

" ನೀನು ನನ್ನನ್ನೇ ಧ್ಯಾನಿಸುತ್ತಿರುತ್ತೀ ? "

" ನೀನು ವಜ್ರದಂತೆ ಕಠಿಣಳು ತಾಜ್. "

" ಕಲ್ಲಿನಂತೆ ಕಠಿಣಳು ಎಂದೇಕೆ ಹೇಳುವುದಿಲ್ಲ. "

" ಕಲ್ಲಿಗೆ ಕಾಂತಿಯಿಲ್ಲ - ವಜ್ರಕ್ಕೆ ಕಾಂತಿಯಿದೆ. "

" ನೋಡು ಶ್ರೀಕಾಂತ್, ನನ್ನ ತಂದೆಯವರದು ಕೋಟ್ಯಾಂತರ ರೂಪಾಯಿ ವ್ಯವಹಾರ. ಅವರು ವಿದೇಶಗಳಿಗೆ ಹೋದಾಗ ಅವರ ಸಮಸ್ತ ವ್ಯವಹಾರ ನೋಡಿಕೊಳ್ಳುವವಳು ನಾನು. ಸದಾ ನಾನು ನಿನ್ನ ಮುಂದೆ ಕುಳಿತಿರುವುದಕ್ಕಾಗುತ್ತದೆಯೇ ? "

" ಮನಸ್ಸಿದ್ದರೆ ಮಾರ್ಗವಿದ್ದೇ ಇರುತ್ತದೆ. "

" ಮನಸ್ಸಿದ್ದರೂ ಮಾರ್ಗವಿಲ್ಲ. "

ಹೊಸ ಪರಿಸ್ಥಿತಿಗೆ ಹೊಂದಿಕೊಳ್ಳುವುದು ಶ್ರೀಕಂಠನಿಗೆ ಕಷ್ಟವಾಯಿತು. ತಾಜಳ ಧೋರಣೆ ಅವನ ಮನಸ್ಸನ್ನು ಅಸ್ತವ್ಯಸ್ತಗೊಳಿಸಿತು.

ರೂಮಿನಲ್ಲಿ ಕುಳಿತು ತಾಜಳಿಗಾಗಿ ಕಾಯುವುದೊಂದೇ ಅವನ ಕೆಲಸ ವಾಯಿತು.

ಕಾದು ಕಾದು ಬೇಸತ್ತು ಅವನ ಕಣ್ಣಿನಿಂದ ನೀರು ದುಮುಕುವುದು. ಸೀತೆ ಸ್ವರ್ಣಮೃಗ ಬಯಸಿದಂತೆ ಮಾನವ ಸದಾ ಅಲಭ್ಯವಾದುದನ್ನೇ ಬಯಸುತ್ತಿರುತ್ತಾನಲ್ಲವೇ ? - ಯಾವದು ಕೈಯಲಿಲ್ಲವೋ, ಕೈಗೆ ಸಿಕ್ಕಲಾರದೋ ಅದೇ ಬೇಕೆಂದು ಅವನ ದುರ್ಬಲ ಮನಸ್ಸು ಹಾತೊರೆಯುತ್ತದೆಯಲ್ಲವೇ ?

ಶ್ರೀಕಂಠ ತನ್ನ ಅಸಾಯಕ ಸ್ಥಿತಿಗಾಗಿ ದುಃಖಿಸಿದ. ಅವನ ಮನಸ್ಸು ಒಂದೇ ಸಮನೆ ರಾಜೂ ಪ್ರಭಾದೇವಿಯವರನ್ನು ಬಯಸುತ್ತಿತ್ತು. ತಾನಾಗಿಯೇ ಅವರನ್ನರಿಸಿಕೊಂಡು ಹೋಗಲು ಧೈರ್ಯವಿಲ್ಲ.

' ರಾಜೂಗೆ ಪ್ರಭಾದೇವಿಗೆ ಮುಖ ತೋರಿಸುವುದು ಹೇಗೆ ? '

ಸ್ಟೂಡಿಯೋ ವಾತಾವರಣ ಶ್ರೀಕಂಠನಿಗೆ ಕಡುಬೇಸವನ್ನುಂಟುಮಾಡಿತ್ತು. ತಾಜಳ ಪ್ರಭಾವ ಸ್ಟೂಡಿಯೋದ ಪ್ರತಿಯೊಂದು ಭಾಗವನ್ನೂ ಆವರಿಸಿತ್ತು. ಆ ಪ್ರಭಾವದಿಂದ ಅವನು ಪಾರಾಗಬೇಕಾಗಿತ್ತು. ಎದ್ದವನೇ ನೇರವಾಗಿ ಜುಹೂ ದಾರಿಹಿಡಿದು ಹೊರಟ. ಟ್ಯಾಕ್ಸಿಯಿಂದಿಳಿದು ಸಮುದ್ರ ತೀರದಲ್ಲಿ ಶತಪಥ ತಿರುಗತೊಡಗಿದ್ದ. ನೆನಪಿನಿಂದ ಮಾನವ ದೂರವಾಗಲು

ಪ್ರಯತ್ನಿಸುತ್ತಾನೆ; ಆದರದು ನೆಳಲಿನಂತೆ ಅವನಿಗೆ ಗಂಟು ಬಿದ್ದೇ ಇರುತ್ತದೆ.

ಅದೇ ಸಮುದ್ರ - ಅದೇ ಸಮುದ್ರ ತೀರ - ಅದೇ ಜುಹೂ – ಆದರೆಷ್ಟು ವ್ಯತ್ಯಾಸ ! ಹಿಂದೆ ಬಂದಿದ್ದಾಗ ಹೃದಯ ತುಂಬಿತ್ತು. ಇಂದಸು ಬರಿದು-ಅದನ್ನು ತುಂಬಲೆತ್ನಿಸುತ್ತಿದ್ದ.

ತಿರುಗಾಡಿದುದು ಸಾಕಾಗಿ ಕೇ ರೆಸ್ಟುರಾದಲ್ಲಿ ಡ್ರಿಂಕ್ ತೆಗೆದುಕೊಳ್ಳಲು ಬಂದು ಕುಳಿತ. ಆರೆಂಜ ಕ್ರಷ್‌ನ್ನು ಸಾವಕಾಶವಾಗಿ, ಕಾಗದದ ಕೊಳವೆಯಲ್ಲಿ ಹೀರುತ್ತ ಕುಳಿತ. ಆರೆಂಜ್ ಕುಡಿಯುವುದಕ್ಕಿಂತ ಹೊತ್ತುಗಳೆಯುವುದು ಅವನಿಗೆ ಮುಖ್ಯವಾಗಿತ್ತು.

ಐದು ನಿಮಿಷವಾಗಿರಬಹುದು. ಆಪಾದಮಸ್ತಕ ಅತ್ಯಾಧುನಿಕ ವೇಷ ಧರಿಸಿದ ಒಬ್ಬ ಯುವಕನ ತೋಳು ಹಿಡಿದುಕೊಂಡು ತಾಜ್ ಪ್ರವೇಶಿಸಿದಳು.

ಶ್ರೀಕಂಠನ ಕೈಯಲ್ಲಿದ್ದ ಗ್ಲಾಸು ಜಾರಿ ಕೆಳಗೆ ಬೀಳುವದರಲ್ಲಿತ್ತು. ಶ್ರೀಕಂಠ ಎಚ್ಚರಗೊಂಡು ಅದನ್ನು ಮೇಜಿನ ಮೇಲಿಟ್ಟ.

ತಾಜ್, ಅವಳ ಗೆಳೆಯ ರೆಸ್ಟುರಾದ ಎದುರು ಭಾಗದ ಒಂದು ಮೂಲೆಯಲ್ಲಿ ಕುಳಿತರು. ಶ್ರೀಕಂಠ ಎವೆಯಿಕ್ಕದೆ ಅವರನ್ನೇ ನೋಡುತ್ತಿದ್ದ.

ತಾಜ್, ತನ್ನ ಗೆಳೆಯನ ಮಾತಿನಲ್ಲಿ ಲೀನವಾಗಿದ್ದಳು. ಅವಳ ಕಣ್ಣುಗಳು ಗೆಳೆಯನನ್ನು ನುಂಗುತ್ತಿದ್ದವು. ಅವಳ ಒಯ್ಯಾರ ಗೆಳೆಯನನ್ನು ಬಂಧಿಸಿದ್ದವು. ತಾಜಳ ಮಾತು ಚರ್ಯೆ, ಚಲನವಲನ ಅವಳ ಸುಪ್ತ ಆಶಯವನ್ನು ಡಂಗುರ ಸಾರುತ್ತಿತ್ತು.

ಶ್ರೀಕಂಠ ಡ್ರಿಂಕ್ ಮುಗಿಸಲಿಲ್ಲ. ಮೇಜಿನಮೇಲೆ ಡ್ರಿಂಕಿನ ಹಣ ಒಗೆದು ಅಲ್ಲಿಂದ ಎದ್ದು ಹೊರಟ.

ಎಲ್ಲಿಗೆ ?

ದುಃಖ, ಕೋಪ, ರೋಷ ತಪ್ತನಾಗಿದ ಶ್ರೀಕಂಠನ ದೇಹಾದ್ಯಂತವೂ ಕಂಪಿಸುತ್ತಿತ್ತು.

ಜುಹೂ ಬಿಟ್ಟವನು ನೇರವಾಗಿ ರೂಮಿಗೆ ಬಂದು ಹಾಸಿಗೆಯ ಮೇಲೆ ಕುಸಿದು ಬಿದ್ದ. ಜಗತ್ತು ಅದರ ವ್ಯಾಪಾರ ಎಲ್ಲವೂ ಬರಿದು ಎಂದವನಿಗೆ ಭಾಸವಾಯಿತು.

# ೧೪

ಮಾರನೆಯ ಬೆಳಿಗ್ಗೆ ಬಂದ ತಾಜ್ ಮುಖದಲ್ಲಿ ಯಾವ ವಿಕಾರವೂ ಇರಲಿಲ್ಲ. ಅದೇ ಹುಡುಗಾಟಿಕೆ, ಅದೇ ನುಡಿ ಜಾಣ್ಮೆ, ಅದೇ ನಿಶ್ಚಿಂತೆಯ ಮನೋಭಾವ ಅವಳಲ್ಲಿ ವ್ಯಕ್ತವಾಗಿತ್ತು. ನಸುನಗುತ್ತಾ

" ಇಂದು ನಾನು ಬೇಗ ಬಂದಿರುವೆ ಗೊತ್ತೇ ಶ್ರೀಕಾಂತ್ " ಎಂದಳು.

" ಏಕೆ ಬಂದಿರುವೆ ? "

" ನಿನ್ನ ಪ್ಯಾನಲ್‌ಗೆ ಪೋಸ್ ಮಾಡುವುದಕ್ಕೆ. "

ಶ್ರೀಕಂಠ ಅವಳ ಮುಖವನ್ನು ದಿಟ್ಟಿಸಿ ನೋಡಿದ. ತಾಜ್ ನಿಜವಾಗಿ ಸುಂದರಿಯಾಗಿದ್ದಳು. ಇಂದಂತೂ ಅವಳ ಮುಖ ವಿಶೇಷ ಕಳೆಗೊಂಡಿತ್ತು. ತುಂಟತನ ತುಟಿಯಂಚಿನಲ್ಲಿ ಮೆರೆದಾಡುತ್ತಿತ್ತು.

ನಿರುತ್ತರನಾಗಿ ಕುಳಿತ ಶ್ರೀಕಂಠನ ಬಳಿ ಸರಿದು ಲಲ್ಲೆಗರೆಯುತ್ತಾ

" ಶಿಲ್ಪಿಗಳು ಉತ್ತರ ಕೊಡಲಿಲ್ಲ. "

" ಯಾವ ಪ್ರಶ್ನೆಗೆ ? "

" ಪ್ಯಾನೆಲ್ ವಿಷಯ. "

" ಇಂದು ನಾನು ಉಳಿ ಕೈಯಲ್ಲಿ ಹಿಡಿಯುವ ಸ್ಥಿತಿಯಲ್ಲಿಲ್ಲ ತಾಜ್. "

" ಏಕೆ ? ಮೈಯಲ್ಲಿ ಹುಷಾರಿಲ್ಲವೇ ? "

" ಇಲ್ಲದಿದ್ದರೆ ಚೆನ್ನಾಗಿತ್ತು. "

" ಏಕೆ ? "

" ಮೃಗತೃಷ್ಣೆಗೆ ಅಸ್ತಿತ್ವವಿಲ್ಲವೆಂದು ತಿಳಿದೂ ತಿಳಿದೂ ಮನುಷ್ಯ ಅದರ ಹಿಂದೆ ಓಡುತ್ತಾನೆ. "

" ಕಲೆ ಮೃಗತೃಷ್ಣೆಯಷ್ಟು ಅಸ್ಥಿರವೇ ? "

" ಕಲೆಯಲ್ಲ - ಜೀವನ. "

" ಜೀವನಕ್ಕಿಂತ ಕಲೆ ಶಾಶ್ವತವೇ ? "

" ನಿಸ್ಸಂದೇಹವಾಗಿ. ಕಲೆ ಜೀವನದ ಪ್ರತಿಬಿಂಬವಾಗಬೇಕೆಂದಲ್ಲವೇ ನೀವು - ಕಮ್ಯುನಿಷ್ಟರು ಹೇಳುತ್ತಿರುವುದು. "

" ಹೌದು. ಊಸರವಳ್ಳಿಯಂತೆ ಕ್ಷಣಕ್ಷಣಕ್ಕೆ ಬಣ್ಣ ಬದಲಾಯಿಸುವ

ಜೀವನಕ್ಕೆ ಶಾಶ್ವತರೂಪವಿರುವುದೇ? ಅಶಾಶ್ವತವಾದುದನ್ನು ನಂಬಿಕೊಂಡು ಕಲಾವಿದ ತನ್ನ ಕೃತಿ ರಚನೆಯಲ್ಲಿ ತೊಡಗಬಹುದೇ?"

"ಇಷ್ಟೇಕೆ ನಿರ್ವಿಣ್ಣನಾಗಿರುವೆ ಶ್ರೀಕಾಂತ್."

"ಜೀವನಕ್ಕೆ ನಾನು ಬೇಡವಾಗಿದ್ದೇನೆ - ಕಲೆ ನನಗೆ ಬೇಡವಾಗುತ್ತಿದೆ."

"ಹೋಗಲಿ. ಇವತ್ತು ಕೆಲಸ ಮಾಡಲು ನಿನಗೆ ಮನೋಭಾವ (Mood) ಇರುವಂತಿಲ್ಲ – ಇನ್ನೊಮ್ಮೆ ಬರುತ್ತೇನೆ."

ಎಂದು ಕೈಗಡಿಯಾರ ನೋಡಿಕೊಂಡು ತಾಜ್ ಹೊರಡಲನುವಾದಳು. ಅವಳನ್ನು ನಿಲ್ಲೆಂದು ಶ್ರೀಕಂಠ ಹೇಳಲಿಲ್ಲ.

ತಮ್ಮ ಸ್ನೇಹದ ಬಿಸಿಯಾರುತ್ತಿದೆಯೆಂದು ಶ್ರೀಕಂಠನಿಗೆ ಚೆನ್ನಾಗಿ ಮನವರಿಕೆಯಾಯಿತು. ತನ್ನಿಂದ ದೂರ ಸರಿಯುತ್ತಿದ್ದ ತಾಜಳನ್ನು ಕುರಿತು ಹಂಬಲಿಸಿ ಪ್ರಯೋಜನವೂ ಇಲ್ಲವೆಂದು ಶ್ರೀಕಂಠನಿಗೆ ಗೊತ್ತಿತ್ತು.

ಆದರೆ ದುರ್ಬಲ ಮನಸ್ಸು ಗಗನಕುಸುಮಕ್ಕೆ ಬಾಯಿ ಬಾಯಿ ಬಿಡುತ್ತಿತ್ತು.

ತಾಜಳ ಸ್ನೇಹ - ಪ್ರೇಮ ಅನರ್ಘ್ಯವೆಂದು ಭಾವಿಸಿದ್ದ ಶ್ರೀಕಂಠನಿಗೆ ಅವಳ ಸ್ವಚ್ಛಂದ ವರ್ತನೆ, ಅನಾಸಕ್ತಿ, ಸೂಕ್ಷ್ಮ ಉಪೇಕ್ಷೆ ವಿಪುಲವೇದನೆಯನ್ನುಂಟು ಮಾಡಿದ್ದರೂ ನಿರಾಶೆಯನ್ನುಂಟುಮಾಡಿರಲಿಲ್ಲ. ತನ್ನ ಆಸೆ ಪೂರೈಸುವ ಸಂಭವ ತೀರ ಕಡಿಮೆಯೆಂದವನಿಗೆ ಭಾಸವಾಗಿದ್ದರೂ ಹೃದ್ಗತವಾಗಿದ್ದ ಬಯಕೆ ಅವನನ್ನು ಆಶಾವಾದಿಯನ್ನಾಗಿ ಮಾಡಿತ್ತು.

ಸ್ಟೂಡಿಯೋ – ಶಿಲ್ಪ – ಕಲೆ ಯಾವದೂ ಅವನಿಗೆ ಬೇಕಾಗಲಿಲ್ಲ. ಅವನ ಮನಸ್ಸು ತಾಜ್ ಹಿಂದೆ ಓಡುತ್ತಿತ್ತು. ಅವಳ ಚಲನವಲನವನ್ನು ಗೂಢಚಾರನಂತೆ ಗಮನಿಸತೊಡಗಿದ್ದ. ಗ್ರೀನ್ಸ್, ಪುರೋಹಿತ, ತಾಜ್, ಅಂಬಾಸ್ಯಾಡರ್, ಮೆಜೆಸ್ಟಿಕ್ ಹೋಟಲುಗಳಿಗೆ ಅವಳ ಗೆಳೆಯರೊಂದಿಗೆ ಹೋಗಿ ಬರುತ್ತಿದ್ದುದು, ಜೂಹೂ, ವರ್ಸೋವಾ, ಕಲ್ಯಾಣ, ಜೋಗೇಶ್ವರಿಗಳಿಗೆ ತರುಣರನ್ನು ಕಟ್ಟಿಕೊಂಡು ಹೋಗುತ್ತಿದ್ದುದೂ ಅವನ ಕಣ್ಣಿಗೆ ಬಿದ್ದವು.

ತಾಜ್ ವಾರಕ್ಕೊಮ್ಮೆ ಸ್ಟೂಡಿಯೋಕ್ಕೆ ಬಂದು ಶ್ರೀಕಂಠನಿಗೆ ದರ್ಶನ ಕೊಡುತ್ತಿದ್ದಳು. ಬರುವಾಗ ಗಡಿಯಾರ ನೋಡಿಕೊಂಡೇ 'ನನಗೆ ಅರ್ಜೆಂಟ್

ಎಂಗೇಜಮೆಂಟ್' ಇದೆ ಎಂದು ಪಲ್ಲವಿ ಹಾಡಿಕೊಂಡೇ ಪ್ರವೇಶಿಸುತ್ತಿದ್ದಳು. ಶ್ರೀಕಂಠ ಅವಳ ಸಮಸ್ತ ಚಲನವಲನವನ್ನೂ ಒಂದು ತಿಂಗಳು ಗಮನಿಸುತ್ತಿದ್ದ. ಅವನ ತಾಳ್ಮೆಯ ಭಂಡಾರ ಬರಿದಾಗಿತ್ತು.

ಒಂದು ದಿನ 'ತನ್ನ ಅರ್ಜೆಂಟ್ ಎಂಗೇಜ್‌ಮೆಂಟ್' ವಿಷಯ ತಾಜ್ ಹೇಳಿದ ಕೂಡಲೇ ಹಾವು ಹೆಡೆಯಪ್ಪಳಿಸುವಂತೆ ಶ್ರೀಕಂಠ್

"ಅಷ್ಟು ಅರ್ಜೆಂಟ್ ಕೆಲಸವಿದ್ದರೆ ಇಲ್ಲೇಕೆ ಬಂದೆ ತಾಜ್" ಎಂದು ಕೇಳಿದ.

ಶ್ರೀಕಂಠನ ಪ್ರಶ್ನೆ ತಾಜಳಿಗೆ ಅತ್ಯಾಶ್ಚರ್ಯವನ್ನುಂಟು ಮಾಡಿತು. ಶ್ರೀಕಂಠನಿಗೆ ಜೆನ್ನಿಲುಬೇ ಇಲ್ಲವೆಂದು ನಂಬಿದ್ದ ತಾಜಳಿಗೆ ಅವನ ಪ್ರಶ್ನೆ ನವನೂತನವಾಗಿ ಕಂಡು ಬಂದಿತು.

"ಬರಬಾರದಾಗಿತ್ತೇ ?" ಎಂದು ಕೇಳಿದಳು.

"ಬಂದು ನೀನು ಮಾಡುವುದಾದರೂ ಏನು ?"

"ನನ್ನ ಚಲನವಲನದ ಬಗ್ಗೆ ಯಾರೂ ಇತಿಮಿತಿಯನ್ನು ಸೂಚಿಸಲು ಸಾಧ್ಯವಿಲ್ಲ ಶ್ರೀಕಾಂತ್. ನಮ್ಮ ತಂದೆಯು ಕೂಡ ಆ ಬಗ್ಗೆ ಚಕಾರ ಶಬ್ದವೆತ್ತುವುದಿಲ್ಲ."

"ತಂದೆಯ ಅಚ್ಚುಮೆಚ್ಚಿನ ಮಗಳಲ್ಲವೇ ನೀನು !"

"ಅದರಿಂದ ನಿನಗೇನು ಕಷ್ಟವಾಗಿದೆ ?"

"ನನ್ನ ಕಷ್ಟನಷ್ಟ ಕಟ್ಟಿಕೊಂಡು ನಿನಗೇನು ?"

"ಶಿಲ್ಪಿಯ ನಾಲಗೆಉದ್ದವಾಯಿತು."

"ಆಗಬೇಕಾದದ್ದೆ ! ಕಂಬಳಿಹುಳು ಬಣ್ಣದ ಚಿಟ್ಟೆಯಾಗುವುದನ್ನು ನಾನು ಹಳ್ಳಿಯಲ್ಲಿ ನೋಡಿದ್ದೆ. ಮುಂಬಯಿ ಶಹರಿನಲ್ಲಿ ಮನುಷ್ಯರು ಬಣ್ಣದ ಚಿಟ್ಟೆಗಳಾಗುವುದನ್ನು ನೋಡುತ್ತಿದ್ದೇನೆ."

"ನನ್ನ ಬಾಳನೌಕೆಯ ಕಪ್ತಾನ (Captain)ಪದವಿ ನಿನಗೆ ವಹಿಸಲಿಲ್ಲವಲ್ಲ."

"ನೀನು ಯಾರಿಗೂ ವಹಿಸಲಾರೆ. ನೀನು ಎಷ್ಟಾದರೂ ಕಮ್ಯುನಿಸ್ಟ್ ಅಲ್ಲವೇ ?"

"ನಾಲಗೆ ಹಿಡಿದು ಮಾತನಾಡು ಶ್ರೀಕಾಂತ್."

" ನನ್ನ ನಾಲಗೆಗೆ ಸಂಯಮ ಸಾಲದು, ನಿಜ, ಒಪ್ಪಿಕೊಳ್ಳುತ್ತೇನೆ; ನಿನ್ನ ದೇಹದ ಯಾವ ಇಂದ್ರಿಯಕ್ಕೂ ಸಂಯಮವಿಲ್ಲ ತಾಜ್."

" ನಾನು ಕುಲಟೆಯೇ ? "

" ಅಲ್ಲ ಪತಂಗ. "

ತಾಜ್ ರೋಷತಪ್ತಳಾಗಿ ಶ್ರೀಕಾಂತನ ಕಪಾಳಕ್ಕೆ ಛಟಾರನೆ ಬಿಗಿದು You beggar - how dare you to iusult me ( ಭಿಕಾರಿ ನನ್ನ ಅಪಮಾನಿಸಲು ನಿನಗೆಷ್ಟು ಧೈರ್ಯ ) " ಎಂದಳು.

ಶ್ರೀಕಂಠ ಕ್ಷಣಕಾಲ ಚಕಿತನಾಗಿ ಕುಳಿತು ಬಿಟ್ಟ. ಅವನ ಬಾಯಲ್ಲಿ ಒಂದೇ ಶಬ್ದ ಹೊರಟಿತು..

" ನಾನಿಂದು ಬೆಗ್ಗರ್ (Beggar)"

" ಹೌದು. "

" ಹಿಂದೆ ನಾನು ದೈವಶಿಲ್ಪಿ. "

" ಹಾಗೆಂದು ನಾನು ನಂಬಿದ್ದೆ. "

" ನೀನು ಶ್ರೀಮಂತ ಕನ್ಯೆ - ಲಕ್ಷ್ಮೀಪುತ್ರಿ - ಆದರೇನು ಕುಲಶೀಲವಿಲ್ಲದ, ಪ್ರೇತರೂಪ ಹೊತ್ತಿರುವ ಪಿಶಾಚಿನಿ. ನಿನಗೆ ಹೃದಯವಿದೆಯೇ — ನಿಜವಾದ ಕಲಾಭಿಮಾನವಿದೆಯೇ ? — ನಿನ್ನಂಥ ಕುಲಟೆಗೆ ಕಲೆ ಅರ್ಥವಾಗುತ್ತದೆಯೇ — ಎಲ್ಲವೂ ನಿನಗೊಂದು ಫ್ಯಾಷನ್ — ನಿನ್ನ ರಾಕ್ಷಸಕಾಮಕ್ಕೆ ಕಲೆ, ಕಲಾವಿದರಿಬ್ಬರೂ ಬಲಿಗಳು. "

ಎಂದವನೇ ಕೆಳಗೆ ಬಿದ್ದಿದ್ದ ಸುತ್ತಿಗೆ ತೆಗೆದುಕೊಂಡು ತನ್ನ ಸ್ಟುಡಿಯೋದಲ್ಲಿದ್ದ ಶಿಲ್ಪಕೃತಿಗಳನ್ನೆಲ್ಲಾ ಒಡೆದು ಪುಡಿಪುಡಿ ಮಾಡಿಬಿಟ್ಟ.

ತಾಜಳಿಗೆ ಅಪಾದ ಮಸ್ತಕ ಕೋಪವೇರಿತು. ಕಿಟಕಿಯ ಬಳಿಗೆ ಹೋಗಿ ಅಂಜಾರಿಯಾನನ್ನು ಕೂಗಿದಳು. ಅವಳು ಕೂಗಿದ ರಭಸಕ್ಕೆ ಅಂಜಾರಿಯಾ, ಭಯ್ಯಾ ಇಬ್ಬರೂ ಓಡಿ ಬಂದರು. ತಾಜ್ ಕಿಡಿ ಸುರಿಸುತ್ತಾ

" ಇವನನ್ನು ಈಗಲೇ ಹೊರಗೆ ಹಾಕಿ — ನನ್ನನ್ನು ಅಪಮಾನಗೊಳಿಸಿದ್ದಾನೆ" ಎಂದಳು.

ಶ್ರೀಕಂಠ ಎದ್ದು ನಿಂತು

" ತಾಜ್ - ಇದೋ ಹೊರಡುತ್ತೇನೆ. ನನ್ನನ್ನು ಹೊರಗೆ ಕಳಿಸಲು

ಅಂಜಾರಿಯವರನ್ನು ಕೂಗಬೇಕಾಗಿರಲಿಲ್ಲ. ನನ್ನ ಬಾಳನ್ನು ನೀನು ಮಣ್ಣು ಗೂಡಿಸಿದಂತೆ, ನಿನ್ನ ಬಾಳೂ ಮಣ್ಣುಗೂಡುವುದು. ಯಾವ ರಾಕ್ಷಸ ಲಾಲಸೆಯನ್ನು ನೀನಿಂದು ಅಪ್ಪಿಕೊಂಡಿರುವಿಯೋ ಅದೇ ಲಾಲಸೆ ನಿನ್ನನ್ನು ಆಹುತಿ ತೆಗೆದುಕೊಳ್ಳುತ್ತದೆ. "

ಎಂದವನೇ ಆ ಸ್ಥಳ ಬಿಟ್ಟು ಹೊರಟು ಬಿಟ್ಟ.

ಶ್ರೀಕಂಠ ರಸ್ತೆಯಲ್ಲಿ ನಡೆದು ಹೋಗುತ್ತಿದ್ದಂತೆ ಅವನ ಮುಂದೆಯೇ ತಾಜಳ ಕಾರು ಹೋಯಿತು. ತಾಜ್ ಅವನತ್ತ ಕಣ್ಣು ತಿರುಗಿಸಲಿಲ್ಲ.

ಶಿಲ್ಪಿ - ಮಹಾ ಶಿಲ್ಪಿ - ದೈವ ಶಿಲ್ಪಿ ಇಂದು ಬೀದಿಯ ಭಿಕಾರಿ - ಉಟ್ಟ ಬಟ್ಟೆಯಲ್ಲಿ ಹೊರಬಿದ್ದಿದ್ದಾನೆ. ನಿರಾಶೆಯೊಂದೇ ಅವನ ಆಸ್ತಿ.

ನೆತ್ತಿ ಸುಡುವಂತೆ ಸೂರ್ಯನ ಪ್ರಖರ ಕಿರಣ - ಶಿಲ್ಪಿಯ ಕಣ್ಣಲ್ಲಿ ಧಾರೆ.

ಶಿಲ್ಪಿ ನಡೆಯುತ್ತಿದ್ದಾನೆ.

ಎಲ್ಲಿಗೆ ?

ಎಲ್ಲಿಗಾದರೇನು ? ಎಲ್ಲಿಗೆ ಹೋದರೇನು ?

ಶಿಲ್ಪಿ ನಡೆಯುತ್ತಿದ್ದಾನೆ.

ಹಿಂದಿರುಗಿ ನೋಡಲಿಲ್ಲ - ಬಗ್ಗಿಸಿದ ಕತ್ತು ಮೇಲಕ್ಕೆತ್ತಲಿಲ್ಲ.

## ೧೫

ರಾಜೂ ಕೋಣೆಗೆ ಒಂದು ದಿನ ಬಂದ ಪ್ರಭಾ ಮಾತನಾಡದೆ ಸುಮ್ಮನೆ ಕುಳಿತಳು. ತನ್ನ ಒಂದು ಚಿತ್ರಕ್ಕೆ ಮೌಂಟ್ (Mount) ಹಾಕುತ್ತಿದ್ದ ರಾಜೂ ಅವಳ ಕಡೆ ಗಮನ ಕೊಡಲಿಲ್ಲ. ರಾಜೂ ಕತ್ತೆತ್ತಿ ನೋಡಿದಾಗ ಪ್ರಭಾ ಕಣ್ಣುಗಳಲ್ಲಿ ನೀರು ತುಂಬಿತ್ತು. ಚಿತ್ರ, ಮೌಂಟ್ ಬಿಟ್ಟು ಪ್ರಭಾ ಬಳಿಗೆದ್ದು ಬಂದು

" ಏಕೆ ಪ್ರಭಾ, ಅಳುತ್ತಿರುವೆ. ಏನಾಯಿತು ? " ಎಂದು ಕೇಳಿದ.

ಪ್ರಭಾದೇವಿಯ ದುಃಖ ಉಮ್ಮಳಿಸಿತು. ಕೈಯಲ್ಲಿ ಹಿಡಿದಿದ್ದ ಪತ್ರಿಕೆಯನ್ನು ರಾಜೂ ಕೈಯಲ್ಲಿತ್ತಳು. ರಾಜು ಪುಟಗಳು ತಿರುವಿ ಹಾಕಿ ' ಸಂಸ್ಕೃತಿಯ ಟಿಪ್ಪಣಿಗಳು ' ( Cultural notes ) ಇದ್ದ ಪುಟ ಗಮನಿಸಿ

" ಇದು ಹೀಗೇ ಆಗುತ್ತದೆಂದು ನಾವು ನಿರೀಕ್ಷಿಸಿರಲಿಲ್ಲವೇ ಪ್ರಭಾ.

ಇದಕ್ಕಾಗಿ ದುಃಖಿಸುವುದೇಕೆ ? "

" ಮುಂದೆ ಶ್ರೀಕಾಂತರ ಗತಿಯೇನು ? "

" ಅವನೀಗ ದಷ್ಟಪುಷ್ಟನಾಗಿದ್ದಾನೆ. ಯಾರ ನೆರವು, ಸ್ನೇಹ, ವಿಶ್ವಾಸವೂ ಅವನಿಗೆ ಅಗತ್ಯವಿಲ್ಲ. "

" ಇಲ್ಲ ರಾಜೂ - ಈಗಲೇ ಅವರಿಗೆ ನಮ್ಮ ನೆರವು, ಸ್ನೇಹ ಅಗತ್ಯ. "

" ನಾವು ಸ್ನೇಹದ ಚತ್ರ ತೆಗೆದಿಲ್ಲ ಪ್ರಭಾ. ಬೇಡವಾದಾಗ ಧಿಕ್ಕರಿಸಿ, ಬೇಕೆನಿಸಾಗ ಆಹ್ವಾನಿಸುವುದಕ್ಕೆ. "

" ಎಲ್ಲರಂತೆ ನೀನೂ ಮಾತನಾಡುತ್ತಿರುವೆಯಲ್ಲ ರಾಜೂ. "

" ಎಲ್ಲರಂತೆ ಶ್ರೀಕಂಠ ವರ್ತಿಸಿದಾಗ, ನಾವೂ ಎಲ್ಲರಂತೆ ಮಾತನಾಡಲೇ ಬೇಕಲ್ಲವೇ ? "

" ಇನ್ನೊಂದು ವಿಷಯ ಕೇಳಿದೆಯಾ ರಾಜೂ. "

" ಏನದು ? "

" ಶ್ರೀಕಾಂತರು ಈಗ ಮಲಬಾರ್ ಹಿಲ್‌ನಲ್ಲಿ ಇಲ್ಲ. ತಾಜಳ ಸ್ಟುಡಿಯೋ ಬಿಟ್ಟುಬಿಟ್ಟಿದ್ದಾರೆ. "

" ಎಲ್ಲಿಗೆ ಹೋದ ? "

" ಅದೇ ತಿಳಿದು ಬಂದಿಲ್ಲ. ಮನೆಯಿಂದ ಹೊರಟು ಇಲ್ಲಿಗೆ ಬರುತ್ತಾ ನಾನು ' ಪೀಪಲ್ಸ್ ವಾಯ್ಸ್ ' ಕೊಂಡುಕೊಂಡೆ. ' ಸಂಸ್ಕೃತಿಯ ಟಿಪ್ಪಣಿಗಳು ' ಓದಿದೊಡನೆಯೇ ಎದೆ ಹಾರತೊಡಗಿತು. ಕೂಡಲೆ ಇರಾನಿ ಹೊಟೇಲಿಗೆ ಹೋಗಿ ಶ್ರೀಕಾಂತರಿಗೆ ಫೋನ್ ಮಾಡಿದೆ. ಅಂಜಾರಿಯಾ ಫೋನ್ ಕೈಗೆತ್ತಿಕೊಂಡು ' ಅವರು ಇಲ್ಲಿಲ್ಲ ' ಎಂದರು. ' ಎಲ್ಲಿಗೆ ಹೋದರು ?' ಎಂದು ಕೇಳಿದೆ. ' ಗೊತ್ತಿಲ್ಲ ' ವೆಂದರು. "

" ತಾಜ್‌ಗೂ ಅವನಿಗೂ ತುಂಬ ಜಗಳವಾಗಿರಬೇಕು. ತಾಜ್ ಯಥಾಕ್ರಮದಂತೆ ಶ್ರೀಕಂಠನನ್ನು ಹೊರದೂಡಿರಬೇಕು. "

" ಈ ಹೆಮ್ಮಾರಿ ಎಷ್ಟು ಜನ ಕಲಾವಿದರನ್ನು ನುಂಗಲು ಮನಸ್ಸುಮಾಡಿರುವಳೋ ? ರಣಧೀರರಿಗೆ ಹುಚ್ಚೇ ಹಿಡಿಯಿತು - ಶ್ರೀಕಾಂತರ ಗತಿಯೇನಾಗುವುದೋ ? "

" ಪಾರ್ಟಿಯನ್ನೂ ಶ್ರೀಕಂಠನ ವಿರುದ್ಧ ಎತ್ತಿಕಟ್ಟಿರುವಳಲ್ಲಾ ಪ್ರಭಾ. "

" ಅದೇ ನನ್ನನ್ನು ಯೋಚನೆಗೀಡು ಮಾಡಿರುವುದು. "

" ತಾಜಳ ಅಧೀನನಾಗಿರುವ ವರೆಗೆ ಶ್ರೀಕಂಠ ದೈವಶಿಲ್ಪಿ - ಪ್ರಗತಿಶೀಲ ಶಿಲ್ಪ ಶಿರೋಮಣಿ - ಜನಪದ ಶಿಲ್ಪಿ; ಈಗವನು ಪ್ರತಿಕ್ರಿಯಾಗಾಮಿ, ರೈಟ್ ವಿಂಗ್ ಡೀವಿಯೇಷನಿಸ್ಟ್ (Right wing deviationist ) "

" ನಾವೂ ಕಮ್ಯುನಿಸ್ಟರೇ - ಆದರೆ ಕಲಾವಿದರು. "

" ಹೌದು – ಅದಕ್ಕೇನು ಮಾಡಬೇಕು ? "

" ಕಲಾವಿದರು ಕಲಾವಿದನ ನೆರವಿಗೆ ನಿಲ್ಲಬೇಕು. ಶ್ರೀಕಾಂತರು ನಮ್ಮ ಗೆಳೆಯರೆಂದಲ್ಲ, ಅವರು ನಮ್ಮ ನಾಡಿನ ಪ್ರತಿಭಾವಂತ ಶಿಲ್ಪಿಗಳೆಂದು. "

" ಪಾರ್ಟಿಯ ವಿರುದ್ಧ ಸೀತ ಹೊರತೂ ಇದಕ್ಕೆ ಗತ್ಯಂತರವಿಲ್ಲ. ಪಾರ್ಟಿ ಈಗ ಶ್ರೀಕಂಠನನ್ನು ನಾಶಮಾಡಲು ಹೊರಟಿರುವಂತೆ ನಮ್ಮನ್ನೂ ನಾಶ ಮಾಡಲೆತ್ನಿಸುತ್ತದೆ. "

" ಈ ರಾಕ್ಷಸ ದಬ್ಬಾಳಿಕೆಯನ್ನು ಯಾರಾದರೂ ಎದುರಿಸಬೇಕಲ್ಲವೇ? "

" ಪಾರ್ಟಿಯ ಮಹಾಬಲದ ವಿರುದ್ಧ ನೀನೂ ನಾನೂ ಸೆಣಸಲು ಸಾಧ್ಯವೇ ? "

" ಸೆಣಸುವವರು ನಾವಲ್ಲ – ಸತ್ಯ. ಅಸತ್ಯದೊಂದಿಗೆ ಸತ್ಯ, ಹೋರಾಡುತ್ತದೆ. ನೀನೂ ನಾನೂ ಸಹಿ ಹಾಕಿ ' ಪೀಪಲ್ಸ್ ವಾಯ್ಸ್ ' ನಲ್ಲಿ ಬಂದಿರುವ ವಿಮರ್ಶೆಯನ್ನು ಎದುರಿಸೋಣ. "

" ನಮ್ಮ ಲೇಖನ ' ಪೀಪಲ್ಸ್ ವಾಯ್ಸ್ ' ನಲ್ಲಿ ಪ್ರಕಟವಾಗುವುದೆಂದು ಕನಸುಗಾಣುತ್ತಿರುವೆಯಾ ? "

" ಆಗದಿದ್ದರೂ ಚಿಂತೆಯಿಲ್ಲ. ಬಾಂಬೆ ಕ್ರಾನಿಕಲ್ ಇದೆ - ನ್ಯಾಷನಲ್ ಹೆರಾಲ್ಡ್ ಇದೆ - ಟೈಮ್ಸ್ ಆಫ್ ಇಂಡಿಯಾ ಇದೆ. "

" ಪಾರ್ಟಿಯಿಂದ ನಮ್ಮನ್ನು ಹೊರಗೆ ಹಾಕುತ್ತಾರೆ. "

" ನಾವೇ ಹೊರಗೆ ಹೋಗುವಾಗ ಅವರು ಹೊರಗೆ ಹಾಕುವುದು ಹೇಗೆ ? "

" ಕಮ್ಯುನಿಸ್ಟ್ ಪಾರ್ಟಿ ಸೇರುವುದೆಂದರೆ ಅಭಿಮನ್ಯು ಚಕ್ರವ್ಯೂಹ ಹೊಕ್ಕಂತೆ. ಅದರ ಒಳಗೆ ಹೋಗಬಹುದಲ್ಲದೆ, ಹೊರಗೆ ಬರಲು ಸಾಧ್ಯವಿಲ್ಲ. ದಿವಾನ್, ನಾನಾ, ಜೋಶಿ, ಗಣೇಶ್, ರಣಧೀರ್ ಇವರ ಗತಿಯೇನಾಯಿತು

ಜ್ಞಾಪಿಸಿಕೋ ? ”

“ ರಾಜೂ, ಈ ಬಗ್ಗೆ ನಾನೊಂದು ನಿಶ್ಚಯ ಮಾಡಿಕೊಂಡೇ ಇಲ್ಲಿಗೆ ಬಂದಿದ್ದೇನೆ. ”

“ ಏನದು ನಿನ್ನ ನಿಶ್ಚಯ ? ”

“ ನೀನು ನನ್ನ ಸಹಾಯಕ್ಕೆ ಬರದಿದ್ದರೂ ನಾನು ‘ಪೀಪಲ್ಸ್ ವಾಯ್ಸ್’ನ ಫಾಸಿಸಂ ಎದುರಿಸಲು ಸಿದ್ಧಳಾಗಿದ್ದೇನೆ. ”

“ ನನ್ನ ಮಾನವತೆಯನ್ನು ಕಮ್ಯುನಿಸ್ಟ ಪಾರ್ಟಿಯೂ ನಾಶ ಮಾಡಲಾರದು ಪ್ರಭಾ. ಅಸಮಬಲದ ಈ ಹೋರಾಟದಲ್ಲಿ ನಿನ್ನೊಬ್ಬಳನ್ನೇ ರಣರಂಗಕ್ಕೆ ಕಳುಹಿಸುವಷ್ಟು ಹೇಡಿಯೇ ನಾನು. ಕಮ್ಯುನಿಸ್ಟ ಪಾರ್ಟಿಯಲ್ಲಿರುವವರಲ್ಲಿ ಯಾರೂ ಶ್ರೀಕಂಠನ ಪಾದಧೂಳಿಗೆ ಸರಿಹೋಗಲಾರರು............ ನಾನೇನು ಮಾಡಬೇಕು ಹೇಳು. ”

“ ಮೊದಲು ‘ಪೀಪಲ್ಸ್ ವಾಯ್ಸ್’ ಗೆ ಉತ್ತರ ಸಿದ್ಧಮಾಡು. ”

“ ರಾಜೂ ಮರುಮಾತನಾಡದೆ ಕೈಗೆ ಕಾಗದ, ಪೆನ್ ತೆಗೆದುಕೊಂಡ. ಪ್ರಭಾ ಅವನೂ ಇಬ್ಬರೂ ಕೂಡಿ ಉತ್ತರ ಸಿದ್ಧಗೊಳಿಸಿ, ಆರು ಪ್ರತಿ ಟೈಪ್ ಮಾಡಿಸಿ ತಂದರು. ಅಂದೇ ಅಂಚೆಯಲ್ಲಿ ಒಂದು ಪ್ರತಿ ‘ಪೀಪಲ್ಸ್ ವಾಯ್ಸ್’ ಪತ್ರಿಕೆಯ ಕಛೇರಿಗೆ ಹೋಯಿತು.

ಪ್ರತಿದಿನವೂ ಶ್ರೀಕಂಠನನ್ನು ಹುಡುಕುವುದೊಂದೇ ಕೆಲಸವಾಯಿತು ಪ್ರಭಾ, ರಾಜೂ ಇಬ್ಬರಿಗೂ. ಜನ ಸಂದಣಿ ಸೇರುವ ವಿ.ಟಿ, ಚರ್ಚ್‌ಗೇಟ್, ಫೋರ್ಟ್, ಚೌಪಾತಿ, ಜುಹೂ, ವರ್ಸೋವಾ, ಜೋಗೇಶ್ವರಿ, ಕ್ರಾಫರ್ಡ್ ಮಾರ್ಕೆಟ್, ವಿಕ್ಟೋರಿಯಾ ಗಾರ್ಡನ್ಸ್ ಎಲ್ಲವನ್ನೂ ಶೋಧಿಸಿಬಿಟ್ಟರು.

ವಾರ ಕಳೆದರೂ ಶ್ರೀಕಂಠನ ಪತ್ತೆಯಿಲ್ಲ.

ಶ್ರೀಕಂಠ ಮುಂಬಯಿ ಬಿಟ್ಟು ಹೋಗಿರಬಹುದೆಂದು ರಾಜೂ ತರ್ಕ ಮಾಡಿದ.

ವಾರಾಂತ್ಯದಲ್ಲಿ ಪ್ರಕಟವಾದ ‘ ಪೀಪಲ್ಸ್ ವಾಯ್ಸ್ ’ ಪತ್ರಿಕೆಯಲ್ಲಿ ‘ ರಾಜೂ, ಪ್ರಭಾ ’ ಅವರ ಲೇಖನ ಪ್ರಕಟವಾಗಿರಲಿಲ್ಲ. ಅದರ ಬದಲು ‘ಸಂಸ್ಕೃತಿಯ ಟಿಪ್ಪಣಿ’ ಗಳನ್ನು ಬರೆಯುತ್ತಿದ್ದ ಆಧಾರ್, ಶ್ರೀಕಂಠನ ಮೇಲೆ ಮತ್ತಷ್ಟು ವಿಷ ಕಾರಿದ್ದ. ಶ್ರೀಕಂಠನಿಗೆ ಶಿಲ್ಪದ ವಿಷಯ ಏನೂ ಗೊತ್ತಿಲ್ಲವೆಂದು

ಹೇಳಲು ಆಧಾರ್ ಹಿಂಜರಿದಿರಲಿಲ್ಲ.

ಪ್ರಭಾ ಕೆಣಕಿದ ಸಿಂಹಿಣಿಯಂತಾದಳು. ಇಂದು ಶ್ರೀಕಂಠನ ಕಡೆ ತಿರುಗಿದ ವಿಷಬಾಣ ನಾಳೆ ತನ್ನ ಮೇಲೆ ತಿರುಗುವುದೆಂಬುದನ್ನು ಚೆನ್ನಾಗಿ ಬಲ್ಲಳು.

ಶ್ರೀಕಂಠನಿಗಾಗಿದ್ದ ಕಟು ಅನುಭವ ಅವಳ ಹೃದಯ ಹಿಂಡಿತ್ತು. ಶ್ರೀಕಂಠ ಸಿಕ್ಕಿರಲಿಲ್ಲ. ಶೋಧನೆಯೆಲ್ಲಾ ನಿರರ್ಥಕವಾಗಿತ್ತು.

" ಶ್ರೀಕಾಂತ್ ಬದುಕಿರುವರೇ ? "

" ಸಾಯುವಷ್ಟು ಅವನು ದುರ್ಬಲನೇ ? "

" ತಾಜ್ ಅವರ ಹೃದಯಕ್ಕೆಂಥ ಬರೆ ಕೊಟ್ಟಿರುವಳೋ ? "

" ಶಿಲ್ಪಿ ಲೋಹವನ್ನು ಕಾಸಿ, ಕರಗಿಸಿ, ಬಡಿದಲ್ಲದೆ ಅದು ಆಕಾರ ತಳೆಯುವುದೇ ಪ್ರಭಾ. "

ನಿಜವಾಗಿ ಶ್ರೀಕಾಂತರು ಆತ್ಮಹತ್ಯೆ ಮಾಡಿಕೊಂಡಿಲ್ಲವೆಂದು ನಿಮಗೆ ಧೈರ್ಯವಿದೆಯೇ ? "

" ಇದೆ ಪ್ರಭಾ – ಪೂರ್ಣ ಧೈರ್ಯವಿದೆ. "

" ನನಗೂ ಆ ಧೈರ್ಯ ಕೊಡು. "

" ನೋಡು – ಶ್ರೀಕಂಠ ಮೈಸೂರು ಬಿಟ್ಟು ಇಲ್ಲಿಗೆ ಬಂದಮೇಲೆ ಅವನು ವಿದ್ಯಾಭವನಕ್ಕೆ ಮಾಡಿಕೊಟ್ಟಿರುವ ಗಾಂಧೀಜಿ ಮೂರ್ತಿಯೊಂದೇ ಅವನಿಗೆ ತೃಪ್ತಿಯನ್ನಿತ್ತಿರುವುದು. ತರುವಾಯ ಅವನು ನಿರ್ಮಿಸಿದ ಲೆನಿನ್, ಸ್ಟಾಲಿನ್, ಶಕುಂತಲಾ ಮೊದಲಾದ ಕೃತಿಗಳು ನಮ್ಮ ಬಲವಂತಕ್ಕೆ - ತಾಜಳ ಬಲವಂತಕ್ಕೆ ಮಾಡಿದ ಕೃತಿಗಳು. ಅವ್ಯಕ್ತವಾದ ಕಲೆ – ಅಥವಾ ಅಪೂರ್ಣವಾಗಿ ವ್ಯಕ್ತವಾದ ಕಲೆ ಒಂದು ಬಗೆಯ ಅಸೀಮ ಅತೃಪ್ತಿಗೆಡೆಕೊಡುತ್ತದೆ. ಆ ಅತೃಪ್ತಿಯೇ ಕಲಾವಿದನ ಕ್ಷೇಮರ. ಅದೇ ಅವನ ಉತ್ಕ್ರಾಂತಿಗೆ ನೆರವಾಗುವ ಕ್ರತುಶಕ್ತಿ. ತನ್ನ ಕಲೆಯ ಪೂರ್ಣ ವಿಕಾಸ ಕಂಡ ಹೊರತೂ ಶ್ರೀಕಂಠ ಈ ಲೋಕ ತ್ಯಜಿಸುವುದಿಲ್ಲವೆಂದು ನಾನು ಆಣೆಮಾಡಿ ಹೇಳಬಲ್ಲೆ. "

ಪ್ರಭಾದೇವಿಯ ಮುಖದಲ್ಲಿ ಮೂಡಿದ್ದ ದುಃಖದ ಗೆರೆಗಳು ಮಾಯವಾಗಿ ಮುಗುಳ್ನಗೆ ಮೂಡಿತು.

" ನಮ್ಮ ಉತ್ತರ 'ಪೀಪಲ್ಸ್ ವಾಯ್ಸ್' ಪ್ರಕಟಿಸಿಲ್ಲ ರಾಜೂ. "

" ಒಳ್ಳೆಯದೇ ಆಯಿತು. ನಾಳೆಯ ಬಾಂಬೆ ಕ್ರಾನಿಕಲ್ ಪ್ರಕಟಿಸು

ತ್ತದೆ. ”

ಎಂದು ಹೇಳಿದ.

ಮಾರನೆಯ ಬೆಳಿಗ್ಗೆಯೆ, ‘ ಬೊಂಬಾಯಿ ಕ್ರಾನಿಕಲ್ ’ ಪ್ರಭಾ ರಾಜೂ ಬರೆದಿದ್ದ ಲೇಖನವನ್ನು ದಪ್ಪಕ್ಷರದ ತಲೆಕಟ್ಟು ಕೊಟ್ಟು ಪ್ರಕಟಿಸಿತು.

“ ಇಂದು ಪಾರ್ಟಿಗೂ ನಮಗೂ ದಾಂಪತ್ಯ ವಿಚ್ಛೇದನವಾಯಿತು ಪ್ರಭಾ ”

ಎಂದು ರಾಜೂ ಹೇಳಿದ.

ಅಂದೇ ಸಂಜೆ ಪಾರ್ಟಿ ಕಛೇರಿಯಲ್ಲಿ, ಸಭೆ ಸೇರಿತು. ಸಿಸ್ತುಭಂಗ ಮಾಡಿದ ‘ ಪ್ರಭಾದೇವಿ, ರಾಜೂ ’ ಇವರ ಬಗ್ಗೆ ಯಾವ ಕ್ರಮ ಕೈಕೊಳ್ಳಬೇಕೆಂಬುದೇ ‘ ಕಾರ್ಯ ಕ್ರಮ ’ ದ ಮುಖ್ಯ ವಿಷಯವಾಗಿತ್ತು.

“ ಕೂಡಲೆ ಪಾರ್ಟಿಯಿಂದ ಹೊರಗೆ ಹಾಕಿ ಎಲ್ಲಾ ಪಾರ್ಟಿ ಯೂನಿಟ್‌ಗಳಿಗೂ ( Unit ) ತಿಳಿಸಬೇಕೆಂದು ಕಾಮ್ರೇಡ್ ಸಹಸ್ರಬುದ್ಧೆ ಒತ್ತಾಯ ಮಾಡಿದರು.

“ ಪಾರ್ಟಿಯ ಅಸ್ತಿತ್ವ ಈಗಲೇ ಅಲುಗಾಡುತ್ತಿದೆ. ಪ್ರಭಾ ರಾಜ್ ಇಬ್ಬರನ್ನೂ ನಾವು ಪಾರ್ಟಿಯಿಂದ ಹೊರಗೆ ಹಾಕಿದರೆ ಅವರು ನಮ್ಮ ಪ್ರಬಲ ಶತ್ರುಗಳುತ್ತಾರೆ. ಅವರ ಮೇಲೆ ನಮ್ಮ ಹತೋಟಿ ತಪ್ಪುತ್ತದೆ. ಪಾರ್ಟಿಯೊಳಗೇ ಅವರನ್ನುಳಿಸಿಕೊಂಡು ಹಣ್ಣು ಹಣ್ಣು ಮಾಡಬೇಕು. ”

ಎಂದು ಕಾಮ್ರೇಡ್ ಫಡ್ಕೆ ಅಭಿಪ್ರಾಯಪಟ್ಟರು.

ಮಲೆಯಾಳದ ಪಾರ್ಟಿ ಮುಖಂಡ ಗೋವಿಂದನ್

“ ಪ್ರಭಾ, ರಾಜ್ ಇಬ್ಬರೂ ದಂಗೆಖೋರರು. ಇವರನ್ನು ನಾವು ಮನ್ನಿಸಿದರೆ ಪಾರ್ಟಿಯ ಸಿಸ್ತು ಕುಸಿದುಬೀಳುತ್ತದೆ. ಪಾರ್ಟಿಯಿಂದ ಅವರನ್ನು ಹೊರತಳ್ಳಿ, ಅವರು ತಲೆಯೆತ್ತದಂತೆ ಮಾಡುವುದು ಸರಿಯಾದ ಕ್ರಮ. ”

ಎಂದು ಉಗ್ರವಾಗಿ ಅಪ್ಪಣೆಕೊಡಿಸಿದರು.

ವಾದ ಸಾಗುತ್ತಿದ್ದಂತೆ ನೇರವಾಗಿ ಪ್ರಭಾದೇವಿ, ರಾಜೂ ಒಳಕ್ಕೆ ಬಂದರು. ಪಾರ್ಟಿಯ ನಾಯಕರು ಯಾರೂ ಅವರನ್ನು ಮಾತನಾಡಿಸಲಿಲ್ಲ. ಕೂಡಲೂ ಹೇಳಲಿಲ್ಲ.

ರಾಜೂ ಖಾಲಿಯಿದ್ದ ಒಂದು ಕುರ್ಚಿಯೆಳೆದುಕೊಂಡು ಪ್ರಭಾದೇವಿ

ಯನ್ನು ಅದರ ಮೇಲೆ ಕೂಡಿಸಿದ.

" ಇದು ಗುಪ್ತಸಭೆ. ನಿಮ್ಮನ್ನು ಇಲ್ಲಿ ಬರಹೇಳಿದವರು ಯಾರು ? "

ಎಂದು ಸಹಸ್ರಬುದ್ಧೆ ಕೇಳಿದರು.

" ಇಂದು ನೀವು ಸಭೆಮಾಡಿ, ನಮ್ಮ ವಿಷಯ ಚರ್ಚಿಸುವಿರೆಂದು ಗೊತ್ತಿತ್ತು. ನನ್ನ ವಿಷಯ ಚರ್ಚೆಯಾಗುವ ಸಭೆಗೆ ಬರುವ ಅಧಿಕಾರ ನನಗಿಲ್ಲವೇ ? "

" ಇದು ಶುದ್ಧ ಗುಂಡಾವರ್ತನೆ ಕಾಮ್ರೇಡ್ ರಾಜ್.

ಎಂದು ಗೋವಿಂದನ್ ಹೇಳಿದರು.

" ಹೌದು, ಕಾಮ್ರೇಡ್, ಪಾರ್ಟಿಯಲ್ಲಿಯೇ ಇದನ್ನು ನಾನು ಕಲಿತದ್ದು. "

" ನಿಮ್ಮನ್ನೂ ಪ್ರಭಾದೇವಿಯನ್ನೂ ಪಾರ್ಟಿಯಿಂದ ಹೊರಗೆ ಹಾಕಲು ನಿಶ್ಚಯಿಸಿದ್ದೇವೆ."

ಎಂದರು ಸಹಸ್ರಬುದ್ಧೆ.

" ಅದಂತೂ ಅನಿವಾರ್ಯ. ನನ್ನನ್ನೂ ಪ್ರಭಾದೇವಿಯನ್ನೂ ಪಾರ್ಟಿಯಿಂದ ಹೊರಗೆ ಹಾಕುವ ಮುನ್ನ ಒಂದೆರಡು ವಿಷಯಗಳನ್ನು ನೀವು ಗಮನಿಸುವುದೊಳ್ಳೆಯದು. "

" ಯಾವ ವಿಷಯಗಳು. "

" ನಮ್ಮ ಮೇಲೆ ಕ್ರಮಕೈಕೊಂಡ ಕೂಡಲೆ ನೀವು ಅಪಪ್ರಚಾರ ಆರಂಭಿಸುವಿರಿ. ನನ್ನ ಮತ್ತು ಪ್ರಭಾದೇವಿಯ ಶೀಲದ ಮೇಲೆ ಇಲ್ಲಸಲ್ಲದ ಹೊಲಸು ಆರೋಪಗಳನ್ನು ಮಾಡಲಾರಂಭಿಸುವಿರಿ. ಇದೇ ಕೆಲಸ ಮುಂದುವರಿಸಲು ಪಾರ್ಟಿ ಯೂನಿಟ್ಸುಗಳೆಲ್ಲಕ್ಕೂ ಆಜ್ಞೆ ವಿಧಿಸುವಿರಿ. "

" ನಮ್ಮ ಮನಸ್ಸು ಬಂದಂತೆ ಮಾಡುತ್ತೇವೆ. ಅದನ್ನು ಕೇಳುವುದಕ್ಕೆ ನೀವು ಯಾರು ? "

" ನಾನೇ — ಎಕ್ಸ್ — ಕಮ್ಯುನಿಸ್ಟ್ ( Ex - Communist ) ಪಾರ್ಟಿಯ ರಹಸ್ಯಗಳೆಲ್ಲವನ್ನೂ ಅರಿತ ಹಳೆಯ ಕಾಮ್ರೇಡ್. "

" ಕಾಮ್ರೇಡ್ ! ನೀವು ದ್ರೋಹಿಗಳು ( Traitor ) "

" ನಿಜ – ನಿಮಗೆ ನಾನುದ್ರೋಹಿ. ಆದರೆ ನೀವು ದೇಶವನ್ನೇ ರಷ್ಯಾಕ್ಕೆ

ಮಾರಲು ಸಿದ್ಧವಾಗಿರುವ ದ್ರೋಹಿಗಳಲ್ಲವೇನು ? ಪಾರ್ಟಿಯ ನಿರೂಪಗಳು ಮುಂಬಯಿಯಿಂದ ಹೊರಡುತ್ತಿವೆಯೋ ಮಾಸ್ಕೋಇಂದ ಹೊರಡುತ್ತಿವೆಯೋ? ರಷ್ಯನ್ ಎಂಬಾಸಿಯಿಂದ ಎಷ್ಟು ಹಣ ತೆಗೆದುಕೊಂಡಿರುವಿರಿ. ತಿಂಗಳಿಗೊಮ್ಮೆ ನೀವು ಮಾಸ್ಕೋ ಯಾತ್ರೆ ಮಾಡಿ ಬರುತ್ತೀರಲ್ಲಾ, ನಿಮಗೆ ಹಣ ಒದಗಿಸು ವವರು ಯಾರು ? ಪಾರ್ಟಿಯ ಸ್ತ್ರೀ ಕಾಮ್ರೇಡಗಳ ನೀತಿಯ ಮಟ್ಟವೆಂಥದು ? ಎಲ್ಲಕ್ಕೂ ಹೆಚ್ಚಾಗಿ ನಿಮ್ಮ ಪಾರ್ಟಿಯ ಆಧಾರ ಶಕ್ತಿ ತಾಜ್ ಜರೀವಾಲಾ ಅಲ್ಲ ವೇನು ? ವಿಸ್ಕಿ, ಬ್ರ್ಯಾಂದಿಯನ್ನು ಕಳ್ಳಸಂತೆಯಲ್ಲಿ ಮಾರಾಟ ಮಾಡುವ ಜರೀವಾಲನ ಮಗಳು ನಿಮ್ಮ ಪಾರ್ಟಿಯ ಪೋಷಿಕೆ. ನಮ್ಮ ಮೇಲೆ ಅಪ ಪ್ರಚಾರ ಆರಂಭ ಮಾಡಿದ ದಿನವೇ ನಾವು ಈ ವಿಷಯಗಳನ್ನು ಹೊರಗೆ ಹಾಕು ತ್ತೇವೆ. "

"ಬೆದರಿಸುತ್ತಿರುವಿರಲ್ಲಾ ಕಾಮ್ರೇಡ್."

"ಬೆದರಿಸುತ್ತಿಲ್ಲ ಕಾಮ್ರೇಡ್ ಸಹಸ್ರಬುದ್ಧೆ – ಸತ್ಯಕ್ಕಾಗಿ ಹೋರಾ ಡುತ್ತಿದ್ದೇನೆ. ಗೆಳೆಯ ಶ್ರೀಕಂಠನ ಮೇಲಾಗಲಿ, ನಮ್ಮ ಮೇಲಾಗಲಿ ನೀವು ಅಪಪ್ರಚಾರ ಆರಂಭಮಾಡಿದ ದಿನ ನಿಮ್ಮ, ನಿಮ್ಮ ಪಾರ್ಟಿಯ ರಹಸ್ಯಗಳೆಲ್ಲ ವನ್ನೂ ಬಯಲಿಗೆಳೆಯುತ್ತೇನೆ. ಆ ಕೆಲಸಕ್ಕೆ ಕೈ ಹಾಕುವುದಿಲ್ಲವೆಂದು ನೀವು ನನಗೆ ಭರವಸೆಕೊಡಬೇಕು - ಶ್ರೀಕಂಠನ ಮೇಲೆ ಆರಂಭಿಸಿರುವ ಅಪಪ್ರಚಾರ ಕೂಡಲೆ ನಿಲ್ಲಿಸಬೇಕು."

"ನಮ್ಮ ನಿರ್ಣಯ ನಾಳೆ ಹೇಳುತ್ತೇವೆ ಕಾಮ್ರೇಡ್."

"ಸಾಧ್ಯವಿಲ್ಲ – ಈಗಲೇ ತಿಳಿಸಬೇಕು ನಿಮ್ಮ ಜಾಡು ನೀವು ಹಿಡಿ ಯುವುದಾದರೆ ನನ್ನ ಮಾರ್ಗ ನಾನು ಹುಡುಕಿಕೊಳ್ಳಬೇಕಾಗುತ್ತದೆ."

ಫಡ್ಕೆ ಒಂದು ಚೀಟಿಯ ಮೇಲೆ ಗುರುತು ಹಾಕಿ ಸಹಸ್ರಬುದ್ಧೆ ಕೈಯ ಲ್ಲಿಟ್ಟ. ಸಹಸ್ರಬುದ್ಧೆ ಅದನ್ನು ನೋಡಿಕೊಂಡು ನಸುನಗುತ್ತಾ

"ನಿಮ್ಮಂಥ ಉತ್ತಮ ಪಾರ್ಟಿಭಕ್ತರನ್ನು ನಾವು ಕಳೆದುಕೊಳ್ಳಲು ಸಿದ್ಧ ವಾಗಿಲ್ಲ ಕಾಮ್ರೇಡ್ ರಾಜ್."

"ಸಹಸ್ರಬುದ್ಧೆ, ನೀವು ಒಪ್ಪಲಿ ಬಿಡಲಿ ನಾನೂ ಪ್ರಭಾದೇವಿ ಪಾರ್ಟಿಗೆ ರಾಜೀನಾಮೆ ಕೊಡಲು ಸಿದ್ಧರಾಗಿರುವೆವು. ಈ ವಿಷಯ ನಾಳೆ ಪತ್ರಿಕೆಗಳಲ್ಲಿ ಪ್ರಕಟವಾಗುತ್ತದೆ. ನೀವು ಯಾವ ದಯಾ ದಾಕ್ಷಿಣ್ಯವನ್ನೂ ತೋರಿಸುವವ

ರಲ್ಲವಾದ್ದರಿಂದ ನಿಮಗೆ ದಯಾ ದಾಕ್ಷಿಣ್ಯ ತೋರಿಸಬೇಕಾದ ಅಗತ್ಯವಿಲ್ಲ."

ಎಂದು ಹೇಳಿದವನೇ ಆ ಸ್ಥಳ ಬಿಟ್ಟುಬಿಟ್ಟ. ಪ್ರಭಾದೇವಿ ಅವನನ್ನು ಹಿಂಬಾಲಿಸಿದಳು.

'ಪೀಪಲ್ಸ್ ವಾಯ್ಸ್' ಅಂದಿನಿಂದ ಶ್ರೀಕಂಠ, ಪ್ರಭಾದೇವಿ, ರಾಜು ಅವರ ಹೆಸರೆತ್ತುವುದನ್ನು ಬಿಟ್ಟುಬಿಟ್ಟಿತು. ಆದರೆ ಗುಪ್ತವಾಗಿ ತನ್ನ ಅಪ ಪ್ರಚಾರ ಕ್ರಿಯೆಯನ್ನು ಮುಂದುವರಿಸಿತು.

## ೧೬

ಮೂರು ತಿಂಗಳು ಉರುಳಿದವು. ಶ್ರೀಕಂಠನ ಸುದ್ದಿ ಸಮಾಚಾರವಿಲ್ಲ. ಪ್ರಭಾದೇವಿ, ರಾಜೂ ಅವನನ್ನು ಹುಡುಕಿ ಹುಡುಕಿ ಬಸವಳಿದು ಬೆಂಡಾಗಿದ್ದರು. ಆದರೂ ಆಸೆ ಬಿಡಲೊಲ್ಲದು.

ಒಂದು ದಿನ ಪ್ರಭಾದೇವಿ ಬಂದಾಗ ರಾಜೂ ಕೇಳಿದ

"ಇಂದಿನ ಪತ್ರಿಕೆಗಳನ್ನು ನೋಡಿದೆಯಾ ಪ್ರಭಾ."

"ಪತ್ರಿಕೆಗಳನ್ನೇಕೆ ನೋಡಲಿ."

"ಇಂದು ಒಂದು ಸ್ವಾರಸ್ಯವಾದ ವಿಷಯ ಪ್ರಕಟವಾಗಿದೆ."

"ಏನದು ರಾಜ್?"

"ಸಂಜೆಗೆ ಸರ್ ಜರೀವಾಲಾ ಅವರ ಶಿಲ್ಪಮೂರ್ತಿಯ ಅನಾವರಣ. ಶ್ರೀ. ಮೊರಾರ್ಜಿ ದೇಸಾಯರ ಅಮೃತ ಹಸ್ತದಿಂದ."

"ಆ ಸುದ್ದಿಯಿಂದ ನಿನಗೂ ನನಗೂ ಆಗಬೇಕಾದುದೇನು ರಾಜ್."

"ಇದೆ – ಸಂಜೆಗೆ ನಾವೂ ಹೋಗೋಣವೇ?"

"ಹಾ! ನಾವು ಹೋಗುವುದೇ?"

"ಹೌದು ಪ್ರಭಾ. ಹೋಗುವುದೊಳ್ಳೆಯದು. ಸರ್ ಜರೀವಾಲರ ಮೂರ್ತಿ ಕಡೆದ ಶಿಲ್ಪಿ ಯಾರು ಬಲ್ಲೆಯಷ್ಟೇ."

"ಶ್ರೀಕಾಂತ್"

"ಅಲ್ಲಿಗೆ ಶ್ರೀಕಂಠ ಏಕೆ ಬಂದಿರಬಾರದು."

"ಇನ್ನೂ ಶ್ರೀಕಾಂತರು ಆ ರಕ್ಕಸಿಯ ಮುಖ ನೋಡಬಯಸುವರೇ?"

" ಇಲ್ಲ – ಆದರೆ ಶಿಲ್ಪಿ ತನ್ನ ಕೃತಿ ನೋಡಲು ಬರಬಹುದು. ಎಲ್ಲಿಯೋ ದೂರದಲ್ಲಿ ನಿಂತಿದ್ದು ನೋಡಿಕೊಂಡು ಹೋಗಬಹುದು. "

ರಾಜೂ ಮಾತು ಪ್ರಭಾದೇವಿಯ ಮೋಡಾಚ್ಛಾದಿತ ಮನಸ್ಸಿನ ಮೇಲೆ ಕಿರಣದಂತೆ ಝುಳಪಿಸಿತು.

" ಹೋಗೋಣ ರಾಜ್ - ಖಂಡಿತ ಹೋಗೋಣ. ತಾಜ್ ನಮ್ಮನ್ನು ಹೊರಗೆ ಹಾಕಿಸಿದರೂ ಚಿಂತೆಯಿಲ್ಲ. "

" ಅವಳ ಕಣ್ಣಿಗೆ ಬೀಳುವುದೇ ಬೇಡ - ದೂರದಲ್ಲಿ ನಿಂತಿದ್ದು ನಮ್ಮ ಕೆಲಸ ನಾವು ಮಾಡಿಕೊಂಡರಾಯಿತು. "

ಸಂಜೆಗೆ ಮಾಲಾಡ್ ಹೊಸ ಜೀವ ತಳೆದಿತ್ತು. ರಸ್ತೆಯುದ್ದಕ್ಕೂ ಬಾವುಟಗಳು, ತೋರಣಗಳು. ಮಂತ್ರಿಗಳಿಗೆ ಗೌರವ ಸಲ್ಲಿಸಲು ಪೋಲೀಸ ಪಡೆ. ' ಪತಿತಾಶ್ರಮ 'ದ ಮುಂದೆ ವಿಶಾಲವಾದ ಚಪ್ಪರ. ಅವಕುಂಠನ ಧರಿಸಿದ ಶಿಲ್ಪ, ವೇದಿಕೆಯ ಪಕ್ಕದಲ್ಲಿ ನಿಂತಿತ್ತು.

ಮಂತ್ರಿಗಳು ಆಗಮಿಸಿದ ಕೂಡಲೆ ಕಾರ್ಯಕ್ರಮ ಆರಂಭವಾಯಿತು. ತಾಜ್ ಬಿನ್ನಪತ್ರಳೆ ಓದಿ, ರಜತರಂಡಪಲ್ಲಿಟ್ಟು ಮಂತ್ರಿಗಳಿಗರ್ಪಿಸಿದಳು. ಮಂತ್ರಿಗಳು ಶಿಲ್ಪದ ಅನಾವರಣ ಮಾಡಿ ಜರೀವಾಲರ ಗುಣಗಾನ ಆರಂಭಿಸಿದರು.

ದೂರದಲ್ಲಿ ನಿಂತಿದ್ದ ಪ್ರಭಾದೇವಿ, ರಾಜ್ ಆಮಂತ್ರಿತರ ಮುಖಗಳನ್ನು ನೋಡಿದರು. ಎಲ್ಲರೂ ಇದ್ದರು. ಊರಿನ ಪ್ರಮುಖ ವರ್ತಕರು, ಶ್ರೀಮಂತರು, ಕಾಳಸಂತೆಕೋರರು, ಕಲಾವಿದರು ಕೆಲವು ಪಾರ್ಟಿಯ ಮುಖಂಡರು ಪೋಲಿಟ್ ಬ್ಯೂರೋ ಸದಸ್ಯರು ಎಲ್ಲರೂ ಇದ್ದರು — ಶ್ರೀಕಂಠ ಮಾತ್ರ ಕಾಣಬರಲಿಲ್ಲ.

ಶಿಲ್ಪಿಯ ಹೆಸರು ಒಮ್ಮೆಯೂ ಯಾರ ಬಾಯಲ್ಲಿಯೂ ಬರಲಿಲ್ಲ. ಎಲ್ಲರೂ ತಾಜಳನ್ನು ಹೊಗಳುವವರೇ. ಜರೀವಾಲರ ಔದಾರ್ಯವನ್ನು ಶ್ಲಾಘಿಸುವವರೇ!- ಆದರೆ ಶಿಲ್ಪಿ! – ಆ ಬಡಕೂಲಿಯ ನೆನಪಿನಿಂದ ಯಾರಿಗೇನು ಪ್ರಯೋಜನ!

ಮಂತ್ರಿಗಳು ಭಾಷಣ ಆರಂಭಿಸಿದ ಕೂಡಲೆ ರಾಜ್, ಪ್ರಭಾ ಇಬ್ಬರೂ ಮೆಲ್ಲನೆ ಆ ಸ್ಥಳದಿಂದ ಕದಲಿದರು.

" ಇಲ್ಲಿಯೂ ಇಲ್ಲ ರಾಜ್ " ಎಂದಳು ಪ್ರಭಾ.

" ಸಿಕ್ಕುತ್ತಾನೆ - ಚಿಂತೆ ಮಾಡಬೇಡ ಪ್ರಭಾ "

ಎಂದು ರಾಜ ಸಮಾಧಾನ ಹೇಳಿದ.

' ಪ್ರಭೆಗೆ ನಾನು ಸುಳ್ಳು ಹೇಳುತ್ತಿಲ್ಲವೇ ? ಇಷ್ಟು ದಿನವಾದರೂ ಶ್ರೀಕಂಠ ಸಿಕ್ಕಿಲ್ಲ - ಅವನು ನಿಜವಾಗಿ ಜೀವಂತನಿರುವನೇ ? - ಜೀವಂತನಾಗಿದ್ದರೆ ನಮ್ಮನ್ನು ಹುಡುಕಿಕೊಂಡು ಬರುತ್ತಿರಲಿಲ್ಲವೇ ?' ಎಂದು ವಿಚಾರ ಮಾಡತೊಡಗಿದ.

ದಿನಗಳು ಮುಂದೆ ಹೋಗುತ್ತಿದ್ದವು. ಅದೇ ಸೂರ್ಯ - ಅದೇ ಚಂದ್ರ - ಅದೇ ಟ್ರಾಮು, ಬಸ್, ರೈಲು - ಅದೇ ಜೀವನ - ಎಲ್ಲವೂ ಮುಂದೆ ಹೋಗುತ್ತಿದ್ದವು. ಪ್ರಭಾ, ರಾಜೂ ಇಬ್ಬರ ಜೀವನ ರಥ ಕಡಾಣಿ ಕಳೆದುಕೊಂಡು ನಿಂತಲ್ಲಿಯೇ ನಿಂತಿತ್ತು.

ಪ್ರಭಾದೇವಿ ದಿನದಿನಕ್ಕೆ ನವೆಯುತ್ತಿದ್ದಳು. ನವಕುಸುಮದಂತಿದ್ದ ಅವಳ ಮುಖ, ನಲ್ಲೆ ಮುಂಜಾನೆ ಬಿಸುಡುವ ಹೂಪಿನ ದಂಡೆಯಂತಾಗಿತ್ತು. ಚಿತ್ತದಲ್ಲಿ ಉಜ್ವಲಿತವಾಗಿದ್ದ ದುಃಖಾಗ್ನಿ ಅವಳ ಇಡಿಯ ದೇಹವನ್ನು ಕ್ರಮಕ್ರಮೇಣ ದಹಿಸುತ್ತಿತ್ತು.

" ಹೀಗೆ ನೀನು ಕೊರಗಿದರೆ ಹೆಚ್ಚುದಿನ ಉಳಿಯುವುದಿಲ್ಲ ಪ್ರಭಾ. "

" ಹೋಗಲಿ ಬಿಡು ರಾಜ್ — ನಾನು ಯಾರಿಗಾಗಿ ಬದುಕಬೇಕಾಗಿದೆ. ಯಾವ ಸಂತೋಷ ಅನುಭವಿಸುವುದಕ್ಕಾಗಿ ನಾನು ಜೀವ ಧರಿಸಿರಬೇಕಾಗಿದೆ."

" ಯಾರಿಗಾಗಿಯೂ ಬದುಕಿರಬೇಕಾಗಿಲ್ಲವೇ ? ನನಗಾಗಿ ! "

" ನೀನು ನನ್ನ ಸೋದರ - ಸಹಯೋಧ - ನೀನೂ ನನ್ನಂತೆ ಕೊರಗುತ್ತಿರುವೆ ? "

" ನಾಳೆ ನಿನ್ನ ಶ್ರೀಕಾಂತ್ ಬಂದು ' ರಾಜೂ, ನನ್ನ ಪ್ರಭಾಯೆಲ್ಲಿ ತೋರಿಸು ' ಎಂದು ಕೇಳಿದರೆ ನಾನೇನು ಉತ್ತರ ಕೊಡಲಿ ? "

" ನನ್ನ ಶ್ರೀಕಾಂತ್ ನಮ್ಮಿಬ್ಬರನ್ನೂ ಮರೆತಿದ್ದಾರೆ ರಾಜೂ. "

" ಇಲ್ಲ ಪ್ರಭಾ - ಮರೆತಿದ್ದ - ಈಗ ಮರೆತಿಲ್ಲ. ನಾವು ಹೇಗೆ ಅವನನ್ನೇ ಧ್ಯಾನಿಸುತ್ತಿರುವೆವೋ ಅವನೂ ಹಾಗೇ ನಮ್ಮನ್ನೇ ಧ್ಯಾನಿಸುತ್ತಿದ್ದಾನೆ."

" ರಾಜ್ - ನನ್ನ ಹೃದಯದಲ್ಲಿ ನೀನು ಎಷ್ಟೋ ಧೈರ್ಯ ತುಂಬುತ್ತಿರುವೆ. ಆದರೂ ಧೈರ್ಯವಾಗಲೊಲ್ಲದು. "

" ಧೈರ್ಯ, ಸಮಾಧಾನ ಎರಡನ್ನೂ ನೀನು ತಂದುಕೊಳ್ಳಬೇಕು ಪ್ರಭಾ - ನನಗಾಗಿ, ಶ್ರೀಕಂಠನಿಗಾಗಿ. "

ಪ್ರಭಾ ರಾಜುವಿನ ತೊಡೆಯ ಮೇಲೆ ಮುಖವಿಟ್ಟು ಮಕ್ಕಳಂತೆ ಅತ್ತು ಬಿಟ್ಟಳು.

ಕಾಲಚಕ್ರ ಉರುಳುತ್ತಲೇ ಇತ್ತು.

ಭಾದ್ರಪದ ಮಾಸ. ಊರಿನಲ್ಲಿ ಎಲ್ಲೆಲ್ಲಿಯೂ ಉತ್ಸಾಹ. ಸಕಲ ಹಿಂದು ಗಳಿಗೂ ಆರಾಧ್ಯ ದೇವನಾದ ಗಣಪತಿಯ ಉತ್ಸವ. ಮುಂಬಯಿ ಜನ ಗಣಪತಿಯ ವಿಶಿಷ್ಟ ಭಕ್ತರು. ನೂರಾರು ಕಡೆ ಗಜಾನನೋತ್ಸವದ ಆಚರಣೆ. ಎಲ್ಲೆಲ್ಲಿಯೂ ಉತ್ತಮೋತ್ತಮ ನಾಯಕರ ಬೈಠಕ್ಕುಗಳು.

ಎಲ್ಲಿ ನೋಡಿದರೂ ಗಣೇಶನ ಮೃಣ್ಮೂರ್ತಿ. ಬಾಲಗಣಪತಿ - ನೃತ್ಯ ಗಣಪತಿ – ವಿದ್ಯಾಗಣಪತಿಯರಲ್ಲದೆ ಸ್ಕೌಟ್ ಗಣಪತಿ - ಕಾಂಗ್ರೆಸ್ ಗಣಪತಿ- ಹಿಂದೂ ಮಹಾಸಭಾ ಗಣಪತಿ - ಐ. ಎಸ್. ಎ ಗಣಪತಿ - ಬುಷ್ ಷರ್ಟ ಗಣಪತಿಗಳೂ ಅಂಗಡಿಗಳಲ್ಲಿ, ಮನೆಗಳಲ್ಲಿ ಮೆರೆದಾಡುತ್ತಿದ್ದರು.

ಹಬ್ಬ ಸಮೀಪಿಸುತ್ತಿದ್ದಂತೆ ಒಂದು ದಿನ ಪ್ರಭಾ ಬಂದು ಬಣ್ಣವಿಲ್ಲದ ಗಣಪತಿಯನ್ನು ಹೊತ್ತು ತಂದು ರಾಜೂಗೆ ತೋರಿಸಿದಳು. ರಾಜೂ ನಗುತ್ತಾ

" ಗಣಪತಿಯ ಹುಚ್ಚು ನಿನಗೂ ಹಿಡಿದಿರುವಹಾಗೆ ಕಾಣುತ್ತದೆ" ಎಂದ.

" ಈ ಗಣಪತಿಯನ್ನು ಸ್ವಲ್ಪ ಗಮನವಿಟ್ಟು ನೋಡು ರಾಜ್ "

ರಾಜೂ ಅದನ್ನು ಪರೀಕ್ಷಿಸಿ ನೋಡಿ

" ಇದು ಬಜಾರಿ ವಸ್ತುವಿದ್ದ ಹಾಗಿಲ್ಲ. ಎಲ್ಲಿ ಸಿಕ್ಕಿತು. "

" ನಮ್ಮ ಮನೆಗೆ ಕೋಳಿವಾಡದ ಒಬ್ಬ ಹೆಣ್ಣುಮಗಳು ಮೀನಿನ ವರ್ತನೆ ಮಾಡಿಕೊಂಡಿದ್ದಾಳೆ. ಅವಳು ಇದನ್ನು ಮಾರಾಟಕ್ಕೆ ತಂದಳು. ಒಂದು ರೂಪಾಯಿ ಕೊಟ್ಟು ಕೊಂಡು ' ರಂಭಾ, ಇದನ್ನು ಯಾರು ಮಾಡಿ ದರು ' – ಎಂದು ಕೇಳಿದೆ. ' ನಮ್ಮವರೇ ಒಬ್ಬರು ಮಾಡುತ್ತಾರೆ ಬಾಯಿ ' ಎಂದಳು. ಅವರು ಬರೀ ಗಣಪತಿ ಮಾಡುತ್ತಾರೋ ಬೇರೆ ಏನಾದರೂ ಮೂರ್ತಿ ಮಾಡುತ್ತಾರೊ ' ಎಂದು ಕೇಳಿದೆ. ' ಅದು ನನಗೆ ಗೊತ್ತಿಲ್ಲ ಬಾಯಿ. ಬೇಕಾದರೆ ವಿಚಾರಿಸಿ ಹೇಳುತ್ತೇನೆ. ' ಹಾಗೆ ಮಾಡು. ಅವರು ಮಾಡುವುದಿದ್ದರೆ ನಾಳೆ ನನಗೊಂದು ಗಾಂಧೀಜಿಯವರ ಮೂರ್ತಿ ಮಾಡಿಸಿ

ತಂದುಕೊಡು. ನಿನಗೆ ಐದು ರೂಪಾಯಿ ಕೊಡುತ್ತೇನೆ' ಎಂದೆ. ಅವಳು ಒಪ್ಪಿ 'ಹಾಗೇ ಆಗಲಿ ಬಾಯಿ' ಎಂದಿದ್ದಾಳೆ."

"ನಮ್ಮ ದೇಶದಲ್ಲಿ ಗಣಪತಿ, ಬಸವ, ಕೃಷ್ಣ ಮಾಡುವ ಜನಪದ ಶಿಲ್ಪಿಗಳಿಗೇನೂ ಕ್ಷಾಮವಿಲ್ಲ ಪ್ರಭಾ."

"ನಾಳೆ ರಂಭಾ ಗಾಂಧೀಜಿಯವರ ಮೂರ್ತಿ ತಂದು ಕೊಟ್ಟರೆ ನನ್ನ ಸಮಸ್ಯೆ ಬಗೆ ಹರಿಯುತ್ತದೆ."

ಅಪಾರ ಕನಿಕರದಿಂದ 'ಅಯ್ಯೋ ಮರುಳೇ' ಎಂದು ರಾಜೂ ಉದ್ಗಾರ ತೆಗೆದ.

ಮಾರನೆಯ ಬೆಳಿಗ್ಗೆ ರಾಜೂ ಎದ್ದವನೇ ಪ್ರಭಾದೇವಿಯನ್ನು ನಿರೀಕ್ಷಿಸುತ್ತ ಕುಳಿತ. ಅವಳ ಊಹೆಗೆ ಸಾಕಷ್ಟು ಆಧಾರವಿಲ್ಲದಿದ್ದರೂ ಅದು ಕೇವಲ ನಿರಾಧಾರವಾದುದಾಗಿರಲಿಲ್ಲ. ಗಣಪತಿಯ ಕಿರೀಟ, ಭಂಗಿ, ಹಸ್ತ ಲಕ್ಷಣಗಳು ನುರಿತ ಶಿಲ್ಪಿಯು ಕೈವಾಡವನ್ನು ತೋರಿಸುತ್ತಿತ್ತು.

ಒಂಭತ್ತು ಗಂಟೆಗೆ ಪ್ರಭಾದೇವಿ ಒಬ್ಬ ಹೆಣ್ಣುಮಗಳ ಜತೆಯಲ್ಲಿ ಟ್ಯಾಕ್ಸಿಯಲ್ಲಿ ಬಂದಿಳಿದಳು. ಅವಳ ಉತ್ಸಾಹ, ಉದ್ವೇಗಕ್ಕೆ ಕೊನೆ ಮೊದಲಿರಲಿಲ್ಲ. ರಂಭೆಯನ್ನು ಕೈಹಿಡಿದೆಳೆದುಕೊಂಡು ಬಂದು ರಾಜೂಗೆ ಪರಿಚಯ ಮಾಡಿ ಕೊಟ್ಟು, ಅವನ ಕೈಯಲ್ಲಿ ಗಾಂಧೀಜಿಯ ಮೂರ್ತಿಯನ್ನಿತ್ತಳು.

ರಾಜೂ ಆ ಮೃಣ್ಮೂರ್ತಿ ನೋಡಿ ಅವಾಕ್ಕಾದ.

"ಪ್ರಭಾ........"

"ರಾಜ್........"

"ಇದು ಅವನ ಕೃತಿ ಪ್ರಭಾ – ಏನೂ ಸಂದೇಹವಿಲ್ಲ."

ಪ್ರಭಾ ಸಂತೋಷದ ಭರದಲ್ಲಿ ರಂಭೆಯನ್ನಪ್ಪಿ ಮುದ್ದಿಟ್ಟು

"ಬಾಯಿ – ನಿನ್ನ ಶಿಲ್ಪಿಯನ್ನು ನಮಗೆ ತೋರಿಸುವೆಯಾ ?" ಎಂದು ಕೇಳಿದಳು.

"ಇಲ್ಲ ಬಾಯಿ – ತಮ್ಮ ವಿಷಯ ಯಾರಲ್ಲಿಯೂ ಹೇಳಬಾರದೆಂದು ಅವರು ಕಟ್ಟಾಜ್ಞೆ ಮಾಡಿದ್ದಾರೆ."

ರಾಜೂ ಮಧ್ಯೆ ಬಾಯಿ ಹಾಕಿ

"ಹಾಗನ್ನಬೇಡ - ರಂಭಾದೇವಿ, ಪ್ರಭಾದೇವಿಯ ಪ್ರಾಣವೇ ನಿನ್ನ

ಕೈಯಲ್ಲಿದೆ. ನೀನು ಅವಳ 'ಪ್ರಾರ್ಥನೆ' ನಿರಾಕರಿಸಿದರೆ ದುರಂತ ಸಂಭವಿಸ ಬಹುದು. "

ಪ್ರಭಾ ಕೈಜೋಡಿಸಿಕೊಂಡು

" ರಂಭಾ, ದಯೆಯಿಟ್ಟು ಈ ಉಪಕಾರ ಮಾಡು " ಎಂದಳು.

ರಂಭಾ ಮಂಜಿನಂತೆ ಕರಗಿ

" ಬಾ ಬಾಯಿ, ಈಗಲೇ ಕರೆದುಕೊಂಡು ಹೋಗುತ್ತೇನೆ. ಎಷ್ಟೋ ವರ್ಷಗಳಿಂದ ನೀವು ನನಗೆ ಅನ್ನವಿಟ್ಟು ಕಾಪಾಡಿದ್ದೀರಿ. ನೀವು ಕೈಜೋಡಿಸಿ ನನ್ನನ್ನು ಕೇಳಿಕೊಳ್ಳಬೇಕೇ ! " ಎಂದಳು.

ಅದೇ ಟ್ಯಾಕ್ಸಿ, ರಂಭಾ, ಪ್ರಭಾ, ರಾಜು ಅವರನ್ನು ಕೋಳಿವಾಡಕ್ಕೆ ಕರೆದೊಯ್ಯಿತು.

ಸಮುದ್ರಕ್ಕೆದುರಾಗಿ, ಸ್ವಲ್ಪ ದೂರದಲ್ಲಿ ಮೀನುಗಾರರ ಗುಡಿಸಲುಗಳು. ರಂಭೆಯ ಗುಡಿಸಲೂ ಆ ಸಾಲಿನಲ್ಲಿತ್ತು. ರಂಭಾ ಅತಿಥಿಗಳನ್ನು ಕರೆದೊಯ್ದು ತನ್ನ ಗುಡಿಸಲಿನಲ್ಲಿ ಕುಳ್ಳಿರಿಸಿದಳು. ಶ್ರೀಕಂಠ ಇರುವ ಸೂಚನೆಯೇ ಕಂಡು ಬರಲಿಲ್ಲ. ಈ ಪ್ರಯತ್ನವೂ ಮೃಗಜಲಾನ್ವೇಷಣೆಯಾಗುವುದೇನೋ ಎಂದು ಪ್ರಭಾದೇವಿ ಹೆದರಿದಳು. ರಾಜೂ ಸುತ್ತ ನೋಡಿ

" ಶಿಲ್ಪಿ ಎಲ್ಲಿ ರಂಭಾ " ಎಂದು ಕೇಳಿದ.

" ಅವರು ಇನ್ನೊಂದು ಗುಡಿಸಲಿನಲ್ಲಿದ್ದಾರೆ. "

" ಅಲ್ಲಿಗೇ ಕರೆದುಕೊಂಡು ಹೋಗು. "

" ಸ್ವಲ್ಪ ತಡೆಯಿರಿ "

ಎಂದು ಹೇಳಿ ರಂಭಾ ಹೋಗಿ ತನ್ನ ಪತಿ ಚಂದ್ರಾಚೂಡನನ್ನು ಕರೆದುಕೊಂಡು ಬಂದಳು. ಚಂದ್ರಾಚೂಡ ಅತಿಥಿಗಳಿಗೆ ನಮಸ್ಕರಿಸಿ ನಿಂತುಕೊಂಡ. ಶ್ರೀಕಂಠನಿಗೂ ತಮಗೂ ಇದ್ದ ಸಂಬಂಧ ರಾಜೂ ವಿವರಿಸಿದುದನ್ನು ಕೇಳಿ ಚಂದ್ರಾಚೂಡ

" ಅವರು ತುಂಬ ದುಃಖದಲ್ಲಿದ್ದಾರೆ. ಯಾರನ್ನೂ ನೋಡಲು ಬಯಸುವುದಿಲ್ಲ ತಾವು ಇಲ್ಲಿರುವ ವಿಷಯ ಯಾರಿಗೂ ತಿಳಿಸುವುದಿಲ್ಲವೆಂದು ನಾವು ಭರವಸೆಯಿತ್ತ ಮೇಲೆ ಅವರು ನಮ್ಮಲ್ಲಿ ಬಂದು ನಿಂತರು. "

" ನಿಮಗೆ ಅವರೆಲ್ಲಿ ಸಿಕ್ಕಿದರು ಚಂದ್ರಾಚೂಡ. "

" ಒಂದು ದಿನ ನಾನು ಎಡಗಡೆ ಕಾಣುವ ತೀರದಲ್ಲಿ ಬಲೆ ಬೀಸಿಕೊಂಡು ಕುಳಿತಿದ್ದೆ. ರಂಭಾ ಗಾಬರಿಯಾಗಿ ಓಡಿ ಬಂದು ನನ್ನನ್ನು ಕರೆದಳು. ನಾನು ಅವಳೊಂದಿಗೆ ಈ ತೀರಕ್ಕೆ ಬಂದು ನೋಡುವಲ್ಲಿ ಯಾರೋ ಒಬ್ಬರು ಜ್ಞಾನ ತಪ್ಪಿ ಬಿದ್ದು ಬಿಟ್ಟಿದ್ದರು. ಅವರನ್ನು ಇಬ್ಬರೂ ಮನೆಗೆ ಹೊತ್ತು ತಂದು, ಆರೈಕೆ ಮಾಡಿದೆವು. ಹದಿನೈದು ದಿವಸಗಳು ಅವರು ಹಾಸಿಗೆ ಹಿಡಿದು ಮಲಗಿದ್ದರು."

" ಜ್ಞಾನ ತಪ್ಪುವುದಕ್ಕೆ ಏನಾಯಿತು ? "

" ಅವರು ಸಮುದ್ರತೀರಕ್ಕೆ ಬಂದು ಕುಳಿತುದನ್ನು ರಂಭಾ ನೋಡಿದಳು. ಯಾರೊ ಏನೊ ಎಂದುಕೊಂಡು ಸುಮ್ಮನಿದ್ದಳು. ಅಲೆಗಳು ಬಂದು ಅಪ್ಪಳಿಸಿದರೂ ಆತ ಮೇಲಕ್ಕೇಳಲಿಲ್ಲ. ಆತನ ಬಟ್ಟೆಗಳೆಲ್ಲಾ ತೊಯ್ದು ಹೋಗಿದ್ದವು. ರಂಭಾ ಒಂದೆರಡು ಸಾರಿ ಎಚ್ಚರ ಕೊಟ್ಟಳು. ಅದನ್ನೂ ಆತ ಗಮನಿಸಲಿಲ್ಲ. ರಂಭಾ ಗಾಬರಿಯಾಗಿ ನನ್ನನ್ನು ಹುಡುಕಿಕೊಂಡು ಓಡಿಬಂದಳು. "

" ಒಬ್ಬ ಮಹಾಶಿಲ್ಪಿಯ ಪ್ರಾಣವನ್ನು ನೀವಿಬ್ಬರೂ ಉಳಿಸಿ ಮಹೋಪಕಾರ ಮಾಡಿರುವಿರಿ ? "

"ಇದರಲ್ಲಿ ಉಪಕಾರವೇನು ಬಂತು ? ಅವರು ಅಷ್ಟು ದೊಡ್ಡ ಶಿಲ್ಪಿಗಳೇ."

" ನಿನ್ನ ಹೆಂಡತಿ ತಂದ ಮೂರ್ತಿಗಳನ್ನು ನೀನು ನೋಡಿಲ್ಲವೇ ಚಂದ್ರಾಚೂಡ. "

" ನೋಡಿದ್ದೇನೆ. ನಾನೊಬ್ಬ ಸಾಮಾನ್ಯ ಮೀನುಗಾರ. ನನಗೆ ಶಿಲ್ಪದ ವಿಷಯವೇನು ಗೊತ್ತಾಗುತ್ತದೆ ರಾವ್‌ಸಾಹೇಬ್. ಶಿಲ್ಪಿಗಳು ತುಂಬ ಮೂರ್ತಿಗಳನ್ನು ಮಾಡಿದ್ದಾರೆ. ರಂಭೆಯುದೇ ಎಂಟು ಹತ್ತು ಮೂರ್ತಿಗಳನ್ನು ಕಡೆದಿದ್ದಾರೆ. "

" ರಂಭೆಯುದೇ ? "

" ಹೌದು. ಹದಿನೈದು ದಿವಸದ ಆರೈಕೆಯಾದ ಮೇಲೆ ಶಿಲ್ಪಿಗಳು ಎಚ್ಚೆತ್ತರು. ನಾನೂ ರಂಭಾ ಅವರ ಜತೆ ಪ್ರತಿನಿತ್ಯ ಸ್ವಲ್ಪಹೊತ್ತು ಕೂಡುತ್ತಿದ್ದೆವು. ಅದೂ ಇದೂ ಮಾತನಾಡಿ ಅವರ ಮನಸ್ಸು ಸ್ಥಿಮಿತಕ್ಕೆ ಬರುವಂತೆ ಮಾಡುತ್ತಿದ್ದೆವು. ಒಂದು ದಿನ ರಂಭೆಯನ್ನವರು ದಿಟ್ಟಿಸಿ ನೋಡಿ ನನ್ನ ಕಡೆ ತಿರುಗಿ ' ಅಣ್ಣಾಸಾಹೇಬ್, ರಂಭಾ ಸೋದರಿ ದಿನಕ್ಕೆ ಒಂದೆರಡು ಗಂಟೆ ಬಿಡುವು ಮಾಡಿಕೊಂಡು ಇಲ್ಲಿಗೆ ಬರಲು ಸಾಧ್ಯವೇ ' ಎಂದು ಕೇಳಿದರು.

" ಏಕೆ ರಾವ್‌ಸಾಹೇಬ್. "

' ಮೂರ್ತಿಗಳನ್ನು ಕಡೆಯುವ ಕಲೆ ನನಗೆ ಸ್ವಲ್ಪ ಗೊತ್ತಿದೆ. ನೀವು ನನಗಷ್ಟು ಜೇಡಿಮಣ್ಣು ಒದಗಿಸಿ ಕೊಟ್ಟರೆ ರಂಭಾತಾಯಿಯ ಕೆಲವು ಮೂರ್ತಿಗಳನ್ನು ಮಾಡಲಿಚ್ಛಿಸುತ್ತೇನೆ. '

" ನನ್ನ ಕುತೂಹಲ ಕೆರಳಿತು. ಈ ಮನುಷ್ಯ ನಿಜವಾಗಿ ಶಿಲ್ಪಿಯೋ ಅಥವಾ ರಂಭೆಯಲ್ಲಿ................ಎಂಬ ಸಂಶಯ ಹುಟ್ಟಿತು. ನಾನು ಅನುಮಾನಿಸುತ್ತಿರುವಲ್ಲಿ ಶಿಲ್ಪಿಗಳು ನನ್ನ ಕಡೆ ತಿರುಗಿ

' ಅಣ್ಣಾಸಾಹೇಬ್, ನೀವೂ ನನ್ನ ಸೋದರಿ ನನ್ನ ಪ್ರಾಣ ಉಳಿಸಿದಿರಿ. ಅಂದು ನಾನು ನಿಮ್ಮ ಕಣ್ಣಿಗೆ ಬೀಳದಿದ್ದರೆ ಮಹಾಸಾಗರದ ವಿಶಾಲಗರ್ಭದಲ್ಲಿ ನನ್ನ ದೇಹವೂ ಸೇರುತ್ತಿತ್ತು. ನನ್ನ ಜೀವ ಬದುಕಿಸಿ ನನಗೆ ಅನ್ನವಿಟ್ಟು ಕಾಪಾಡುತ್ತಿರುವ ರಂಭಾತಾಯಿಯನ್ನು ನಾನು ಕೆಟ್ಟ ದೃಷ್ಟಿಯಿಂದ ನೋಡುವೆನೇ ? '

ನನ್ನ ಮುಖಕ್ಕೆ ಆರತಿ ಎತ್ತಿದಂತಾಯಿತು. ಅವರು ಕೇಳಿದ ಜೇಡಿಮಣ್ಣು ಒದಗಿಸಿ ಕೊಟ್ಟೆ. ಪ್ರತಿನಿತ್ಯ ರಂಭೆಯನ್ನು ಎದುರಿಗೆ ಕೂಡಿಸಿಕೊಂಡು ಶಿಲ್ಪ ನಿರ್ಮಿಸತೊಡಗಿದರು. "

" ಅವು ಎಲ್ಲಿವೆ ? "

" ಅವರ ಗುಡಿಸಲಿನಲ್ಲಿವೆ. ಅವರಿಗೆ ಪ್ರತ್ಯೇಕ ಗುಡಿಸಲು ಮಾಡಿಕೊಟ್ಟೆವು. ಸೀತಾರಾಮ, ಗಣಪತಿ, ಕೃಷ್ಣ, ಶಿವ ಮೊದಲಾದ ವಿಗ್ರಹಗಳನ್ನು ಮಾಡಿ ರಂಭೆಯ ಕೈಯಲ್ಲಿಟ್ಟು ಮಾರಿಕೊಂಡು ಬರಲು ಹೇಳುತ್ತಿದ್ದರು. " ಅವಳು ತಂದ ಹಣವನ್ನು ನಮ್ಮ ಕೈಯಲ್ಲಿ ಹಾಕುತ್ತಿದ್ದರು. "

" ಅವರ ಬಳಿಗೆ ನಮ್ಮನ್ನು ಕರೆದೊಯ್ಯುವೆಯಾ ? "

" ತಮಗೆ ಯಾರ ಪರಿಚಯವನ್ನೂ ಮಾಡಿಕೊಡಕೂಡದೆಂದು ಅವರು ಕಟ್ಟಪ್ಪಣೆ ಮಾಡಿದ್ದಾರಲ್ಲಾ ರಾವ್‌ಸಾಹೇಬ್. "

" ನಿನ್ನ ಉಪಕಾರ ನಾವೆಂದಿಗೂ ಮರೆಯುವಂತಿಲ್ಲ ಚಂದ್ರಾಚೂಡ. ದಯೆಯಿಟ್ಟು ಅವರನ್ನು ನಮಗೆ ತೋರಿಸು. "

ಎಂದು ರಾಜು ಅಂಗಲಾಚಿ ಬೇಡಿಕೊಂಡ.

ಚಂದ್ರಾಚೂಡ ಧೈರ್ಯ ತಂದುಕೊಂಡು ' ಆಗಲಿ ಬನ್ನಿ ' ಎಂದು

ಹೇಳಿ, ಅತಿಥಿಗಳನ್ನು ಸಮೀಪವಲ್ಲಿದ್ದ ಶಿಲ್ಪಿಯ ಗುಡಿಸಿಲಿಗೆ ಕರೆದೊಯ್ದು.

ಶ್ರೀಕಂಠ ಹೊರಸು ಮಂಚದ ಮೇಲೆ ಕುಳಿತಿದ್ದ. ಅವನ ಮುಖ ನಿಸ್ತೇಜವಾಗಿದ್ದರೂ, ಕಣ್ಣುಗಳು ಕಾಂತಿಮಯವಾಗಿದ್ದವು. ರಾಜುವನ್ನು ಕಂಡೊಡನೆಯೇ ಶ್ರೀಕಂಠ ಎದ್ದು ಬಂದು ಅಪ್ಪಿದ.

ಗೆಳೆಯರಿಬ್ಬರೂ ಮನದಣಿಯೆ ಕಣ್ಣೀರ್ಗರೆದರು. ಪ್ರಭಾ, ರಂಭಾ, ಚಂದ್ರಾಚೂಡ ಸಾಲಭಂಜಿಕೆಗಳಂತೆ ನಿಂತುಬಿಟ್ಟರು. ಪುನರ್ಮಿಲನದ ಆವೇಗ ಕಡಿಮೆಯಾದ ಮೇಲೆ ಶ್ರೀಕಂಠ ಕ್ಷೀಣಸ್ವರದಲ್ಲಿ

" ಇಲ್ಲಿಗೂ ನನ್ನನ್ನು ಹುಡುಕಿಕೊಂಡು ಬಂದಿರಾ ? "

" ನಿನಗಾಗಿ ಮುಂಬಯಿ ಶೋಧಿಸಿ ಬಿಟ್ಟೆವು ಶ್ರೀಕಾಂತ್. "

" ರಾಜೂ, ಯಾವ ಮುಖ ಹೊತ್ತುಕೊಂಡು ನಿಮ್ಮನ್ನು ನೋಡಲಿ. ನನ್ನಂಥ ಪಾಪಿ - ಕೃತಘ್ನ, ದುರಾಚಾರಿ ಈ ಜಗತ್ತಿನಲ್ಲಿ ಬೇರೆ ಯಾರಿದ್ದಾರೆ? ಬಾಳು ಬೇಸರವಾಯಿತು - ಜೀವನ ಜಡ, ಅಸ್ಥಿರ, ಅ - ಸಹ್ಯವೆಂಬುದನ್ನು ಅನುಭವದಿಂದ ಕಂಡುಕೊಂಡೆ. ಸಮುದ್ರದಲ್ಲಿ ಅಡಗಿಕೊಳ್ಳಲು ಇತ್ತ ಬಂದೆ. ನನ್ನ ದೀದಿ ನನ್ನನ್ನು ರಕ್ಷಿಸಿದಳು. "

" ಯಾವ ತಾಯಿ ನಿನ್ನ ಕೈಹಿಡಿದು, ಶಿಲ್ಪಿಯನ್ನಾಗಿ ಮಾಡಿದಳೋ ಅವಳೇ ನಿನ್ನನ್ನು ಕಾಪಾಡಿದ್ದಾಳೆ. ಪ್ರತಿಯೊಂದು ಜೀವಿಯ ಬಾಳೂ ಘನೋ ದ್ದೇಶದಿಂದ ಕೂಡಿದೆ ಶ್ರೀಕಂಠ. ನಮ್ಮ ಕರ್ತವ್ಯ ಮುಗಿಸುವ ಮುನ್ನ ಸಾವ ನ್ನಪ್ಪುವ ಅಧಿಕಾರ ನಮಗಿಲ್ಲ. "

ಶ್ರೀಕಂಠನ ಕಣ್ಣುಗಳಿಂದ ಹನಿಗಳುದುರುತ್ತಿದ್ದವು. ಪ್ರಭಾದೇವಿಯ ಕಡೆ ತಿರುಗಿ

" ದೇವಿ - ನಿನಗೆ ನಾನೆಷ್ಟು ಅನ್ಯಾಯ ಮಾಡಿದೆ ? "

ಪ್ರಭಾ ಅವನ ಪಕ್ಕದಲ್ಲಿ ಕುಳಿತು ತಲೆ ನೇವರಿಸಿದಳು. ದೈವಕಾರುಣ್ಯದ ಪೀಠದಂತಿದ್ದ ಅವಳ ತೊಡೆಯಮೇಲೆ ತಲೆಯಿಟ್ಟು ದುಃಖ ತೋಡಿಕೊಂಡಳು.

" ಶ್ರೀಕಂಠ, ನಿನ್ನ ಕಲೆ ನಿನ್ನನ್ನು ಬದುಕಿಸಿತು - ನೀನು ಪ್ರಭಾದೇವಿ ಯನ್ನು ಬದುಕಿಸಬೇಕು. "

" ಕಲೆ ಎಲ್ಲರನ್ನೂ ಬದುಕಿಸುತ್ತದೆ ರಾಜೂ – ಇಲ್ಲಿ ನೋಡು, ನನ್ನ ಈಚಿನ ಕೃತಿಗಳನ್ನು "

ಎಂದು ತಾನು ಜೇಡಿಮಣ್ಣಿನಲ್ಲಿ ಯಾವ ಸಾಧನವೂ ಇಲ್ಲದೆ ಸೃಷ್ಟಿಸಿದ್ದ ಶಿಲ್ಪಗಳನ್ನು ತೋರಿಸುತ್ತಾ

" ಪ್ರಕೃತಿ ನಿರಾಭರಣ ಸುಂದರಿಯೆಂಬುದನ್ನು ಈ ಶಿಲ್ಪಗಳಲ್ಲಿ ತೋರಿಸಿ ದ್ದೇನೆ. ಮೀನು ಮಾರುವ ಕಾಯಕ ಮಾಡುವ ರಂಭಾ ಒಂದು ದೃಷ್ಟಿಯಲ್ಲಿ ಕರ್ಮಯೋಗಿಯೇ. ಆಕೆ ಪ್ರಾಣಭೀತಿಯನ್ನು ತೊರೆದು ಸಮುದ್ರದೊಳಗಿಳಿದು ಮೀನು ಹಿಡಿದು ತಂದು, ಮಾರಿ ತನ್ನ ಜೀವನ ಸಾಗಿಸುತ್ತಾಳೆ. ಅವಳ ಜೀವನದ ಕ್ರಮವನ್ನೇ ವಿವಿಧ ಭಾವಭಂಗಿಗಳಲ್ಲಿ ತೋರಿಸಿದ್ದೇನೆ. "

" ನಿನ್ನದು ಪಳಗಿದ ಕೈ. ನೀನು ಮುಟ್ಟಿದ್ದು ಚಿನ್ನವಾಗುತ್ತದೆ. ನಿನ್ನ ಸಮಸ್ತ ಪ್ರತಿಭೆಯನ್ನೂ ಎತ್ತಿ ತೋರುವ ನಿನ್ನ ಪರಮೋತ್ಕೃಷ್ಟ ಕೃತಿ ಇನ್ನೂ ಬರಬೇಕಾಗಿದೆ. "

" ಹೌದು - ಬರಬೇಕು. ಚಿತ್ತಭಿತ್ತಿಯ ಮೇಲೆ ಅದರ ರೂಪರೇಷೆ ಅಸ್ಪಷ್ಟವಾಗಿ ಮೂಡಿದೆ. ನಿಮ್ಮ ನಲ್ಮೆಯ ಕುಂದಣದಲ್ಲಿ ಅದು ಪುಟವಾಗುತ್ತದೆ. "

" ರೂಪರೇಷೆ ಮೂಡಿದೆಯೇ ? "

ಎಂದು ಆಶ್ಚರ್ಯದಿಂದ ಪ್ರಭಾ ಕೇಳಿದಳು.

" ನಾನು ಲೋನಾವಲಾಕ್ಕೆ ಹೋದಾಗ ಖಂಡಾಳಾ ಘಾಟಿಯನ್ನು ನೋಡಿಬಂದ ವಿಷಯ ತಿಳಿಸಿದ್ದೆನಲ್ಲಾ, ಮುಗಿಲೆತ್ತರಕ್ಕೆ ಬೆಳೆದು ನಿಂತಿದ್ದ ಆ ಪರ್ವತರಾಶಿ ನನ್ನ ಹೃದಯದಲ್ಲಿ ವಿವಿಧ ಭಾವನೆಗಳನ್ನು ಕೆರಳಿಸಿತು. ಆದರೆ ಭಾವನೆಗಳು ಸ್ಪಷ್ಟರೂಪ ತಳೆದಿರಲಿಲ್ಲ. ನನ್ನ ಬಾಳಿನ ದುರಂತದ ಅಗ್ನಿಯಲ್ಲಿ ಭಾವನೆಗಳು ಬೆಂದು ಪಕ್ವವಾಗಿವೆ. ಅವುಗಳಲ್ಲಿ ಒಂದು ಬೆಟ್ಟ ಹೆಚ್ಚು ಎತ್ತರವಾಗಿ ವಿಚಿತ್ರಾಕಾರ ತಳೆದಿದೆ. ಅದನ್ನೇ ಕುರಿತು ಆಲೋಚಿಸುತ್ತಿರುವಲ್ಲಿ, ಭಗವಂತ ತಪಸ್ಸಿಗೆ ಕುಳಿತ ಚಿತ್ರ ಮನಸ್ಸಿಗೆ ಹೊಳೆಯಿತು. ಭಗವಂತ ಗಂಗಾಧರ, ಚಂದ್ರಶೇಖರನಾಗಿದ್ದಾನೆ. ಜಟಾಮುಕುಟ ಧರಿಸಿ ಅನಂತ ತಪದಲ್ಲಿ ಲೀನನಾಗಿದ್ದಾನೆ. ಮೌನ, ಶಾಂತಿಯ ಪ್ರತೀಕವಾಗಿದ್ದಾನೆ. ಆ ಉತ್ತುಂಗ ಶಿಲೆಯನ್ನೇ ನಾನು ಉತ್ತುಂಗ ಶಿಲ್ಪವನ್ನಾಗಿ ಮಾರ್ಪಡಿಸಬಲ್ಲೆನಾದರೆ......... "

“ ಬೆಟ್ಟವನ್ನೇ ಕಡೆದು ಶಿಲ್ಪವನ್ನಾಗಿ ಮಾಡುವಿರಾ ? ”

ಎಂದು ರಂಭಾ ಬೆರಗಾಗಿ ಪ್ರಶ್ನಿಸಿದಳು.

“ ಹೌದು ತಾಯಿ. ಮೃತದೇಹಕ್ಕೆ ನಿನ್ನ ಕರುಣಾಮೃತ ಜೀವ ಕೊಡ ಲಿಲ್ಲವೇ – ಹಾಗೆ ನಿನ್ನ ಮಗ ಮೃತಶಿಲೆಗೆ ಜೀವವೆರೆದು ಭಗವಂತನ ಅನುಪಮ ಸೌಂದರ್ಯ, ಔನ್ನತ್ಯ, ಗಾಂಭೀರ್ಯಗಳನ್ನು ಕಡೆದು ಅದನ್ನು ಅಮೃತಶಿಲೆ ಮಾಡುತ್ತಾನೆ. ”

ರಂಭೆಯ ಭಕ್ತಿಭಾವ ಉತ್ಕಂಠವಾಗಿ ಹರಿಯಿತು. ಶ್ರೀಕಂಠನ ಪಾದ ಮುಟ್ಟಿ ನಮಸ್ಕರಿಸಿದಳು.

ರಾಜೂ ನಯವಾಗಿ

“ ಮಿತ್ರನನ್ನು ನಾವು ಕರೆದುಕೊಂಡು ಹೋಗಬಹುದಷ್ಟೇ ” ಎಂದು ಕೇಳಿದ.

ರಂಭಾ, ಚಂದ್ರಾಚೂಡ ಮುಖ ಚಿಕ್ಕದು ಮಾಡಿದರು. ಪ್ರಭಾದೇವಿ ರಂಭೆಯ ಬಳಿ ಬಂದು, ಅವಳನ್ನಪ್ಪಿಕೊಂಡು

“ ನಿನ್ನ ಅಣ್ಣ ಎಲ್ಲಿದ್ದರೂ ನಿನ್ನ ಮರೆಯುವುದಿಲ್ಲ ತಂಗೀ - ಸಂತೋಷವಾಗಿ ಕಳಿಸಿ ಕೊಡು. ಯಾವ ನಿನ್ನ ದಿವ್ಯ ಕಾರುಣ್ಯ ಅವರನ್ನು ಕಾಪಾಡಿತೋ ಅದೇ ಮುಂದಕ್ಕೂ ಅವರನ್ನು ರಕ್ಷಿಸಿಕೊಂಡು ಬರಲಿ ” ಎಂದಳು.

ಶ್ರೀಕಂಠ ಚಂದ್ರಾಚೂಡನ ಹೆಗಲಮೇಲೆ ಕೈಯಿಟ್ಟುಕೊಂಡು ಟ್ಯಾಕ್ಸಿಯ ಬಳಿ ನಡೆದ. ರಾಜು, ಪ್ರಭಾ, ರಂಭಾ ಅವರನ್ನನುಸರಿಸಿದರು.

ಮಧ್ಯಾಹ್ನದ ಸೂರ್ಯ ಉಜ್ವಲವಾಗಿ ಬೆಳಗುತ್ತಿದ್ದ. ಅವನ ಪ್ರಖರ ಕಾಂತಿಗೆ ಸಮುದ್ರದ ನೀರು ರಜತತೀರ್ಥವಾಗಿತ್ತು.

ದೇವಶಿಲ್ಪಿ ವಿಶ್ವ ಬೆಳಗಿಸಿದ್ದ.

ಮಾನವಶಿಲ್ಪಿ ಲೋಕ ಬೆಳಗಿಸಲು ನಡೆದಿದ್ದ.

# ಪ್ರತಿಭಾ ಗ್ರಂಥಮಾಲೆ, ಧಾರವಾಡ.

ಸಂಪಾದಕರು: **ಭಾಲಚಂದ್ರ ಘಾಣೇಕರ**

ವಾರ್ಷಿಕ ಚಂದಾ ಅಂಚೆವೆಚ್ಚ ಸೇರಿ **೭ ರೂ.** ಮಾತ್ರ.

## ೧೧ನೇ ವರುಷದ ಕಾದಂಬರಿಗಳು

| | | |
|---|---|---|
| ೧ | ಮಣ್ಣು ಮತ್ತು ಹೆಣ್ಣು— ಬಸವರಾಜ ಕಟ್ಟೀಮನಿ | ೨—೮—೦ |
| ೨ | ಹಬ್ಬಿದ ಬಳ್ಳಿ— ಕೃಷ್ಣಮೂರ್ತಿ ಪುರಾಣಿಕ | ೩—೦—೦ |
| ೩ | ಕಣ್ಣೀರಿನ ಕಡಲು— ಕೊರಟಿ ಶ್ರೀನಿವಾಸರಾವ್ | ೨—೦—೦ |
| ೪ | ಸಂಗ್ರಾಮ— ಅ. ನ. ಕೃಷ್ಣರಾಯರು | ೩—೦—೦ |
| ೫ | ಮೃಗಜಲ— ಪೆ. ಸದಾಶಿವಭಟ್ಟ | ೨—೦—೦ |

ಚಂದಾದಾರರಿಗೆ ನಮ್ಮ ಹಿಂದಿನ ಪ್ರಕಟನೆಗಳೆಲ್ಲ ಮುಕ್ಕಾಲು ಬೆಲೆಗೆ ದೊರೆಯುತ್ತವೆ.

---

## ೧೦ನೇ ವರ್ಷದಲ್ಲಿ ಪ್ರಕಟವಾದ ಪುಸ್ತಕಗಳು

| | | |
|---|---|---|
| ೧ | ಭಗತಸಿಂಗ— ದೇಶಪಾಂಡೆ | ೧—೦—೦ |
| ೨ | ಬೀದಿಯಲ್ಲಿ ಬಿದ್ದವಳು— ಬಸವರಾಜ ಕಟ್ಟೀಮನಿ | ೨—೮—೦ |
| ೩ | ಬಣ್ಣದ ಬದುಕು— ಅ. ನ. ಕೃಷ್ಣರಾಯ | ೩—೦—೦ |
| ೪ | ಬದುಕಿನ ಸುಳಿಯಲ್ಲಿ— ಸೇವ ನಮಿರಾಜಮಲ್ಲ | ೨—೦—೦ |
| ೫ | ಹಳ್ಳದಿಂದ ಹಾದಿಗೆ— ಜನಾರ್ದನ ಗುರ್ಕಾರ್ | ೧—೮—೦ |
| ೬ | ಚೋರ ಶಿಖಾಮಣಿ— ರಮೇಶ | ೧—೪—೦ |

*Pratibha Granth Mala,*
*Dharwar.*

# ಮುನ್ನುಡಿ

ವಿಶ್ವದ ಲಲಿತಕಲಾ ಇತಿಹಾಸವನ್ನು ಗಮನಿಸುವಾಗ ಶಿಲ್ಪ, ವಾಸ್ತು ಶಿಲ್ಪ, ನೃತ್ಯಗಳಲ್ಲಿ ಭಾರತೀಯರನ್ನು ಮೀರಿಸಿದವರು ಯಾರೂ ಇಲ್ಲ ಎಂಬ ನಿರ್ಧಾರಕ್ಕೆ ಬರಲೇಬೇಕಾಗುತ್ತದೆ. ಭಾರತೀಯ ಶಿಲ್ಪಗಳ ಇತಿಹಾಸ ಕ್ರಿ. ಪೂ. ಐದನೆಯ ಶತಮಾನಕ್ಕೂ ಹಿಂದಕ್ಕೆ ಹೋಗುತ್ತದೆ. ನಮಗೆ ದೊರೆತಿರುವ ಶಿಲ್ಪಗಳಲ್ಲಿ ಬಿಹಾರದಲ್ಲಿರುವ ಲೌರಿಯಾ ನಂದಘರದ ಸಮಾಧಿಗಳ ಮೇಲಣ ವಿಗ್ರಹಗಳೂ, ರಾಜಗೃಹದ ಮೌರ್ಯ - ಪೂರ್ವ ಯುಗದ ಶಿಲ್ಪಗಳು ಅತಿ ಪ್ರಾಚೀನವಾದವು. ಇವುಗಳಿಗೂ ಪೂರ್ವದಲ್ಲಿ ಶಿಲ್ಪಗಳಿದ್ದು ಕಾಲಪ್ರವಾಹದ ಸುಳಿಗೆ ಸಿಕ್ಕಿ ನಾಶವಾದುದಕ್ಕೆ ಆಧಾರಗಳಿವೆ. ತರುವಾಯದ ತಕ್ಷಶಿಲಾ, ಸಾಂಚಿ, ಸಾರನಾಥ, ಬರ್ಹುತ್ ಶಿಲ್ಪಗಳು ಕ್ರಿ. ಪೂ. ಯುಗದ ಭಾರತೀಯ ಶಿಲ್ಪದ ಅಮರ ಸೌಂದರ್ಯದ ಸಾಕ್ಷ್ಯಗಳಾಗಿವೆ.

ಮರ, ಕಲ್ಲು, ಲೋಹ ಮೂರು ಸಾಧನಗಳನ್ನೂ ಬಳಸಿಕೊಂಡು ಭಾರತೀಯರು ಶಿಲ್ಪಕಲೆಯನ್ನು ಸಾವಿರಾರು ವರ್ಷಗಳು ಬೆಳಸಿದರು. ಹದಿನೆಂಟನೆಯ ಶತಮಾನಾನಂತರ ಭಾರತೀಯ ಶಿಲ್ಪದ ಅವನತಿ ಆರಂಭವಾಯಿತು. ದಿಗ್ವಿಜಯ ಮಾಡಲು ಭಾರತಕ್ಕೆ ಬಂದ ಮುಘಲರು ಭಾರತದಲ್ಲಿಯೇ ನೆಲಸಿ ಹೊಸ ವಾಸ್ತುಶಿಲ್ಪ, ಸಂಗೀತ, ಸಾಹಿತ್ಯ ಸಂಪ್ರದಾಯಗಳನ್ನು ಬೆಳಸಿದರು. ಆದರೆ ಆಂಗ್ಲರಿಂದ ಭಾರತಕ್ಕೆ ಈ ಬಗೆಯ ಉಪಕಾರವೂ ಆಗಲಿಲ್ಲ.

ಸದ್ಯ ಭಾರತೀಯ ಶಿಲ್ಪ ನಾಮಾವಶೇಷವಾಗಿದೆ. ಮೈಸೂರಿನ ಶಿಲ್ಪ ಸಿದ್ಧಾಂತಿ ಶ್ರೀಸಿದ್ಧಲಿಂಗ ಸ್ವಾಮಿಗಳೊಬ್ಬರೇ ಈ ಹಾದಿಯಲ್ಲಿ ವಿಶೇಷವಾಗಿ ದುಡಿದು, ಗತ ಭಾರತ ಕಲೆಯ ಪುನರುಜ್ಜೀವನಕ್ಕೆ ತ್ರಿಕರಣಪೂರ್ವಕವಾಗಿ ಶ್ರಮಿಸಿದವರು. ಭಾರತದ ಇತರ ಭಾಗಗಳಲ್ಲಿ ಇಂಥ ಕೃತಪ್ರಯತ್ನ ನಡದಂತೆ ಕಂಡುಬರುವುದಿಲ್ಲ.

ವಿಲಾಯತಿ ಶಿಕ್ಷಣ ಪಡೆದು ಬರುತ್ತಿರುವ ಭಾರತದ ಶಿಲ್ಪಿಗಳು ಸಂಪೂರ್ಣವಾಗಿ ಭಾರತ ಸಂಪ್ರದಾಯದ ಕೈಬಿಟ್ಟಿದ್ದಾರೆ. ವ್ಯಕ್ತಿಚಿತ್ರಣಕ್ಕೇ

ಅವರು ಮನಸ್ಸುಗೊಟ್ಟು ಭಾರತದ ಶಿಲ್ಪಸಂಪ್ರದಾಯದ ಆದರ್ಶಗಳನ್ನು ಗಾಳಿಗೆ ತೂರಿಬಿಟ್ಟಿದ್ದಾರೆ.

ಈ ದುರಂತ ಪರಿಸ್ಥಿತಿಯಲ್ಲಿ ಭಾರತೀಯ ಶಿಲ್ಪವನ್ನು ಉಳಿಸಿಕೊಳ್ಳಲು ಪ್ರಯತ್ನಿಸಿದ ಒಬ್ಬ ಶಿಲ್ಪಿಯ ಅದ್ಭುತರಮ್ಯ ಜೀವನ ಸಂಗ್ರಾಮದ ಕಥೆಯೇ '**ಸಂಗ್ರಾಮ**'. ಭಾರತೀಯ ಸಂಪ್ರದಾಯದಲ್ಲಿ ಬೆಳೆದು ಬಂದ ಶಿಲ್ಪಿ ಶ್ರೀಕಂಠ ಲೋಭ ಮೋಹಗಳಿಗೆ ಪರವಶನಾಗಿ ಅಡ್ಡದಾರಿ ಹಿಡಿದು ಮರಳಿ ತನ್ನ ಜಾಡು ಕಂಡುಕೊಳ್ಳುವುದನ್ನು ಈ ಕಾದಂಬರಿಯಲ್ಲಿ ಬಣ್ಣಿಸಿದ್ದೇನೆ. ಕಲೆ, ಸಾಹಿತ್ಯ, ರಾಜಕಾರಣ, ಜೀವನ ಎಲ್ಲದರಲ್ಲಿಯೂ ಭಾರತೀಯರಿಗೆ 'ಭಾರತ ಮಾರ್ಗ'ವೇ ಶ್ರೇಯಸ್ಕರವೆಂಬ ನನ್ನ ಆತ್ಮಸ್ಥ ನಂಬಿಕೆಯನ್ನೇ ಇಲ್ಲಿಯೂ ಪ್ರತಿಪಾದಿಸಿದ್ದೇನೆ.

ಕಮ್ಯುನಿಸಂನ ಕ್ಷಣಿಕ ಮೋಹ, ಕಮ್ಯುನಿಸ್ಟ್‌ಪಂಥಿಗಳ ಕಟುಘೋರಣೆ ಹಾಗೂ ದಯಾ ಧರ್ಮವಿರಹಿತ ನಡವಳಿಕೆಗಳೂ '**ಸಂಗ್ರಾಮ**' ದಲ್ಲಿ ಪರ್ಯಾಯವಾಗಿ ಬಂದಿವೆ. ಭಾರತೀಯ ಲಲಿತಕಲೆಗಳ ಮೇಲೆ ಕಮ್ಯುನಿಸಂ ವಿಚಾರ ವೈಖರಿಯೂ, ಕಮ್ಯುನಿಸ್ಟರೂ ಮಾಡುತ್ತಿರುವ ಹಾವಳಿಯನ್ನು ಸೂಚಿಸುವುದೇ ನನ್ನ ಉದ್ದೇಶ. ಕಮ್ಯುನಿಸಂ ಮತ್ತು ಕಮ್ಯುನಿಸ್ಟರು ನಮ್ಮ ಪತ್ರಿಕಾ ಪ್ರಪಂಚದಲ್ಲಿ ಮಾಡುತ್ತಿರುವ ಅನಾಹುತವನ್ನು ನನ್ನ '**ಗಾಜಿನ ಮನೆ**' ಯಲ್ಲಿಯೂ ಸಾಹಿತ್ಯದಲ್ಲಿ ಮಾಡುತ್ತಿರುವ ರುದ್ರತಾಂಡವವನ್ನು ನನ್ನ '**ಕನ್ನಡಮ್ಮನ ಗುಡಿಯಲ್ಲಿ**' ಯೂ ರಾಜಕಾರಣದಲ್ಲಿ ಬೆಳೆಸುತ್ತಿರುವ ಅನಾಯಕತ್ವವನ್ನು '**ಕಾಮ್ರೇಡ್ ಗಣೇಶ್**' ಕಾದಂಬರಿಯಲ್ಲಿಯೂ ಚಿತ್ರಿಸುತ್ತೇನೆ. ಈ ದೈತ್ಯ ಸಂತಾನದ ಅಪಭ್ರಂಶ ತತ್ತ್ವ ಹಾಗೂ ಅಮಾನುಷ ವ್ಯವಹಾರ ಭಾರತ ಸಂಸ್ಕೃತಿಗೆ, ಭಾರತ ರಾಜಕಾರಣಕ್ಕೆ, ಭಾರತದ ಸ್ವಾತಂತ್ರ್ಯಕ್ಕೆ ಮೃತ್ಯುಪ್ರಾಯವಾಗಿದೆಯೆಂಬ ನನ್ನ ಸ್ಪಷ್ಟ ಅಭಿಮತವನ್ನು ನಾಲ್ಕು ಕಾದಂಬರಿಗಳಲ್ಲಿ ನಾಡವರ ಮುಂದೆ ಮಂಡಿಸಲು ನಿರ್ಧರಿಸಿದ್ದೇನೆ.

'ಶಿಲ್ಪಿ' ಯನ್ನು ಕುರಿತ ಕಾದಂಬರಿಯಲ್ಲಿ ಶಿಲ್ಪಗಳ ಬಗ್ಗೆ ವಿವರಣೆ ಬರುವುದು ಅನಿವಾರ್ಯ. '**ಸಂಗ್ರಾಮ**' ದಲ್ಲಿ ನಾನು ಚಾಮುಂಡೇಶ್ವರಿ, ಸರಸ್ವತಿ, ನಟರಾಜ, ಕೃಷ್ಣ ಪ್ರತಿಮಾಲಕ್ಷಣವನ್ನೂ ಸೂಚಿಸಿದ್ದೇನೆ. ಭಾರತೀಯ ಪ್ರತಿಮಾಲಕ್ಷಣವನ್ನು 'ಇದಮಿತ್ಥಂ' ಎಂದು ತಿಳಿಸುವ ಗ್ರಂಥವಿಲ್ಲ. ಸದ್ಯ

ದೊರೆಯುವ ಗ್ರಂಥಗಳನ್ನೂ, ಆದಷ್ಟು ಲಕ್ಷಣ ಶಿಲ್ಪಗಳನ್ನೂ ನಾನು ಗಮನಿಸಿರುವುದಲ್ಲದೆ ಕೆಳಗೆ ಕಾಣಿಸಿರುವ ಗ್ರಂಥಗಳಿಂದ ಉಪಕೃತನಾಗಿದ್ದೇನೆ.

1. Dance of Shiva : Dr. Anand Coomarswamy
2. Indian Sculpture and Painting : E. B. Havell
3. South Indian Bronzes : O. C. Ganguli
4. Indian Sculpture : Dr. Stella Kramrisch
5. Vishnudharmottaram : Ed- Dr- Stella Kramrisch
6 Indian Immajes : Brindaban C. Bhattacharya
7. Some South Indian Metal Images and their Dhyanas: S. Gopalachari
8 Elements of Hindu Iconography ( Four Volumes) : T. A. Gopinatha Rao
9. The Spendour that Was Ind : Prof. K. T. Shah
10. South Indian Images of Gods and Goddesses : H. Krishna Sastri

ವಿವಿಧ ಕಲಾವಿದರನ್ನು ಕುರಿತು ಬರೆಯಲು ನಾನು ೧೯೩೪ರಲ್ಲಿ ಆರಂಭಿಸಿದ ಕಾದಂಬರಿ ಮಾಲೆ ಈ '**ಸಂಗ್ರಾಮ**' ದೊಂದಿಗೆ ಮುಕ್ತಾಯವಾಗುತ್ತದೆ. ಈ ಕಾದಂಬರಿಯನ್ನು ಪ್ರೀತ್ಯಾದರಗಳಿಂದ ಬರಮಾಡಿಕೊಂಡು ಸುಂದರವಾಗಿ ಪ್ರಕಟಿಸಿರುವ ಶ್ರೀ. ಭಾಲಚಂದ್ರ ಘಾಣೇಕರರಿಗೆ ನನ್ನ ಕೃತಜ್ಞತೆ ಸಮರ್ಪಿಸುತ್ತೇನೆ.

**ಅ. ನ. ಕೃ.**

"ಅನ್ನಪೂರ್ಣ"
ವಿಶ್ವೇಶ್ವರಪುರಂ
ಬೆಂಗಳೂರು – ೪
೩೦—೧೧—೧೯೫೩

# ಪ್ರಕಾಶಕರ ಮಾತು

ಪ್ರತಿಭಾ ಗ್ರಂಥಮಾಲೆಯ ಈ ಹನ್ನೊಂದನೆಯ ವರುಷದಲ್ಲಿ ಶ್ರೀ ಅ. ನ. ಕೃ. ಅವರ ಈ ಸುಂದರ ಕಲಾಕೃತಿಯನ್ನು ಚಂದಾದಾರರಿಗೆ ಸಲ್ಲಿಸಲು ನಮಗೆ ಅತ್ಯಂತ ಆನಂದವಾಗುತ್ತದೆ. ಕಳೆದ ವರುಷದಲ್ಲಿ ಶ್ರೀಯುತರ 'ಬಣ್ಣದ ಬದುಕು' ಎಲ್ಲರ ಮನಸ್ಸನ್ನು ತೃಪ್ತಿಪಡಿಸಿತು. ಇದೀಗ ಈ 'ಸಂಗ್ರಾಮ' ದಿಂದ ನಮ್ಮ ಓದುಗರಿಗೆ ಇನ್ನೂ ಹೆಚ್ಚಿನ ಸಮಾಧಾನವಾಗು ದೆಂದು ನಂಬಿದ್ದೇವೆ. ಏಳು ರೂಪಾಯಿ ಚಂದಾ ಹಣದಲ್ಲಿ ಸಾವಿರ ಪುಟ ಮೇಲ್ಪಟ್ಟ ಸಾಹಿತ್ಯವನ್ನು ಚಂದಾದಾರರ ಮನೆ ಬಾಗಿಲಿಗೆ ಇಷ್ಟು ನಿಯಮಿತ ವಾಗಿ ತಲುಪಿಸುತ್ತಲಿರುವ ಗ್ರಂಥಮಾಲೆಯು ಬೇರೊಂದಿಲ್ಲವೆಂದರೆ ಅ ಯೋಕ್ತಿಯಾಗಲಾರದು. ಏಳು ರೂ. ಗಳಲ್ಲಿ ಸುಮಾರು ೨ ರೂ. ಅಂ ವೆಚ್ಚವೇ ಹೋಗುತ್ತದೆ. ಇನ್ನುಳಿದ ಐದೇ ಐದು ರೂ. ಗಳಲ್ಲಿ ಇಷ್ಟೊಂ ವಿಪುಲ ಸಾಹಿತ್ಯ ಒದಗಿಸುತ್ತ ಬಂದಿದ್ದೇವೆ. ಪುಸ್ತಕದ ಮುದ್ರಣ, ಹೊದಿಕೆಯ ಅಂದ-ಚೆಂದ ಎಲ್ಲದರ ಕಡೆಗೂ ವಿಶೇಷ ಗಮನ ಕೊಡುತ್ತಿರುವ ಮಾತನ ನಾವಾಗಿ ಹೇಳಿಕೊಳ್ಳುವದು ಆತ್ಮಪ್ರೌಢಿಮೆಯೆನಿಸಬಹುದು.

ಈ ವರ್ಷ ಈಗಾಗಲೆ ಶ್ರೀ. ಕಟ್ಟೀಮನಿಯವರ 'ಮಣ್ಣು ಮತ್ತು ಹೆಣ್ಣು', ಶ್ರೀ. ಕೊರಟಿಯವರ 'ಕಣ್ಣೀರಿನ ಕಡಲು', ಶ್ರೀ. ಪುರಾಣಿ ಕೃಷ್ಣಮೂರ್ತಿಯವರ 'ಹಬ್ಬಿದ ಬಳ್ಳಿ' ಮತ್ತು ಶ್ರೀ. ಅ. ನ. ಕೃ. ಅವರ 'ಸಂಗ್ರಾಮ' ಈ ರೀತಿ ನಾಲ್ಕು ಪುಸ್ತಕ ಸೇರಿ ೯೬೦ ಪುಟ ಸಾಹಿತ್ಯವನ್ನು ಚಂದಾದಾರರಿಗೆ ಕಳಿಸಲಾಗಿದೆ. ಇನ್ನು ಉಳಿದುದು ಕೊನೆಯ ಕಾದಂಬರಿ "ಮೃಗಜಲ". ಅದು ಸುಮಾರು ೨೫೦ ಪುಟ ಬರಬಹುದು. ಅದನ್ನು ಜುಲೈ ತಿಂಗಳ ಮೊದಲನೇ ವಾರದಲ್ಲಿ ಪ್ರಕಟಿಸಲಾಗುವದು. ಅಲ್ಲಿಗೆ ನಮ್ಮ ಹನ್ನೊಂ ದನೆ ವರುಷ ಪೂರ್ತಿಯಾಗುವದು.

ಸಾಹಿತ್ಯ ಪ್ರೇಮಿಗಳೆಲ್ಲ ಚಂದಾದಾರರಾಗಿ ಮಾಲೆಯನ್ನು ಹೆಚ್ಚಾಗಿ ಪ್ರೋತ್ಸಾಹಿಸಿದಲ್ಲಿ ಇನ್ನೂ ಹೆಚ್ಚಿನ ಸೇವೆ ಸಲ್ಲಿಸಬಹುದು.

ಈ ಸುಂದರವಾದ ಕಾದಂಬರಿಯನ್ನು ನಮ್ಮ ಮಾಲೆಯಲ್ಲಿ ಪ್ರಕಟಿಸಲು ಕೊಟ್ಟು ನೆರವಾದ ಶ್ರೀ. ಅ. ನ. ಕೃ. ಅವರಿಗೆ ನಾವು ಚಿರಋಣಿಯಾಗಿದ್ದೇವೆ.

—ಪ್ರಕಾಶಕ

